# ಹೊಯ್ಸಳ ರಾಜ ವೀರಸೋಮೇಶ್ವರ : ಒಂದು ಅಧ್ಯಯನ
## (1235-1255)

ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಶಾಸ್ತ್ರ

ಎಂ.ಫಿಲ್. ಪದವಿಗಾಗಿ ಸಾದರಪಡಿಸಿದ ನಿಬಂಧ

ಸಂಶೋಧಕ

**ಜಿ.ಎಂ. ಯೋಗೇಶ್**

ಮಾರ್ಗದರ್ಶಕರು

**ಡಾ॥. ಪ್ರಭಾಮಣಿ**



**ಕರ್ನಾಟಕ ಸಂಘ (ರಿ), ಮಂಡ್ಯ.**

**ಎಂ. ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ**

(ಕನ್ನಡ ವಿ.ವಿ. ಹಂಪಿ ಮಾನ್ಯತೆ ಪಡೆದಿದೆ)

**2007-08**

529

# ಹೊಯ್ಸಳ ರಾಜ ವೀರಸೋಮೇಶ್ವರ : ಒಂದು ಅಧ್ಯಯನ

## (1235-1255)

ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಶಾಸ್ತ್ರ

ಎಂ.ಫಿಲ್. ಪದವಿಗಾಗಿ ಸಾದರಪಡಿಸಿದ ನಿಬಂಧ


ಸಂಶೋಧಕ

**ಜಿ.ಎಂ. ಯೋಗೇಶ್**

ಮಾರ್ಗದರ್ಶಕರು

**ಡಾ||. ಪ್ರಭಾಮಣಿ**



ಒಂಗನ್ನಡ' ಗ್ರಂಥಾಲಯ
ಕನ್ನಡ ವಿಶ್ವವಿದ್ಯಾಲಯ. ಹಂಪಿ








**ಕರ್ನಾಟಕ ಸಂಘ (ರಿ), ಮಂಡ್ಯ.**

**ಎಂ. ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ**

(ಕನ್ನಡ ವಿ.ವಿ. ಹಂಪಿ ಮಾನ್ಯತೆ ಪಡೆದಿದೆ)

**2007-08**

# ಸಂಶೋಧಕನ ಪ್ರಮಾಣ ಪತ್ರ

ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರದಲ್ಲಿ 2007-08 ನೇ ಸಾಲಿಗೆ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಶಾಸ್ತ್ರದ ಎಂ.ಫಿಲ್.ಅಭ್ಯರ್ಥಿಯಾಗಿ ನಾನು ಪ್ರವೇಶ ಪಡೆದಿರುತ್ತೇನೆ. ನನ್ನ ಎಂ.ಫಿಲ್. ಅಧ್ಯಯನದ ಅಂಗವಾಗಿ ಸಂಶೋಧನಾ ನಿಬಂಧ ರಚಿಸಲು 'ಹೊಯ್ಸಳರಾಜ ವೀರಸೋಮೇಶ್ವರ ಒಂದು ಅಧ್ಯಯನ' ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು ಡಾ॥ ಪ್ರಭಾಮಣಿ ಅವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧವನ್ನು ರಚಿಸಿರುತ್ತೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಹಾಗೂ ನಿಯತಕಾಲಿಕೆಗಳಲ್ಲಿ ಪ್ರಕಟಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ : 10-09-2008
ಸ್ಥಳ : ಮಂಡ್ಯ

(ಜಿ.ಎಂ. ಯೋಗೇಶ್)
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಶಾಸ್ತ್ರ ವಿಭಾಗದ
ಎಂ.ಫಿಲ್. ಅಭ್ಯರ್ಥಿ,
ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
ಕರ್ನಾಟಕ ಸಂಘ (ರಿ), ಮಂಡ್ಯ.

# ಮಾರ್ಗದರ್ಶಕರ ಪ್ರಮಾಣಪತ್ರ

"ಹೊಯ್ಸಳ ರಾಜ ವೀರಸೋಮೇಶ್ವರ: ಒಂದು ಅಧ್ಯಯನ" ಎಂಬ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾನಿಲಯದ ಎಂ.ಫಿಲ್. ಪದವಿಗಾಗಿ ಶ್ರೀ ಜಿ.ಎಂ.ಯೋಗೇಶ್ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ:

ದಿನಾಂಕ:

R. Prabhamani

(ಡಾ. ಪ್ರಭಾಮಣಿ)

ಪ್ರೊಫೆಸರ್, ಇತಿಹಾಸ ವಿಭಾಗ,

ಟೆರಿಷಿಯನ್ ಕಾಲೇಜು

ಮೈಸೂರು

Dr. R. PRABHAMANI, M.A., Ph.D.
H.O.D. OF HISTORY
TERESIAN COLLEGE, MYSORE-1

# ವಿಷಯಸೂಚಿ

# ಅಧ್ಯಾಯ 1
# ಪ್ರವೇಶ

## ಸ್ವರೂಪ ಮತ್ತು ವ್ಯಾಪ್ತಿ

ವೀರ ಸೋಮೇಶ್ವರ ಮತ್ತು ಅವನ ಕಾಲವನ್ನು ಕುರಿತ ಮಹಾಪ್ರಬಂಧ ಇದು. ವೀರ ಸೋಮೇಶ್ವರ ಹೊಯ್ಸಳರ ರಾಜರಲ್ಲಿ ಒಬ್ಬ. ಈತನು ಆಡಳಿತ ನಡೆಸಿದ ಅವಧಿ ಕ್ರಿ.ಶ. 1235 ರಿಂದ 1255. ಈತನ ಪೂರ್ವಜರಿಗಿಂತ ಈತನ ಆಳ್ವಿಕೆಯು ಭಿನ್ನವಾಗಿತ್ತು. ಏಕೆಂದರೆ ಈತನ ಕಾಲದಲ್ಲಿ ಹೊಯ್ಸಳ ಸಾಮ್ರಾಜ್ಯವು ಒಡಕನ್ನು ಅನುಭವಿಸಿತು. ಈತನ ಕಾಲದಲ್ಲಿ ಹೊಯ್ಸಳರು ತಮಿಳುನಾಡಿಗೆ ನುಗ್ಗಿದ್ದರಿಂದ ದಕ್ಷಿಣದ ಸಂಕೀರ್ಣ ರಾಜಕೀಯದಲ್ಲಿ ಇವರ ಭಾಗವಹಿಸುವಿಕೆಯು ಈ ಕಾಲದಲ್ಲಿ ನವನವೀನ ಹಂತಕ್ಕೇರಿತು. ಡೆರೆಟ್‌ರವರು ಈತನ ಕಾಲವನ್ನು ಹೊಯ್ಸಳ ರಾಜರುಗಳ ಆಳ್ವಿಕೆಯ ಕಾಲದ ಆಡಳಿತಗಳಲ್ಲಿ ಈತನ ಕಾಲವು ದುರಂತಮಯವಾದ ಆಡಳಿತ ಕಾಲ ಎಂದು ಕರೆದಿದ್ದಾರೆ[1]

ತನ್ನ ಪೂರ್ವಜರಂತೆ ದೇಶದ ಧರ್ಮ ಹಾಗೂ ಸಂಸ್ಕೃತಿಯನ್ನು ಎತ್ತಿ ಹಿಡಿದು ಅದನ್ನು ರಕ್ಷಿಸುವ ಹೊಣೆಗಾರಿಕೆ ಉಂಟಾಗಿತ್ತು. ಈತನ ಕಾಲದಲ್ಲಿ ಹೊಯ್ಸಳ ಸಾಮ್ರಾಜ್ಯವು ತಮಿಳುನಾಡಿಗೆ ವಿಸ್ತಾರಗೊಂಡಿದ್ದರಿಂದ ಈತನ ಸಾಮ್ರಾಜ್ಯ ವಿಸ್ತಾರಗೊಂಡರೂ, ಪೂರ್ವಜರಿಗಿಂತ ಹೆಚ್ಚು ವಿಸ್ತಾರ ಗೊಳ್ಳದೇ, ಒಡಕನ್ನು ಕಂಡದ್ದು ಈತನ ಆಳ್ವಿಕೆಯ ದುರ್ದೈವವೆನ್ನಬಹುದು. ಹೊಯ್ಸಳ ರಾಜರುಗಳಲ್ಲಿ ಒಬ್ಬನಾದ ಬಿಟ್ಟಿಗ ಅಥವಾ ವಿಷ್ಣುವರ್ಧನ ಖ್ಯಾತಿಯ ಉತ್ತುಂಗಕ್ಕೆ ಏರಿದಷ್ಟನ್ನು ಬೇರೆ ಯಾವ ಹೊಯ್ಸಳ ಅರಸರು ಏರದಿರಬಹುದು. ಆದರೆ ದಕ್ಷಿಣದ ರಾಜಕೀಯ ಚದುರಂಗ ದಲ್ಲಿನ ಬದಲಾಗುವ ಮೈತ್ರಿಗಳು ಸೋಮೇಶ್ವರನ ಆಳ್ವಿಕೆಯಲ್ಲಿ ಹೆಚ್ಚು ನೆರವೇರಿರುವುದನ್ನು ಗಮನಿಸಿದಾಗ ಈತನು ಉತ್ತಮ ಅರಸರ ಸಾಲಿನಲ್ಲಿ ನಿಲ್ಲುವುದರಲ್ಲಿ ಸಂಶಯವಿಲ್ಲ.

ಸೋಮೇಶ್ವರನು ವಿಷ್ಣುವರ್ಧನನಷ್ಟು ಖ್ಯಾತಿಯನ್ನು ಹೊಂದಿಲ್ಲವಾದರೂ ತನ್ನ 20 ವರ್ಷಗಳ ಆಳ್ವಿಕೆಯಲ್ಲಿ ಹಲವಾರು ಮೈತ್ರಿಗಳ ಮೂಲಕ ನೆಮ್ಮದಿಯನ್ನು, ರಾಜ್ಯದಲ್ಲಿ ಉತ್ತಮ ಆಡಳಿತವನ್ನು ನೀಡಿದ್ದಾನೆ. ಈತನು ನೀಡಿದ ಕೊಡುಗೆಗಳ ಬಗ್ಗೆ ಸಮಗ್ರವಾಗಿ ತಿಳಿಯಲು ಅಧ್ಯಾಯದ ಕೊರತೆಯಿತ್ತು. ಈತನು ಹೊಯ್ಸಳರ ರಾಜರುಗಳಲ್ಲಿ ಒಬ್ಬ ಪ್ರಮುಖ ನಾಯಕನಾಗಿ ಹಲವಾರು ಪ್ರತಿರೋಧಗಳ ನಡುವೆ ಜಯ ಅಪಜಯ ಅನುಭವಿಸಿ, ಸಾಮ್ರಾಜ್ಯವನ್ನು

ಕ್ರೋಢೀಕರಿಸಿದನು ಮತ್ತು ಕಲೆ ಸಾಹಿತ್ಯಗಳನ್ನು ಪೋಷಿಸಿದನು. ಆ ಬಗ್ಗೆ ತಿಳಿದುಕೊಳ್ಳುವುದೇ ಈ ಮಹಾಪ್ರಬಂಧದ ಮುಖ್ಯ ಉದ್ದೇಶವಾಗಿದೆ.

ವೀರ ಸೋಮೇಶ್ವರನ ಜೀವನವು ಅನೇಕ ಘಟನೆಗಳಿಂದ ಕೂಡಿದ್ದು, ಸ್ವಾರಸ್ಯಕರವಾಗಿದೆ. ಅವನು ಉತ್ಸಾಹಿಯೂ, ಕ್ರಿಯಾಶೀಲನೂ ದೂರದೃಷ್ಟಿಯುಳ್ಳವನೂ ಆಗಿದ್ದನು. "ವಿಶೇಷವಾಗಿ ನಿರೂಪಿಸಬಹುದಾದ ಏನನ್ನು ಮಾಡದ" ತನ್ನ ತಂದೆ ಎರಡನೇ ನರಸಿಂಹನ ನಂತರ ಪಟ್ಟಕ್ಕೆ ಬಂದು ಅವನು ದೇಶವನ್ನು ಸಮರ್ಥವಾಗಿ ರಕ್ಷಿಸಿದನು.[2]

ವೀರ ಸೋಮೇಶ್ವರನ ಆಳ್ವಿಕೆಯು ಶ್ರೇಷ್ಠತೆಯನ್ನು ಹೊಂದಿರುವಂತೆ, ತೊಡಕಿನಿಂದಲೂ ಕೂಡಿತ್ತು. ಉತ್ತಮ ನಿರ್ಧಾರ, ಕಲೆ, ಸಾಹಿತ್ಯಕ್ಕೆ ನೀಡಿದ ಪ್ರೋತ್ಸಾಹಗಳಿಂದ ಶ್ರೇಷ್ಠ. ಈತನು ಆಡಳಿತದ ಅನುಕೂಲಕ್ಕಾಗಿ ಸಾಮ್ರಾಜ್ಯ ವಿಭಜಿಸಿದ್ದು, ತಮಿಳುನಾಡಿನಲ್ಲಿ ಸಾಮ್ರಾಜ್ಯ ವಿಸ್ತರಿಸಿ, ಎರಡು ಕಡೆ ಆಡಳಿತ ನಡೆಸಿದ್ದು, ಸ್ವಲ್ಪಮಟ್ಟಿಗೆ ಅವನ ರಾಜ್ಯಾಡಳಿತ ನೀತಿ ಈ ಅಂಶಗಳ ಬಗೆಗೆ ಭಿನ್ನಾಭಿಪ್ರಾಯಗಳಿವೆ. ಈ ವಿವಾದಾತ್ಮಕ ಅಂಶಗಳನ್ನು ಸೃಷ್ಟಿಪಡಿಸುವ ಪ್ರಯತ್ನವನ್ನು ಪ್ರಸ್ತುತ ಕೃತಿಯಲ್ಲಿ ಕೈಗೊಳ್ಳಲಾಗಿದೆ. ಅವನ ಜೀವನ ಮತ್ತು ಆಳ್ವಿಕೆಯ ಮುಖ್ಯಾಂಶಗಳನ್ನು ಅವನ ಕಾಲದ ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಪರಿಸ್ಥಿತಿಗಳ ವಿಶೇಷ ಉಲ್ಲೇಖಕ್ಕೆ ಸಂಬಂಧಿಸಿದಂತೆ ನಿರೂಪಿಸಲಾಗಿದೆ.[3]

ಈ ಕೃತಿಯಲ್ಲಿ ಒಂಭತ್ತು ಅಧ್ಯಾಯಗಳಿವೆ. ಪ್ರವೇಶ ಅಧ್ಯಾಯ ವಿಷಯದ ಸ್ವರೂಪ ಮತ್ತು ವ್ಯಾಪ್ತಿಗಳನ್ನು ನಿರೂಪಿಸುತ್ತದೆ. ಮೂಲಗಳ ಸಮೀಕ್ಷೆ ಮತ್ತು ವಿಷಯಕ್ಕೆ ಹಿನ್ನಲೆಯಾಗಿ ವೀರ ಸೋಮೇಶ್ವರನು ಅರಸನಾಗುವುದಕ್ಕೆ ಮುಂಚಿನ ಹೊಯ್ಸಳ ಸಾಮ್ರಾಜ್ಯದ ಸಂಕ್ಷಿಪ್ತವಾದ ನಿರೂಪಣೆ ಬರುತ್ತವೆ. ಎರಡನೆಯ ಅಧ್ಯಾಯವು ವೀರ ಸೋಮೇಶ್ವರನ ಪ್ರಾರಂಭಿಕ ಜೀವನ ಅವನ ಸಿಂಹಾಸನರೋಹಣ ಆಳ್ವಿಕೆಯ ಕಾಲಾವಧಿ, ಕೌಟುಂಬಿಕ ಜೀವನ, ಅವನ ಬಿರುದು ಬಾವಲಿಗಳು ಇವೇ ಮುಂತಾದ ವಿಚಾರಗಳನ್ನು ಒಳಗೊಂಡಿದೆ. ಮೂರನೆಯ ಅಧ್ಯಾಯದಲ್ಲಿ ಆತನ ಕಾಲದಲ್ಲಿ ಆಡಳಿತ ಪದ್ಧತಿ ಯಾವ ಮಾದರಿಯಲ್ಲಿ ಇತ್ತು? ಈತನು ಚೋಳ, ಚೇರ, ಪಾಂಡ್ಯರ ಜೊತೆ ಯಾವ ರೀತಿಯ ಮೈತ್ರಿಯನ್ನು ಹೊಂದಿದ್ದ?, ಹಾಗೂ ತಮಿಳುನಾಡಿನಲ್ಲಿ ಈತನು ತನ್ನ ಆಡಳಿತವನ್ನು ಹೇಗೆ ನಡೆಸಿದ. ಹೀಗೆ ಇಂತಹ ಹಲವಾರು ವಿಚಾರಗಳನ್ನು ~~ಈ ಅಧ್ಯಾಯವು~~ ಒಳಗೊಂಡಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಹೊಯ್ಸಳರ ರಾಜ ವೀರ ಸೋಮೇಶ್ವರನ ಕಾಲದ ಆರ್ಥಿಕ ಪರಿಸ್ಥಿತಿಯ ಬಗ್ಗೆ ವಿವರಣೆ ನೀಡಲಾಗಿದೆ. ಈತನ ಕಾಲದ ಕೃಷಿ, ಕೈಗಾರಿಕೆ, ಹಣಕಾಸು, ವ್ಯಾಪಾರ. ವಾಣಿಜ್ಯ, ತೆರಿಗೆ ನೀತಿ ಮೊದಲಾದ ವಿಚಾರ ಧಾರೆಗಳ ಕುರಿತು ~~ಈ ಅಧ್ಯಾಯದಲ್ಲಿ~~ ಚರ್ಚಿಸಲಾಗಿದೆ. ಐದನೆಯ ಅಧ್ಯಾಯದಲ್ಲಿ ಈತನ ಕಾಲದಲ್ಲಿ ಯಾವ ರೀತಿಯ ಸಮಾಜ ನಿರ್ಮಾಣವಾಗಿತ್ತು. ಅಂದಿನ ಜನರ ಆಹಾರ, ಉಡುಗೆ ತೊಡುಗೆ, ದೈನಂದಿನ ಜೀವನ, ಹಬ್ಬಹರಿದಿನಗಳು ಹಾಗೂ ವಿಶೇಷವಾಗಿ ಆಚರಣೆಯಲ್ಲಿ ಇದ್ದ "ಗರುಡರು" ಬಗ್ಗೆ ವಿವರಿಸಲಾಗಿದೆ.

ಆರನೆಯ ಅಧ್ಯಾಯದಲ್ಲಿ ಈತನ ಕಾಲದಲ್ಲಿ ಬೆಳವಣಿಗೆ ಹೊಂದಿದ ಶಿಕ್ಷಣ, ಪ್ರಗತಿ ಹೊಂದಿದ ಸಾಹಿತ್ಯ, ಅದರ ಬೆಳವಣಿಗೆ ಬಗ್ಗೆ ವಿಶ್ಲೇಷಿಸಲಾಗಿದೆ. ಏಳನೆಯ ಅಧ್ಯಾಯದಲ್ಲಿ ಈತನ ಕಾಲದ ಧರ್ಮದ ಬಗ್ಗೆ ವಿವರಿಸಲಾಗಿದೆ. ಈತ ಒಬ್ಬ ಶೈವ ಮತದವನಾಗಿದ್ದು, ಯಾವ ಯಾವ ಧರ್ಮಗಳಿಗೆ ರಕ್ಷಣೆ ನೀಡಿ ಪೋಷಿಸಿದ, ಹಾಗೂ ಮುಂತಾದ ವಿಚಾರಗಳ ಬಗ್ಗೆ ಈ ಅಧ್ಯಾಯದಲ್ಲಿ ವಿವರಿಸಲಾಗಿದೆ. ಎಂಟನೆಯ ಅಧ್ಯಾಯವು ಕಲೆ ಮತ್ತು ವಾಸ್ತುಶಿಲ್ಪದ ಬೆಳವಣಿಗೆಯನ್ನು ಚರ್ಚಿಸುತ್ತದೆ. ಸಮೀಕ್ಷೆಯ ಫಲಿತಾಂಶಗಳನ್ನು ಸಮಾರೋಪ ಅಧ್ಯಾಯದ ಉಪಸಂಹಾರದಲ್ಲಿ ಕೊಡಲಾಗಿದೆ.

## ಮೂಲಗಳ ಸಮೀಕ್ಷೆ

**ಅ) ಶಾಸನಗಳು**: ಶಾಸನಗಳೇ ನಮ್ಮ ಅಧ್ಯಾಯದ ಅತ್ಯಂತ ಮುಖ್ಯ ಅಧಿಕೃತ ಮೂಲವಾಗಿವೆ. ವೀರ ಸೋಮೇಶ್ವರನಿಗೆ ಸಂಬಂಧಿಸಿದ ಶಿಲಾ ಶಾಸನಗಳು ದಕ್ಷಿಣ ಭಾರತದಾದ್ಯಂತ ಕರ್ನಾಟಕ, ತಮಿಳುನಾಡು ಪ್ರದೇಶಗಳಲ್ಲಿ ಚದುರಿಕೊಂಡಿವೆ. ಅವು ಆ ಕಾಲದ ರಾಜಕೀಯ, ಸಾಮಾಜಿಕ, ಧಾರ್ಮಿಕ ಮತ್ತು ಆರ್ಥಿಕ ಜೀವನಗಳ ಮೇಲೆ ಬೇಕಾದಷ್ಟು ಬೆಳಕು ಚೆಲ್ಲುತ್ತವೆ. ದೇಶದ ರಾಜಕೀಯ ವಿಭಾಗಗಳನ್ನು ಕುರಿತ ವಿವರಗಳು, ಸಾಮ್ರಾಜ್ಯದ ಸಾಮಂತರ ಹಾಗೂ ಇತರ ಅಧಿಕಾರಿ ಗಳ ಹೆಸರುಗಳು, ಜನರ ಧಾರ್ಮಿಕ ಮತ್ತು ಸಾಮಾಜಿಕ ಆಚರಣೆಗಳು ಸ್ಥಳೀಯ ಸಂಸ್ಥೆಗಳು ಮತ್ತು ಸ್ಥಳೀಯ ಆಡಳಿತ ಹಾಗೂ ಮಧ್ಯಕಾಲೀನ ರಾಜ್ಯಾಡಳಿತ ಮತ್ತು ಸಮಾಜವನ್ನು ಕುರಿತಂತೆ ಅನೇಕ ಸ್ವಾರಸ್ಯಕರ ವಿಷಯಗಳು ಈ ಶಾಸನಗಳಿಂದ ದೊರಕುತ್ತವೆ. ಶಿಲಾಶಾಸನಗಳು ಬಹುತೇಕ ಕೊಡುಗೆಗಳು ಮತ್ತು ದತ್ತಿಗಳು, ವೀರಗಲ್ಲುಗಳು, ನಿಷದಿಕಲ್ಲುಗಳು, ಧಾರ್ಮಿಕ ಸ್ಮಾರಕ ಶಿಲೆಗಳು ಮತ್ತು ಸತಿಕಲ್ಲುಗಳ ರೂಪದಲ್ಲಿವೆ. ವೀರಗಲ್ಲುಗಳು ನಮಗೆ ಅವು ದೊರೆತಿರುವ ಸ್ಥಳದಲ್ಲಿ ನಡೆದ

ಕಾಳಗಗಳ ಇಣುಕು ನೋಟ ಚೆಲ್ಲುತ್ತವೆ. ಶಾಸನಗಳು ಸಾಮಾನ್ಯವಾಗಿ ಘಟನೆಗಳು ಸಂಭವಿಸಿದ ದಿನವನ್ನು ಯಾವ ರಾಜನ ಆಳ್ವಿಕೆಯಲ್ಲಿ ಅವು ಘಟಿಸಿದವು ಎಂಬುದನ್ನು ವಿವರವಾಗಿ ತಿಳಿಸುತ್ತವೆ. ಸಾಮಾನ್ಯವಾಗಿ ಶಿಲಾಶಾಸನಗಳಲ್ಲಿ ಮೊದಲಿಗೆ ಆಗ ಆಳುತ್ತಿರುವ ರಾಜನ ವಂಶ ವರ್ಣನೆ ಇದ್ದರೆ, ಕೊನೆಯ ಭಾಗದಲ್ಲಿ ದಾನಿ ಮತ್ತು ಪ್ರತಿಗ್ರಹಿಗಳ ಹೆಸರುಗಳು, ಕೊಡುಗೆಯ ವಿವರ ಮತ್ತು ಶೇದಿ, ದಾನದ ನಿಯಮಗಳನ್ನು ಪಾಲಿಸದೆ ಹೋದರೆ ಉಂಟಾಗುವ ನೈತಿಕ ಪರಿಣಾಮಗಳು ಈ ದಾಖಲೆಗಳಿರುತ್ತವೆ. ಶಾಸನತಜ್ಞ ಬಿ.ಎಲ್.ರೈಸ್ ಹೇಳುವಂತೆ 'ಶಾಸನಗಳಿಮದ ವೈವಿಧ್ಯಪೂರ್ಣ ವಿವರಗಳನ್ನು ಕೊನೆಯೇ ಇಲ್ಲದಂತೆ ಸಂಗ್ರಹಿಸಬಹುದು" ಎಂಬ ಮಾತು ಶಾಸನಗಳ ವಿಚಾರದಲ್ಲಿ ಸರ್ವಕಾಲಿಕ ಸತ್ಯವಾಗಿದೆ.[4]

**ಆ. ನಾಣ್ಯಗಳು**: ನಾಣ್ಯಗಳು ನಮ್ಮ ಅಧ್ಯಾಯದ ಮೇಲೆ ಹೆಚ್ಚಿನ ಬೆಳಕನ್ನು ಚೆಲ್ಲುತ್ತವೆ. ನಾಣ್ಯಗಳ ಮೇಲಿರುವ ಚಿಹ್ನೆಗಳು, ಚಿತ್ರಗಳು, ಅವುಗಳಲ್ಲಿ ಕೆತ್ತಿರುವ ವಿವರ, ಅಳತೆ ಮತ್ತು ಆಕಾರಗಳು ರಾಜವಂಶಗಳ ಅಧ್ಯಾಯಕ್ಕೆ ಬೇಕಾದಷ್ಟು ಕೊಡುಗೆ ನೀಡಿದೆ. ಹೊಯ್ಸಳ ಅರಸರುಗಳಲ್ಲಿ ನಾಣ್ಯ ಗಳನ್ನು ಟಂಕಿಸದ ವರ್ಷದ ನಮೂದನೇ ಇರದೇ ಹೋದರೂ ಅವುಗಳನ್ನು ಚಲಾವಣೆಗೊಳಿಸದ ರಾಜರನ್ನು ಗುರುತಿಸುವುದರಲ್ಲಿ ಹಾಗೂ ಅವುಗಳಲ್ಲಿರುವ ಚಿನ್ಹೆಯ ಮಹತ್ವವನ್ನು ಕಂಡು ಹಿಡಿಯುವುದರಲ್ಲಿ ಶಾಸನಗಳೊಂದಿಗೆ ಅವು ನೆರವಾಗುತ್ತವೆ.

**ಇ. ಸಾಹಿತ್ಯಿಕ ಆಧಾರ**: ಸಾಹಿತ್ಯಿಕ ಆಧಾರವು ನಮ್ಮ ಅಧ್ಯಾಯದ ಇನ್ನೊಂದು ಮುಖ್ಯವಾದ ಮೂಲ. ಇವುಗಳನ್ನು ದೇಶೀಯ ಹಾಗೂ ವಿದೇಶೀಯವೆಂದು ಎರಡು ಭಾಗಗಳಾಗಿ ವಿಂಗಡಿಸಬಹುದು.

(1) **ದೇಶೀಯ**: ಹೊಯ್ಸಳ ಚಕ್ರವರ್ತಿಗಳು ತಮ್ಮ ಪೂರ್ವಜರು ಹಾಕಿಕೊಟ್ಟ ಮಾರ್ಗದರ್ಶನದಲ್ಲೇ, ಕಾನೂನುಗಳನ್ನು ಜಾರಿಗೆ ತರುವಲ್ಲಿ, ಸಾಮಾಜಿಕ ಹಾಗೂ ಧಾರ್ಮಿಕ ಸಂಸ್ಥೆಗಳನ್ನು ರಕ್ಷಿಸುವಲ್ಲಿ ನಿರತರಾಗಿದ್ದರು. ಇವರು ಬ್ರಾಹ್ಮಣರು ಹಾಗೂ ಬುದ್ಧಿ ಜೀವಿಗಳಿಂದ ಸುತ್ತುವರಿಯಲ್ಪಟ್ಟಿದ್ದು ಉತ್ತಮ ಆಡಳಿತಕ್ಕೆ ಪ್ರಯತ್ನಿಸುತ್ತಿದ್ದರು. ಸಾರಂಗದೇವ, ಮಿತಾಕ್ಷರ, ವಿಜ್ಞಾನೇಶ್ವರ ಧರ್ಮ ಸಂಹಿತೆಗಳು ಆಡಳಿತ, ನ್ಯಾಯಪದ್ಧತಿ, ಧಾರ್ಮಿಕ ಹಾಗೂ ಸಾಮಾಜಿಕ ವ್ಯವಸ್ಥೆಗಳ ಅಧ್ಯಾಯಕ್ಕೆ ಉಪಯುಕ್ತವಾದ ಮೂಲಗಳಾಗಿವೆ. ವೀರ ಸೋಮೇಶ್ವರನ ಕಾಲದಲ್ಲಿದ್ದ ಕವಿ ಮಲ್ಲಿಕಾರ್ಜುನನು ರಚಿಸಿದ 'ಸೂಕ್ತಿಸುಧಾರ್ಣವ' ಎಂಬ ಕನ್ನಡ ಕಾವ್ಯ ಕುಸುಮಾಂಜಲಿಯು ಹಲವಾರು ವಿಷಯಗಳನ್ನು

ಒಳಗೊಂಡಿದೆ. ಇದರಲ್ಲಿ ಬರುವ 'ಮಂತ್ರವರ್ಣಂ' ಎಂಬ ಆಡಳಿತ ನೀತಿಗೆ ಸಂಬಂಧಿಸಿದ ಅಧ್ಯಾಯವು ಆಡಳಿತದ ಬಗ್ಗೆ ತಿಳಿಯಲು ನಮಗೆ ಸಹಕಾರಿಯಾಗಿದೆ. ರಾಜನು ಜನರ ಅವಶ್ಯಕತೆ ಗಳನ್ನು ಈಡೇರಿಸಬೇಕು. ಅವನು ತಪ್ಪಿತಸ್ಥರನ್ನು ತಕ್ಷಣವೇ ಶಿಕ್ಷಿಸಬೇಕು. ಇಲ್ಲದಿದ್ದಲ್ಲಿ ಗಂಭೀರ ಪರಿಣಾಮಗಳು ಎದುರಾಗುವುದೆಂದು ತಿಳಿಸಿದೆ. ರಾಜನು ಕಂದಾಯವನ್ನು ನ್ಯಾಯಯುತವಾಗಿ ತೆಗೆದುಕೊಳ್ಳಬೇಕು. ಸರ್ಕಾರಿ ಕಛೇರಿಗಳಲ್ಲಿ ದೈನಂದಿನ, ವಾರದ, ಪ್ರಾಕ್ಷಿಕ, ಮಾಸಿಕ ಮತ್ತು ವಾರ್ಷಿಕ ಲೆಕ್ಕಪತ್ರಗಳನ್ನು ಇಡಬೇಕು. ಹೀಗೆ ಇವೇ ಮೊದಲಾದ ವಿಚಾರಗಳನ್ನು ಈ ಕೃತಿಯು ಹೊಂದಿದ್ದ ಮಾಹಿತಿಯನ್ನು ಒದಗಿಸುತ್ತದೆ.[5]

ವೀರ ಸೋಮೇಶ್ವರನ ತಂದೆಯಾದ ಎರಡನೇ ನರಸಿಂಹನ ಕಾಲದಲ್ಲಿ ವಿದ್ಯಾಚಕ್ರವರ್ತಿ ರಚಿಸಿದ 'ಗದ್ಯಕರ್ಣಾಮೃತ'ವೆಂಬ ಕೃತಿಯು ಹೊಯ್ಸಳರು ಪಾಂಡ್ಯರೊಂದಿಗೆ ನಡೆಸಿದ ಯುದ್ಧಗಳ ಬಗ್ಗೆ ಸೊಗಸಾಗಿ ತಿಳಿಸುತ್ತದೆ. ಈ ಕೃತಿಯು ಸೋಮೇಶ್ವರನಿಗೆ ವಿವಿಧ ರಾಜರುಗಳೊಂದಿಗೆ ಮೈತ್ರಿ ಯನ್ನು ಏರ್ಪಡಿಸಿಕೊಳ್ಳಲು ಸಹಕಾರಿಯಾಯಿತೆನ್ನಬಹುದು.[6]

ಸೋಮೇಶ್ವರನ ಕಾಲದಲ್ಲಿ ವಿದೇಶಿಯ ಬರವಣಿಗೆಗಳು ಪ್ರಾಮುಖ್ಯತೆ ವಹಿಸಿಲ್ಲ. ಆ ಕಾಲದಲ್ಲಿ ಯಾವ ವಿದೇಶಿ ಬರಹಗಾರರು ಕಾಣಸಿಗಲಾರರು.

### ಟಿಪ್ಪಣಿಗಳು ಮತ್ತು ಉಲ್ಲೇಖಗಳು


1) Derrett: The Hoysalas P.304
2) ಅದೇ ಪುಟ 305
3) Derrett: "The Hoysalas: A Medieval Indian Royal Family (1957) P.117
4) Rice B.Louie: Mysore and Coorg from Inscriptions (London, 1905) P.184
5) Dr. N.Savartri: Ruling and Rural elites in the Maidan Region under the Hoysalas (1000-1300 A.D) P.16
6) ಅದೇ ಪುಟ 17

# ಅಧ್ಯಾಯ-2
# ವೀರ ಸೋಮೇಶ್ವರ ಒಂದು ವ್ಯಕ್ತಿ ಚಿತ್ರ

## ಆರಂಭದ ಜೀವನ

ವೀರ ಸೋಮೇಶ್ವರನು ಸಿಂಹಾಸನರೋಹಣನಾಗುವವರೆಗೆ ಆತನ ಜೀವನದ ಮೇಲೆ ಬೆಳಕು ಬೀರುವ ಶಾಸನ ಹಾಗೂ ಸಾಹಿತ್ಯಿಕ ಆಧಾರಗಳ ಕೊರತೆಯಿರುವುದರಿಂದ ಅವನ ಜನನ ವರ್ಷ ವನ್ನಾಗಲಿ, ಪ್ರಾರಂಭಿಕ ಚಟುವಟಿಕೆಗಳನ್ನಾಗಲಿ ನಿಖರವಾಗಿ ತಿಳಿಯಪಡಿಸುವ ದಾಖಲೆಗಳು ದೊರಕುವುದಿಲ್ಲ. ಸದಾ ಚಟುವಟಿಕೆಯಿಂದ, ಉತ್ಸಾಹದಿಂದ ಕೂಡಿರುತ್ತಿದ್ದ ವೀರ ಸೋಮೇಶ್ವರನು ತನ್ನ ತಂದೆಯಾದ ಎರಡನೇ ನರಸಿಂಹನ ಆಡಳಿತದಲ್ಲಿ, ಅವನ ಅಲ್ಪ ಕಾಲದ ಆಳ್ವಿಕೆಯಲ್ಲೂ ನೆರವಾಗಿದ್ದನು.

ಹೊಯ್ಸಳ ಮನೆತನದ ಪ್ರಾರಂಭದ ವರ್ಷಗಳಲ್ಲಿ ಸಹ ಆಳ್ವಿಕೆಯ ವ್ಯವಸ್ಥೆಯು ಸಾಮಾನ್ಯ ವಾಗಿದ್ದಂತೆ ತೋರುತ್ತದೆ. ಯುವರಾಜನು ತನ್ನ ತಂದೆಗೆ ಆಡಳಿತದಲ್ಲಿ ಸಹಾಯಕನಾಗಿ ನೆರವು ನೀಡುವುದು ಸಾಮಾನ್ಯವಾಗಿತ್ತು. ಅಳುತ್ತಿರುವ ಮಹಾರಾಜನು ತನ್ನ ನಂತರ ಯಾರು ರಾಜನಾಗ ಬೇಕೆಂದು ನಿರ್ಧರಿಸಿ ಅವನನ್ನು ಯುವರಾಜನನ್ನಾಗಿ ನೇಮಿಸುತ್ತಿದ್ದನು. ಈ ಪದ್ಧತಿಯು ಪ್ರಾಚೀನ ಮತ್ತು ಹೊಯ್ಸಳರ ನಂತರದ ಭಾರತೀಯ ಸಾಮ್ರಾಜ್ಯಗಳಲ್ಲಿ ಸಾಮಾನ್ಯವಾದುದಾಗಿತ್ತು. ಈ ಪದ್ಧತಿಯು ವಿಜಯನಗರ ಕಾಲದಲ್ಲಿ ಇದ್ದಿತು. ಯುವರಾಜ ಅಥವಾ ಮಹಾರಾಜನ ಹಿರಿಯ ಮಗನು ತನ್ನ ತಂದೆಯ ಜೀವಿತ ಕಾಲದಲ್ಲಿಯೂ ಆಡಳಿತದಲ್ಲಿ ಸಹಕಾರಿಯಾಗುತ್ತಿದ್ದನು. ಆ ಕಾಲದ ಅನೇಕ ಶಾಸನಗಳಲ್ಲಿ ಈ ಪದ್ಧತಿಯನ್ನು ಸೂಚಿಸಲಾಗಿದೆ. ವಿಲ್ಸನ್‌ಯೆಂಬ ಇತಿಹಾಸಗಾರ ಅಭಿಪ್ರಾಯಪಡುವಂತೆ 'ಹಿಂದೂ ಇತಿಹಾಸದಲ್ಲಿ ಬಹು ಪ್ರಾಚೀನ ಕಾಲದಿಂದ ರೂಢಿಯಲ್ಲಿದ್ದ, ಚಕ್ರವರ್ತಿಯು ತನ್ನ ಆಳ್ವಿಕೆಯ ಕೊನೆ ಕೊನೆಗೆ ಮಗನೊಂದಿಗೆ ಸಹ ಆಡಳಿತ ನಡೆಸುವುದು ಅವನನ್ನು ಯುವರಾಜನೆಂದು ನಾಮಕರಣ ಮಾಡುವುದು ಆಗಲೂ ಚಾಲ್ತಿಯಲ್ಲಿದ್ದಿತೆಂಬುದನ್ನು ಅವು ಸೂಚಿಸುತ್ತವೆ. ದಕ್ಷಿಣ ಭಾರತದ ಅನೇಕ ರಾಜವಂಶಗಳಿಗೆ ಇದು ಅನ್ವಯಿಸುತ್ತದೆ. ಯುವರಾಜನಿಗೆ ನಿರ್ದಿಷ್ಟ ಕರ್ತವ್ಯಗಳಿದ್ದುವು. ಯುದ್ಧಗಳಲ್ಲಿ ಮತ್ತು ಆಡಳಿತದಲ್ಲಿ ಅವನು ರಾಜನಿಗೆ ಸಹ ರೀಜೆಂಟ್ ಆಗಿ ಅಥವಾ ರಾಜನ ಪರವಾಗಿ ರಾಜ್ಯದ ಯಾವುದೋ ಒಂದು ಪ್ರಾಂತ್ಯವನ್ನು ಆಳುತ್ತಿದ್ದ ನೆಂದು ಹೇಳಿದ್ದಾರೆ. ವೀರ ಸೋಮೇಶ್ವರನು ಎರಡನೇ ನರಸಿಂಹನ ಮಗನಾಗಿದ್ದು ಅವನು ಕ್ರಿ.ಶ. 1228ರಿಂದ ತಮಿಳುನಾಡಿನ ಪ್ರದೇಶಗಳ ಪ್ರಾಂತ್ಯಾಧಿಕಾರಿಯಾಗಿ ತನ್ನ ತಂದೆಯೊಂದಿಗೆ ಆಳುತ್ತಿದ್ದನು.

ಹೊಯ್ಸಳ ಮನೆತನದ ಹಲವು ರಾಜರ ವಿಷಯದಲ್ಲಿ ಈ ಸಹ ಆಳ್ವಿಕೆಯ ಪದ್ಧತಿಯು ಘಟಿಸಿದ್ದಿತಾದುದರಿಂದ, ಚೋಳ, ಚೋರ, ವಿಜಯನಗರ ಮತ್ತು ದಕ್ಷಿಣ ಭಾರತದ ಇತರ ರಾಜವಂಶಗಳಲ್ಲಿಯಂತೆಯೇ ಅವರಲ್ಲೂ ರೂಢಿಯಲ್ಲಿದ್ದ ಪದ್ಧತಿ ಎಂದು ತಿಳಿದುಕೊಳ್ಳಬಹುದಾಗಿದೆ.

## ವೀರ ಸೋಮೇಶ್ವರನ ಆಡಳತಾವಧಿ

ಹೊಯ್ಸಳ ಮನೆತನದ ಇತಿಹಾಸವನ್ನು ಅಧ್ಯಾಯ ಮಾಡಿದ ಮೊದಲಿಗ ವೀರ ಸೋಮೇಶ್ವರನ ಆಡಳಿತಾವಧಿಯನ್ನು ನಿರ್ಧರಿಸುವುದು ಸ್ವಲ್ಪ ಕಷ್ಟವಾಗಿತ್ತು. ಏಕೆಂದರೆ ಆಗ ಸಾಕಷ್ಟು ಮಾಹಿತಿಗಳು ಹಾಗೂ ಅದಕ್ಕೆ ಬೇಕಾದಂತಹ ಉಪಲಬ್ಧಗಳು ದೊರಕಿರಲಿಲ್ಲ.

ಕ್ರಿ.ಶ. 1237ರಲ್ಲಿ ಕೊಳ್ಳೇಗಾಲ ತಾಲ್ಲೂಕಿನ ಮುಡಿಗೊಣ್ಣನ ಹಳ್ಳಿಯಲ್ಲಿ ದೊರೆತಿರುವ ತಮಿಳು ಶಾಸನವೊಂದು ಈತನು ಅಧಿಕಾರಕ್ಕೆ ಬಂದದ್ದು ಕ್ರಿ.ಶ. 1237, ನವೆಂಬರ್ 24 ಎಂದು ನಮೂದಿಸಿದೆ.[1] ವೀರ ಸೋಮೇಶ್ವರನ ಆಡಳಿತಾವಧಿಯ ಬಗ್ಗೆ ನಿಖರವಾಗಿ ಮಾಹಿತಿಗಳು ದೊರೆಯುವುದಿಲ್ಲ. ಈತನು ಕ್ರಿ.ಶ. 1228ರಲ್ಲಿ ತನ್ನ ತಂದೆಯ ಕಾಲದಲ್ಲಿ ಪ್ರಾಂತ್ಯಾಧಿಕಾರಿಯಾಗಿ ಕಾರ್ಯ ನಿರ್ವಹಿಸುತ್ತಿದ್ದ, ನಂತರ ಕ್ರಿ.ಶ. 1236ರಲ್ಲಿ ಈತನ ಅಧಿಕಾರಾವಧಿಯಲ್ಲಿ ಸೋಮೇಶ್ವರನ ದಂಡನಾಯಕನಾದ ಕಾವೇರಿ ನಾಯಕನ ನಾಯಕತ್ವದಲ್ಲಿ ಸೇವುಣರನ್ನು ತುಂಗಭದ್ರಾ ಪ್ರದೇಶದಲ್ಲಿ ಸೋಲಿಸಿ, ಕೃಷ್ಣಾ ನದಿಯವರೆಗೂ ಬೆನ್ನಟ್ಟಿದುದ್ದು, ಸೋಮೇಶ್ವರನು ಸೋಲಾಪುರದ ಬಳಿಯ ಪಂಡರಾಪುರದ ದೇವಾಲಯಕ್ಕೆ ದಾನ ನೀಡಿದ ಸಂಗತಿಯು ಅಲ್ಲಿ ದೊರೆತಿರುವ ಶಾಸನವೊಂದರಿಂದ ತಿಳಿದು ಬಂದಿರುವುದರಿಂದ ಸೋಮೇಶ್ವರನ ಕಾಲಾವಧಿಯು ಕ್ರಿ.ಶ. 1255ಕ್ಕೆ ಕೊನೆಗೊಂಡಿತೆಂದು ನಿರ್ಣಯಿಸಬಹುದಾಗಿದೆ.[2]

## ವೀರ ಸೋಮೇಶ್ವರನ ಬಿರುದುಗಳು

ಬಹು ಪ್ರಾಚೀನ ಕಾಲದಿಂದಲೂ ರಾಜ ಮಹಾರಾಜರು ತಮ್ಮ ವ್ಯಕ್ತಿತ್ವಕ್ಕೆ ಶೋಭಿಸುವಂತೆ ಬಿರುದು ಬಾವಲಿಗಳನ್ನು ರಾಜ ಲಾಂಛನಗಳನ್ನು ಇಟ್ಟುಕೊಳ್ಳುವುದು ರಾಜ ಮಹಾರಾಜರ ಅತಿ ಮುಖ್ಯವಾದ ಒಂದು ಅಗತ್ಯ ಅಂಶವಾಗಿದ್ದು, ಇದು ಜಗತ್ತಿನಾದ್ಯಂತ ಕಂಡುಬರುತ್ತದೆ. ಈ ಬಿರುದು ಬಾವಲಿಗಳು ಆ ರಾಜ ಮನೆತನದ ಅಧಿಕಾರ, ಶ್ರೇಷ್ಠತೆಗಳನ್ನು ಸಾರುತ್ತವೆ. ಬಹು ಹಿಂದಿನಿಂದಲೂ ರಾಜ ಮಹಾರಾಜರು ತಮ್ಮ ಅಧಿಕಾರದಲ್ಲಿ ದೈವ ಮೂಲವನ್ನು ನಂಬುವುದು ಸಹಜವಾಗಿತ್ತು.

ಆ ದೈವ ಮೂಲದ ಮೇಲೆಯೇ ಇವರು ಸಿಂಹಾಸನದ ಮೇಲೆ ತಮ್ಮ ಹಕ್ಕುದಾರಿಕೆಯನ್ನು ಸ್ಥಾಪಿಸುತ್ತಿದ್ದರು. ಈ ದೈವ ಮೂಲದ ಕಾರಣಕ್ಕಾಗಿಯೆ ಪ್ರಜೆಗಳು ರಾಜರನ್ನು ಭಯ ಭಕ್ತಿಯಿಂದ ಗೌರವಿಸುತ್ತಿದ್ದರು. ಪ್ರಾಚೀನ ಹಾಗೂ ಮಧ್ಯಕಾಲೀನ ಭಾರತದ ರಾಜರು ತಮ್ಮ ಮೂಲವನ್ನು ಸೂರ್ಯ ಅಥವಾ ಚಂದ್ರನಿಂದ ಬಂದ ವಂಶವೆಂದು ಹೇಳಿಕೊಳ್ಳುತ್ತಿದ್ದರು. ರಾಜಸ್ಥಾನದಲ್ಲಿದ್ದ ಚಾಂದ್‌ನಂತಹ ಆಸ್ಥಾನ ಕವಿಗಳು ರಾಜರ ಸಾಹಸಗಳನ್ನು ಹಾಡುತ್ತಿದ್ದರು. ರಾಜರ ಆಸ್ಥಾನಗಳಿದ್ದ ವಂದಿ ಮಾಗಧರು ರಾಜನನ್ನು ಹೊಗಳುವ ಕೆಲಸಕ್ಕಾಗಿಯೇ ನೇಮಕಗೊಂಡಿರುವುದನ್ನು ಕಾಣಬಹುದಾಗಿದೆ. ಈ ವಂದಿ ಮಾಗಧರು ಹಾಡಿ ಹರಸಿದ ಬಿರುದುಗಳಲ್ಲಿ ಕೆಲವುಗಳು ಆ ರಾಜನ ಪ್ರಾಚೀನರು ಹೊಂದಿದಂತಹವಾಗಿದ್ದವು. ಉಳಿದವು ರಾಜನು ಯುದ್ಧಭೂಮಿಯಲ್ಲಿ ಜಯಗಳಿಸಿ ಸ್ವಸಾಮರ್ಥ್ಯದಿಂದ ಪಡೆದವಂತವಾಗಿದ್ದವು.

ವೀರ ಸೋಮೇಶ್ವರನಿಗೆ ಅವನ ವ್ಯಕ್ತಿತ್ವ ಹಾಗೂ ಪರಾಕ್ರಮಗಳಿಗೆ ಅರ್ಹವಾದ ಬಿರುದುಗಳಿದ್ದವು. ವೀರಸೋಮೇಶ್ವರನು ಮೂರನೇ ರಾಜ ರಾಜಚೋಳನ ಸಾಮ್ರಾಜ್ಯವನ್ನು ಕಡವರ ಕೈಯಿಂದ ಬಿಡಿಸಿ ಅವರಿಗೆ ನೆಮ್ಮದಿಯ ನಿಟ್ಟುಸಿರು ಬಿಡುವಂತೆ ಮಾಡಿ ತಾನೇ 'ಚೋಳ ರಾಜ ಸಂಸ್ಥಾಪಕ' ಎಂದು ಘೋಷಿಸಿಕೊಂಡನು.[3] ಕ್ರಿ.ಶ. 1246ರ ಒಂದು ಶಾಸನವು ಸೋಮೇಶ್ವರನು ತನ್ನ ಬಿರುದನ್ನು 'ಪಾಂಡ್ಯ ದಿನಿಪಟ್ಟಿ'ಯಿಂದ, "ಪಾಂಡ್ಯ ರಾಜ್ಯ ಸ್ಥಾಪನಾಚಾರ್ಯ"[4] ಎಂಬುದಾಗಿ ಬದಲಾಯಿಸಿಕೊಂಡಿದ್ದಕ್ಕೆ ಉಲ್ಲೇಖವಿದೆ. ಕ್ರಿ.ಶ. 1248ರ ಒಂದು ಶಾಸನವು ಸೋಮೇಶ್ವರನನ್ನು "ಪಾಂಡ್ಯ ಕುಲ ಸಂರಕ್ಷಣಾ ದಕ್ಷಾದಕ್ಷಿಣಬುಜನ್" ಅಥವಾ "ಪಾಂಡ್ಯ ಕುಲವನ್ನು ರಕ್ಷಿಸುವ ಬಲಗೈ ಬಂಟ" ಎಂಬುದಾಗಿ ಉಲ್ಲೇಖಿಸುತ್ತದೆ.[5] ಪದೇ ಪದೇ ಪಾಂಡ್ಯರ ಸಹಾಯಕ್ಕೆ ಹೋಗಿ 'ಪಾಂಡ್ಯ ರಾಜ್ಯ ರಕ್ಷಕ'[6] 'ಕಾಡವ ರಾಜನನ್ನು ಬೆನ್ನಟ್ಟಿದ ಪರಾಕ್ರಮಿ'[7], ಹಾಗೂ 'ಕರ್ನಾಟಕ ಸೋಮೇಶ್ವರ'[8] ಯೆಂಬ ಬಿರುದನ್ನು ಹೊಂದಿದನು. ಈತನನ್ನು "ಭೂಮಿಯ ಅಥವಾ ಭುವನ ಶ್ರೇಷ್ಟ"[9] ಸಾಮ್ರಾಟ ಎಂದು ಕರೆಯಲಾಗಿತ್ತು. ಕ್ರಿ.ಶ. 1253ರಲ್ಲಿ ಬಹಳ ಘನವಾದ ಬಿರುದಾದ 'ಸೋಮೇಶ್ವರ ಶತ್ರುವಿಗೆ ಸಾವಿನ ದಂಡ'[10] ಎಂಬುದನ್ನು ಪಡೆದನು. ಮೇಲ್ಕಂಡ ಈ ಎರಡು ಬಿರುದುಗಳಿಂದ ವೀರ ಸೋಮೇಶ್ವರನ ಶ್ರೇಷ್ಟತೆ ಹಾಗೂ ಪರಾಕ್ರಮವನ್ನು ತಿಳಿಯಬಹುದಾಗಿದೆ ಹಾಗೂ ವೀರ ಸೋಮೇಶ್ವರನಿಗಿದ್ದ 'ವೀರ ಸೋಮದೇವ' ಹಾಗೂ 'ವೀರ ಪ್ರತಾಪೇಶ್ವರ'[11] ಯೆಂಬ ಇನ್ನೆರೆಡು ಬಿರುದುಗಳಿಂದ ಈತ ಒಬ್ಬ ಪರಾಕ್ರಮಿಯಾದ ರಾಜನಾಗಿದ್ದನೆಂದು ತಿಳಿದುಬರುತ್ತದೆ.

## ವೀರ ಸೋಮೇಶ್ವರನ ಕೌಟುಂಬಿಕ ಜೀವನ

ವೀರ ಸೋಮೇಶ್ವರನ ಕೌಟುಂಬಿಕ ಜೀವನವನ್ನು ಅಧ್ಯಾಯ ಮಾಡಲು ನಮಗೆ ನಿಖರವಾದ ಮಾಹಿತಿಗಳು ಲಭ್ಯವಿದೆ.

## (ಅ) ವೀರ ಸೋಮೇಶ್ವರನ ಪತ್ನಿಯರು ಮತ್ತು ಪುತ್ರರು

**ಪತ್ನಿಯರು**: ದಕ್ಷಿಣ ಭಾರತದ ಇತರ ರಾಜ ಮನೆತನಗಳಂತೆ ವೀರ ಸೋಮೇಶ್ವರನ ಕೌಟುಂಬಿಕ ಜೀವನಕ್ಕೆ ಸಂಬಂಧಿಸಿದ ಉತ್ಪ್ರೇಕ್ಷಿತ ವರದಿಗಳು ಈತನ ಬಗ್ಗೆ ಇಲ್ಲ. ವೀರ ಸೋಮೇಶ್ವರನಿಗೆ ಬಿಜ್ಜಳ ಮಾಚದೇವಿ ಹಾಗೂ ಚಾಳುಕ್ಯ ರಾಜಕುಮಾರಿ ದೇವಲ ಅಥವಾ ದೇವಕಾಳಿ (ದೇವಲದೇವಿ) ಯೆಂಬ ಪತ್ನಿಯರಿದ್ದರೆಂದು ತಿಳಿದು ಬರುತ್ತದೆ.[12] ಇವರ ಜೊತೆಗೆ ಶ್ರೀರಂಗನಿಂದ ಕೇವಲ ಒಂದು ಮೈಲಿ ದೂರದಲ್ಲಿರುವ ತಿರುವನಿಕ್ಕ (ಜಂಬುಕೇಶ್ವರ) ದೇವಾಲಯದಲ್ಲಿರುವ ಶಾಸನಗಳು ತಿಳಿಸುವಂತೆ ತಿರುವನಿಕ್ಕದ ಉತ್ತರ ಪಟ್ಟಣ ಪ್ರದೇಶದಲ್ಲಿ ಈತನು ತನ್ನ ಅಜ್ಜ, ಅಜ್ಜಿ ಮತ್ತು ಈತನ ಹೆಂಡತಿಯ ಹೆಸರಿನಲ್ಲಿ ಮೂರ್ತಿಗಳನ್ನು ಪ್ರತಿಷ್ಠಾಪನೆ ಮಾಡಿ ಅವುಗಳಿಗೆ ದೇವಾಲಯ ಗಳನ್ನು ಕಟ್ಟಿಸಿದ್ದಾನೆ. ಹೆಂಡತಿಯ ಮೂರ್ತಿಯಲ್ಲಿ ಹೆಸರನ್ನು ಸೋಮಲಾ (ಸೋಮಲೇಶ್ವರ) ಯೆಂಬುದಾಗಿ ಕೆತ್ತಿರುವುದರಿಂದ ಈತನಿಗೆ ಈ ಹೆಸರಿನ ಇನ್ನೋರ್ವ ಹೆಂಡತಿ ಇದ್ದಳೆಂದು ತಿಳಿಯ ಬಹುದಾಗಿದೆ.[13]

## (ಆ) ಪುತ್ರರು ಮತ್ತು ಪುತ್ರಿಯರು

ವೀರ ಸೋಮೇಶ್ವರನಿಗೆ ಮೂವರು ಪತ್ನಿಯರು ಇದ್ದರೆಂದು ತಿಳಿದು ಬರುತ್ತದೆ. ಅದರಲ್ಲಿ ಮೊದಲ ಇಬ್ಬರು ಪತ್ನಿಯಾದ ಮಾಚಲದೇವಿ, ದೇವಲಾದೇವಿಯ ಸಂತಾನಗಳ ಬಗ್ಗೆ ತಿಳಿದು ಬರುತ್ತದೆ. ಬಿಜ್ಜಳ ಮಾಚಲದೇವಿಯಿಂದ ಜನಿಸಿದವನೇ ನರಸಿಂಹನಾಗಿದ್ದಾನೆ. ಈತನು ಕೇವಲ 15 ವರ್ಷದವನಾಗಿದ್ದಾಗಲೇ ಹೊಯ್ಸಳ ನಾಡಿನ ಗದ್ದುಗೆಯೇರಿದನು. ಇನ್ನೋರ್ವ ಪತ್ನಿಯಾದ ಚಾಲುಕ್ಯ ರಾಜಕುಮಾರಿ ದೇವಲಾದೇವಿಯಿಂದ ಜನಿಸಿದವನೇ ರಾಮನಾಥನಾಗಿದ್ದಾನೆ. ಈತನು ಸಹ ಹೊಯ್ಸಳ ನಾಡಿನ ಗದ್ದುಗೆಯಲ್ಲಿ ಪಾಲು ಪಡೆದನು. ವೀರ ಸೋಮೇಶ್ವರನು ಕ್ರಿ.ಶ. 1254ರಲ್ಲಿ ಅಂದರೆ ತಾನಿನ್ನು ಜೀವಂತವಿರುವಾಗಲೇ ತನ್ನ ಇಬ್ಬರು ಮಕ್ಕಳಿಗೂ ಸಾಮ್ರಾಜ್ಯವನ್ನು ವಿಭಜಿಸಿ ಕೊಟ್ಟಿದ್ದನ್ನು ತಿಳಿಯಬಹುದು. ಈ ಸಾಮ್ರಾಜ್ಯ ವಿಭಜನೆಯೇ ಮುಂದೆ ಹೊಯ್ಸಳರ ಅಂತ್ಯಕ್ಕೆ ಎಡೆಯಾಯಿತೆಂಬುದನ್ನು ಗಮನಿಸಬಹುದಾಗಿದೆ. ಸಾಮ್ರಾಜ್ಯದ ವಿಭಜನೆಯಿಂದ ನರಸಿಂಹನು

ಹೊಯ್ಸಳ ಸಾಮ್ರಾಜ್ಯದ ಕನ್ನಡ ಪ್ರದೇಶಗಳ ಮೇಲೂ, ರಾಮನಾಥನು ತಮಿಳುನಾಡಿನ ಪ್ರದೇಶ ಗಳಿಗೂ ರಾಜರಾಗಿ ಅಧಿಕಾರ ನಡೆಸಿದರು.

ವೀರ ಸೋಮೇಶ್ವರನ ಪುತ್ರಿಯರು, ಸಹೋದರರು, ಸಹೋದರಿಯರು ಹಾಗೂ ಚಿಕ್ಕಪ್ಪಂದಿರುಗಳ ಬಗ್ಗೆಯಾಗಲೀ ಅಥವಾ ಆತನ ಉಳಿದ ಜೀವನ ಕ್ರಮಕ್ಕೆ ಸಂಬಂಧಿಸಿದಂತೆ ಮಾಹಿತಿಗಳು ಲಭ್ಯವಾಗಿಲ್ಲ.

**ಆಡಳಿತ ಪದ್ಧತಿ**

ಪ್ರಾಚೀನ ಮತ್ತು ಮಧ್ಯಕಾಲೀನ ಭಾರತದಲ್ಲಿ ರಾಜಪ್ರಭುತ್ವದ ಸರಕಾರವು ಸಾಮಾನ್ಯ ವಾಗಿತ್ತು. ಪ್ರಾಚೀನ ಧರ್ಮಶಾಸ್ತ್ರಗಳು ಮತ್ತು ಕಟ್ಟಳೆಗಳು ಅದನ್ನು ನಿಯಂತ್ರಿಸುತ್ತಿದ್ದವು. ರಾಜ್ಯದ ಆಡಳಿತದಲ್ಲಿ ರಾಜರು ಕೌಟಿಲ್ಯನ ಅರ್ಥಶಾಸ್ತ್ರ ಮತ್ತು ಮನು ಸಂಹಿತೆಗಳನ್ನು ಅನುಸರಿಸುತ್ತಿದ್ದರು. ಎರಡನೇಯದು ಸುಪ್ರಸಿದ್ಧವಾದ ಧರ್ಮಸೂತ್ರವಾಗಿತ್ತು. ರಾಜನು ತನ್ನ ಮೇಲಿದ್ದ ಹಲವು ಮಿತಿ ಗಳಿಂದಾಗಿ, ಪರಮಾಧಿಕಾರಿಯಾಗಿದ್ದುದಕ್ಕಿಂತ ಮಿಗಿಲಾಗಿ ಅನುಗ್ರಹಶೀಲ ರಾಜನಾಗಿದ್ದನು. ದಕ್ಷಿಣ ಭಾರತವು ಮೂಲತಃ ರಾಜಪ್ರಭುತ್ವಗಳ ದೇಶವಾಗಿತ್ತು. ಹೊಯ್ಸಳರಂತಹ ಕೃಷಿ ಪ್ರಧಾನ ದೇಶದಲ್ಲಿ ಜನರು ತಮ್ಮ ಜಮೀನು ಮತ್ತು ಸ್ಥಳೀಯ ಆಸಕ್ತಿಗಳ ಬಗೆಗೆ ಅಂಟಿಕೊಂಡಿದ್ದರಿಂದ ಆಂತರಿಕ ಶಾಂತಿಯನ್ನು ಬಯಸುತ್ತಿದ್ದರು. ಹೊರಗಿನ ಭೀತಿಯಿಂದ ಅವರನ್ನು ಕಾಪಾಡಲು ರಾಜತ್ವವು ಅತ್ಯಂತ ಸೂಕ್ತವಾಗಿತ್ತು. ಹೊಯ್ಸಳರ ಪ್ರಭುತ್ವವು ಯಾವ ರೀತಿಯಲ್ಲೂ ಪ್ರಜಾಪೀಡಕವಾಗಿರಲಿಲ್ಲ. ಸಾಮಂತ ರಾಜರು ಸಿಂಹಾಸನದಲ್ಲಿ ಕುಳಿತ ಸಮರ್ಥನಾದ ಚಕ್ರವರ್ತಿಗೆ ಅಧೀನರಾಗಿದ್ದರೂ, ಪ್ರಭುತ್ವವನ್ನು ವೈಯಕ್ತಿಕ ನೆಲೆಯಲ್ಲಿ ಅಂಗೀಕರಿಸುತ್ತಿದ್ದರು. ಸಾಮ್ರಾಜ್ಯದ ನಿಯಂತ್ರಣದ ವಿಸ್ತರಣವೆಂದರೆ ಹಿಂದಿನ ರಾಜ್ಯಗಳನ್ನಾಗಲಿ, ರಾಜ ಪದವಿಗಳನ್ನಾಗಲಿ ಕಿತ್ತು ಹಾಕುವುದಾಗಿರಲಿಲ್ಲ. ಅನೇಕ ಸಂದರ್ಭಗಳಲ್ಲಿ ಹಳೆಯ ರಾಜಮನೆತನಗಳ ಆಳ್ವಿಕೆಯು ಮುಂದುವರೆದಿರುವುದನ್ನು ಕಾಣಬಹುದಾಗಿದೆ.

ದಕ್ಷಿಣ ಭಾರತದಲ್ಲಿ ಏಕಾಧಿಪತ್ಯವು ಒಂದು ರಾಜ್ಯಾಡಳಿತ ವ್ಯವಸ್ಥೆಯಾಗಿ ಬೆಳೆದದ್ದಕ್ಕೆ ಕಾರಣ, ಜನರು ಬೇರಾವುದೇ ಬಗೆಯ ಸರಕಾರವನ್ನಲ್ಲದೆ ಅದನ್ನು ಬಯಸಿದುದಲ್ಲ. ಹೊಯ್ಸಳರ ಸಾಮ್ರಾಜ್ಯದಲ್ಲಿ ಭಿನ್ನ ಸ್ವರೂಪದ ಅಂಶಗಳು, ವೈವಿಧ್ಯಪೂರ್ಣ ಆಸಕ್ತಿಗಳು ಮತ್ತು ಸಮುದಾಯ ಗಳು ಒಟ್ಟೊಟ್ಟಿಗೇ ಇದ್ದ ಪರಿಸ್ಥಿತಿಯೇ ಒಂದು ಬಲಿಷ್ಟವಾದ ಏಕಾಧಿಪತ್ಯ ಆಡಳಿತವನ್ನು

ಅಗತ್ಯವಾಗಿಸಿತ್ತು. ರಾಜನು ಸಾಮ್ರಾಜ್ಯದ ಅಖಂಡತೆಯ ಸಂಕೇತವಾಗಿದ್ದನು. ಅವನು ಸರ್ವಾಧಿಕಾರಿಯಾದರೂ ನಿರಂಕುಶ ಆಡಳಿತಗಾರನಾಗಿರಲಿಲ್ಲ. ಅವನ ಅಧಿಕಾರಕ್ಕೆ ಹಲವಾರು ರೂಢಿ ಮತ್ತು ಸಂಪ್ರದಾಯಗಳ ನಿರ್ಬಂಧಗಳಿದ್ದವು. ತೆರಿಗೆಯ ಸ್ವರೂಪವನ್ನೂ ಸಂಪ್ರದಾಯವೇ ನಿರ್ಧರಿಸಿತ್ತು. ರಾಜನು ಯುದ್ಧ ಸಮಯಗಳಲ್ಲಿ ಅಧೀನ ರಾಜರು ಸಲ್ಲಿಸುವ ಕಾಣಿಕೆಗಳನ್ನು ಅವಲಂಬಿಸಿದ್ದನು. ಸೈನ್ಯಕ್ಕೆ ಹಲವು ವಿಧಾನಗಳಿಂದ ಭರ್ತಿಮಾಡಿಕೊಳ್ಳಲಾಗುತ್ತಿತ್ತು. ನ್ಯಾಯಾಡಳಿತ ವನ್ನು ಜನರಿಗೆ ಅನುಕೂಲವಾಗುವ ರೀತಿಯಲ್ಲಿ ರೂಪಿಸಲಾಗಿತ್ತು. ವ್ಯಾಜ್ಯಗಳನ್ನು ಬಹುತೇಕ ಸಂದರ್ಭಗಳಲ್ಲಿ ಪಂಚಾಯಿತಿಯ ಮೂಲಕ ತೀರ್ಮಾನಿಸಲಾಗುತ್ತಿತ್ತು. ಮೊಕದ್ದಮೆಗಳನ್ನು ಸ್ಥಳಿಯರೇ ತಮ್ಮ ತಮ್ಮ ಸ್ಥಳಗಳಲ್ಲೇ ಪರಿಹರಿಸಿಕೊಳ್ಳುತ್ತಿದ್ದರು. ಪ್ರಾಂತೀಯ ಆಡಳಿತವೂ ಕಾಲದ ಅಗತ್ಯಗಳನ್ನು ಪೂರೈಸುವಂತಿರುತ್ತಿತ್ತು. ಅನೇಕ ಸಂದರ್ಭಗಳಲ್ಲಿ ಸರಕಾರಿ ಅಧಿಕಾರಿಗಳಿಗೆ ವೇತನ ವಾಗಿ ಸರಕಾರಕ್ಕೆ ಬರಬೇಕಾದ ವರಮಾನವನ್ನು ವಹಿಸಲಾಗುತ್ತಿತ್ತು. ಸ್ಥಳೀಯ ಪ್ರದೇಶಗಳಲ್ಲಿ ಹಳೆಯ ಗ್ರಾಮಸಭೆಗಳು, ಕೊನೆಯ ಪಕ್ಷ ಹದಿನಾರನೆಯ ಶತಮಾನದವರೆಗಾದರೂ, ಜನರಿಗೆ ಬಹುಉಪಯುಕ್ತವಾದ ಸೇವೆಯನ್ನು ಸಲ್ಲಿಸುತ್ತಿದ್ದವು. ದೇವಾಲಯವು ಧಾರ್ಮಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ಚಟುವಟಿಕೆಯ ಕೇಂದ್ರವಾಗಿತ್ತು. ಈ ಕಾಲದ ಆಡಳಿತದ ಬಗ್ಗೆ ಶಾಸನಗಳು ಹೆಚ್ಚು ಬೆಳಕನ್ನು ಬೀರುತ್ತವೆ. ಸೋಮೇಶ್ವರನ ಕಾಲದಲ್ಲಿ ಮಲ್ಲಿಕಾರ್ಜುನನು ರಚಿಸಿದ 'ಸೂಕ್ತಸುಧಾರ್ವಣ' ಮುಂತಾದ ಸಾಹಿತ್ಯ ರಚನೆಗಳು ಕೂಡಾ ಆಡಳಿತ ಇತಿಹಾಸ ಅಧ್ಯಾಯಕ್ಕೆ ಸಹಾಯಕವಾಗಿವೆ. ಇದರಲ್ಲಿ 'ಮಂತ್ರವರ್ಣ' ಎಂಬ ಅಧ್ಯಾಯ, ಆಡಳಿತ ವಿಷಯಕ್ಕೆ ಸಂಬಂಧಿಸಿದ್ದು, ನಮಗೆ ಬಹಳ ಉಪಯುಕ್ತವಾಗಿದೆ.

**ರಾಜಧಾನಿ**

ಕೇಂದ್ರ ಸರಕಾರಕ್ಕೆ ವಿಶಾಲವಾದ ಅಧಿಕಾರ ವ್ಯಾಪ್ತಿಯಿತ್ತು. ಅದರ ಸಮರ್ಪಕವಾದ ರಚನೆ ಹೇಗಿತ್ತೆಂದರೆ, ರಾಜನಿಗೆ ಸಾಮ್ರಾಜ್ಯದ ಮೇಲೆ ಸಂಪೂರ್ಣ ನಿಯಂತ್ರಣವಿದ್ದಿತು. ರಾಜಧಾನಿಯಲ್ಲಿ ರಾಜ, ಅವನ ಸಮಾಲೋಚನ ಪರಿಷತ್ತು, ಇವಕ್ಕೆ ಸಹಾಯಕವಾದ ಸಚಿವಾಲಯಗಳಿದ್ದವು. ರಾಜನು ವಾಸವಾಗಿದ್ದು ಆಡಳಿತ ನಡೆಸುತ್ತಿದ್ದ ರಾಜಧಾನಿಗೆ ಬಲವಾದ ಕೋಟೆಯಿದ್ದಿತು, ಅದು ಅಭೇಧ್ಯವಾಗಿತ್ತು.

ವೀರ ಸೋಮೇಶ್ವರನ ಕಾಲದಲ್ಲಿ ಹೊಯ್ಸಳ ಸಾಮ್ರಾಜ್ಯವು ತಮಿಳುನಾಡಿನವರೆಗೂ ವಿಸ್ತಾರಗೊಂಡಿದ್ದರಿಂದ, ಹೊಯ್ಸಳರ ಪ್ರಮುಖ ರಾಜಧಾನಿಯಾದ ದ್ವಾರಸಮುದ್ರದ ಜೊತೆಗೆ

ತಮಿಳುನಾಡಿನ ಕಣ್ಣಾನೂರು ಸಹ ಸೋಮೇಶ್ವರನ ರಾಜಧಾನಿಯಾಗಿತ್ತು. ಸೋಮೇಶ್ವರನು ದಕ್ಷಿಣ ಪ್ರಾಂತ್ಯದ ದ್ವಾರಸಮುದ್ರದಲ್ಲಿ ಆಸಕ್ತಿಯಿಂದ ಆಡಳಿತ ನಡೆಸದೆ, ತಮಿಳುನಾಡಿನ ಕಡೆ ಹೆಚ್ಚು ಗಮನ ಹರಿಸಿದ್ದನ್ನು ನಾವು ಗಮನಿಸಬಹುದಾಗಿದೆ.

**ರಾಜ**

ರಾಜನೇ ಆಡಳಿತದ ಮುಖ್ಯಸ್ಥ, ಸರ್ವೋಚ್ಚ, ಪರಮೋಚ್ಚ ಅಧಿಕಾರಿ, ವಾಸ್ತವವಾಗಿ ರಾಜನು ಆಡಳಿತ ಯಂತ್ರದ ತುತ್ತತುದಿಯಾಗಿದ್ದು ಆಡಳಿತದ ಚುಕ್ಕಾಣಿ ಹಿಡಿದವನಾಗಿದ್ದನು. ಶಕ್ತಿ, ಸ್ಥಿರತೆ ಅವನ ವ್ಯಕ್ತಿತ್ವವನ್ನು ಆಧರಿಸಿತ್ತು.[14] ರಾಜ್ಯದ ರಕ್ಷಣೆ, ನ್ಯಾಯಪಾಲನೆ ಹಾಗೂ ಸಾಮಾಜಿಕ ಸುವ್ಯವಸ್ಥೆ ಕಾಪಾಡುವುದು ಅವನ ಕರ್ತವ್ಯವಾಗಿತ್ತು. ರಾಜತ್ವವು ಅನುವಂಶಿಕತೆಯ ತತ್ವದ ಆಧಾರದ ಮೇಲೆ ಸುಸ್ಥಾಪಿತವಾದ ವ್ಯವಸ್ಥೆಯಾಗಿತ್ತು. ಹಿರಿಯ ಮಗನು, ಯುವರಾಜನಾಗಿ ಸಿಂಹಾಸನಕ್ಕೆ ವಾರಸುದಾರನಾಗುತ್ತಿದ್ದನು. ಕಿರೀಟಧಾರಣೆಯು ಅವನಿಗೆ ಸಿಂಹಾಸನಕ್ಕೆ ಶಾಸನಬದ್ಧ ವಾದ ಹಕ್ಕನ್ನು ಕೊಡುತ್ತಿತ್ತು. ರಾಜನು ತನ್ನ ವಂಶದ ಹಿರಿಮೆಯನ್ನು ಹೊಗಳುವ ತನ್ನ ಹಾಗೂ ಪೂರ್ವಜರ ಸಾಧನೆಗಳನ್ನು ಪ್ರಶಂಸಿಸುವ ಬಿರುದುಗಳನ್ನು ಧರಿಸುತ್ತಿದ್ದನು.[15] ಈ ತತ್ವಗಳಿಗನುಗುಣ ವಾಗಿ ವೀರ ಸೋಮೇಶ್ವರನು ತನ್ನ ತಂದೆ ನರಸಿಂಹನ (ಎರಡನೇ) ನಂತರ ರಾಜನಾಗಿ ಕಿರೀಟ ಧಾರಣೆ ಮಾಡಿ ಸಿಂಹಾಸನವನ್ನೇರಿದನು. ರಾಜನು ಆಡಳಿತದಲ್ಲಿ ತನಗೆ ಸಲಹೆ ಸಹಕಾರ ನೀಡಲೆಂದು ಆಪ್ತವಲಯವನ್ನು ಹೊಂದಿದ್ದನು.

ಅವರುಗಳೆಂದರೆ:

1) ಪುರೋಹಿತ (ರಾಜಪುರೋಹಿತ)
2) ಅಮಾತ್ಯ (ಮಂತ್ರಿ)
3) ಮಂತ್ರಿ
4) ಮಹಾಮಂಡಲೇಶ್ವರ (ರಾಜಪಾಲರು)
5) ಸಾಮಂತಕರು (ರಾಜ್ಯದ ಅಧಿಕಾರಿಗಳು)

ಇವರು ರಾಜನಿಗೆ ಆಡಳಿತದಲ್ಲಿ ಸಹಾಯ ಮಾಡುತ್ತಿದ್ದರು. ರಾಜನ ಮುಖ್ಯ ಕರ್ತವ್ಯಗಳೆಂದರೆ, ಧರ್ಮದ ರಕ್ಷಣೆ, ತನ್ನ ಪ್ರಜೆಗಳ ಪಾಲನೆ, ನ್ಯಾಯ ವಿತರಣೆ ಮತ್ತು ಅನುಕೂಲ

ಕರವಾದ ವಿದೇಶಾಂಗ ನೀತಿಯ ಅನುಷ್ಠಾನ ಹಾಗೂ ಜನರ ಸಾಮಾಜಿಕ ವ್ಯವಸ್ಥೆಯನ್ನೂ, ಆರ್ಥಿಕ ಮುನ್ನಡೆಯನ್ನೂ ಕಾಪಾಡುವುದಕ್ಕೂ ರಾಜನು ಹೊಣೆಗಾರನಾಗಿದ್ದನು. ಅವನ ಮೇಲ್ಮನವಿಯು ಅತ್ಯಂತ ಉನ್ನತವಾದ ನ್ಯಾಯ ಪೀಠವಾಗಿತ್ತು. ವಿದ್ವತ್ತು ಮತ್ತು ಕಲೆಗಳ ಪೋಷಕನಾಗಿದ್ದನು.

ರಾಜನು ಸರಕಾರದ ಅತಿಮುಖ್ಯ ಅಂಗವಾಗಿದ್ದರೂ ಅವನ ಅಧಿಕಾರಿಗಳಿಗೆ ಕಾಲಾನುಕಾಲ ದಿಂದ ಬಂದ ನೀತಿ ನಿಯಮಗಳು ಧರ್ಮಸೂತ್ರಗಳು ಸೀಮಿತವನ್ನು ಹಾಕಿದ್ದವು. ಪ್ರಾಚೀನ ಭಾರತ ದಲ್ಲಿದ್ದಂತೆಯೇ ಕ್ರಿ.ಶ. 12ನೇಯ ಶತಮಾನದಲ್ಲೂ ವೇದಗಳು, ಸ್ಮೃತಿಗಳು ಮತ್ತು ಧರ್ಮಶಾಸನ ಗಳನ್ನು ಆಧರಿಸಿದ ಶಾಸನಗಳಿದ್ದವು. ಹಾಗಾಗಿ ವೀರ ಸೋಮೇಶ್ವರನು ಪೂರ್ವಜರಂತೆಯೇ, ಶಾಸನ ನಿರ್ಮಾಪಕನೂ ಆಗಿರಲಿಲ್ಲ. ಶಾಸನವನ್ನು ಮುರಿಯುವವನೂ ಆಗಿರಲಿಲ್ಲ. ಇರುವ ಶಾಸನಗಳನ್ನು ಅವನು ಗೌರವಿಸಿ ಅನುಸರಿಸಬೇಕಾಗಿತ್ತು, ಕಾರ್ಯಗತಗೊಳಿಸಬೇಕಾಗಿತ್ತು. ಅವನು ನಿರಂಕುಶಾ ಧಿಕಾರಿಯಾಗದಂತೆ ಇದು ತಡೆಗಳನ್ನು ಹಾಕುತ್ತಿತ್ತು.

ದುಷ್ಟರನ್ನು ನಿಗ್ರಹಿಸಿ, ಶಿಷ್ಟರನ್ನು ಪೋಷಿಸುವುದರ ಮೂಲಕ ರಾಜನು ಆಡಳಿತ ನಡೆಸುತ್ತಿದ್ದನು. (ದುಷ್ಟನಿಗ್ರಹ, ಶಿಷ್ಟರಕ್ಷಕ) ಆಡಳಿತ ವ್ಯವಹಾರಗಳ ಕುರಿತು ರಾಜನು ಮಂತ್ರಿ ಮಂಡಲದ ನರವು ಪಡೆಯುತ್ತಿದ್ದನು. ವಾರಸುದಾರರಿಲ್ಲದ, ಮಡಿದ ಜನರ ಆಸ್ತಿಗಳನ್ನು ಪಡೆಯುವ ಹಕ್ಕು ರಾಜನಿಗಿತ್ತು. ಆಸ್ತಿ ವಿವಾದ ಹಾಗೂ ರಾಜ್ಯದ ಒಳಗೆ ಉಂಟಾಗುತ್ತಿದ್ದ ಗಡಿ ವಿವಾದಗಳನ್ನು ಅವನೇ ಪರಿಹರಿಸುತ್ತಿದ್ದನು. ಅವನ ಅಧೀನದಲ್ಲಿ ಬಹಳ ಭೂಮಿಯಿದ್ದು, ಅವುಗಳನ್ನು ಬ್ರಾಹ್ಮಣರಿಗೆ ಅಗ್ರಹಾರಗಳಿಗೋಸ್ಕರ ದಾನ ನೀಡುತ್ತಿದ್ದನು. ಜನರ ಯೋಗಕ್ಷೇಮ ಗಳನ್ನು ನೋಡಿಕೊಳ್ಳುವುದರ ಜೊತೆಗೆ ಅವರ ಆರ್ಥಿಕ ಅಭಿವೃದ್ಧಿಯೆಡೆಗೆ ಗಮನ ನೀಡಿದ್ದನು. ತನ್ನ ಹೆಸರಿನ ನಾಣ್ಯಗಳನ್ನು ಚಲಾವಣೆಗೆ ತಂದನು. ಧಾರ್ಮಿಕ ಹಾಗೂ ಪೌರ ವ್ಯವಹಾರಗಳ ಉನ್ನತಿಗೂ ಶ್ರಮ ವಹಿಸುತ್ತಿದ್ದನು. ಯುದ್ಧಕಾಲದಲ್ಲಿ ಸೈನ್ಯದ ಮುಂದಾಳತ್ವವನ್ನು ವಹಿಸಿ ಸೇನಾ ಮುಖಂಡನಾಗಿ ಕರ್ತವ್ಯ ನಿಭಾಯಿಸಬೇಕಿತ್ತು.[16]

**ಯುವರಾಜ**

ಸಿಂಹಾಸನದ ಉತ್ತರಾಧಿಕಾರಿಯನ್ನು 'ಯುವರಾಜ' ಎಂದು ಕರೆಯಲಾಗುತ್ತಿತ್ತು. ಪಟ್ಟದ ರಾಣಿಯ ಹಿರಿಯ ಮಗ ಸಾಮಾನ್ಯವಾಗಿ ಯುವರಾಜ ಪಟ್ಟ ಅಲಂಕರಿಸುತ್ತಿದ್ದನು. ಕೆಲವೊಮ್ಮೆ

ಅವನು ರಾಜನ ಜೀವಿತ ಕಾಲದಲ್ಲಿಯೇ ಆಡಳಿತ ವ್ಯವಹಾರಗಳಲ್ಲಿ ಸಹಾಯಕನಾಗಿ ಕಾರ್ಯ ನಿರ್ವಹಿಸುತ್ತಿದ್ದನು. ವೀರ ಸೋಮೇಶ್ವರನು ಅಧಿಕಾರದಲ್ಲಿದ್ದಾಗ 3ನೇಯ ನರಸಿಂಹನು ಯುವರಾಜ ಪಟ್ಟವನ್ನು ಅಲಂಕರಿಸಿದ್ದನು.

**ರಾಜಗುರು**

ರಾಜ ಮನೆತನಗಳಲ್ಲಿ ರಾಜಗುರುವಿಗೆ ಪ್ರಮುಖ ಸ್ಥಾನವಿತ್ತು. ಅವನು ರಾಜನ ಪಟ್ಟಾಭಿಷೇಕದ ಸಮಯದಲ್ಲಿ ಅರಮನೆಯ ಎಲ್ಲಾ ಧಾರ್ಮಿಕ ಹಾಗೂ ಸಾಮಾಜಿಕ ಕಾರ್ಯಕ್ರಮ ಗಳಲ್ಲಿ ಪ್ರಮುಖನಾಗಿದ್ದನು. ತನ್ನ ಅಪಾರ ಬೌದ್ಧಿಕ ಹಾಗೂ ಆಧ್ಯಾತ್ಮಿಕ ಸಾಧನೆಯಿಂದ ರಾಜನ ಭಕ್ತಿ ಗೌರವಗಳಿಗೆ ಕಾರಣನಾಗಿದ್ದನು.[17]

**ಮಂತ್ರಿಮಂಡಲ**

ಮಂತ್ರಿಮಂಡಲವು ದಕ್ಷಿಣ ಭಾರತದ ರಾಜಕೀಯದಲ್ಲಿ ವಿವಿಧ ಸಮಯಗಳಲ್ಲಿ ಪ್ರಮುಖವಾದ ಪಾತ್ರವನ್ನು ವಹಿಸಿವೆ. ಹೊಯ್ಸಳ ರಾಜರು ಮಂತ್ರಿಮಂಡಲದ ಸಹಕಾರವನ್ನು ಪಡೆದಿದ್ದರು. ಸುವ್ಯಕ್ತ ಉಲ್ಲೇಖಗಳಿಂದ ಹಾಗೂ ದಾಖಲೆಗಳಿಂದ ಮಂತ್ರಿ ಮಂಡಲವು ಇವರ ಒಂದು ತಂಡವಾಗಿ ಪಂಚ ಪ್ರಧಾನರ ಹೆಸರಿನಿಂದ ಸಂಪ್ರದಾಯಿಕವಾಗಿತ್ತು.[18]

ಇವರು ಸಂಧಿ ವಿಗ್ರಹಿ, ಶ್ರೀರಕ್ಷಣಾಧಿಕಾರಿ, ಹಿರಿಯ ಭಂಡಾರಿ, ಸೇನಾಧಿಪತಿ ಮತ್ತು ಮಹಾ ದಂಡನಾಯಕ ಎಂಬ ಹೆಸರಿನಿಂದ ಕ್ರಮವಾಗಿ ಆಂತರಿಕ ಹಾಗೂ ಬಾಹ್ಯ ವ್ಯವಹಾರಗಳು, ರಾಜ್ಯ ನಿರ್ದೇಶನ, ಖಜಾನೆ, ಸೈನ್ಯ ಹಾಗೂ ರಾಜ ಸಂಪತ್ತುಗಳ ವ್ಯವಹಾರಗಳನ್ನು ಗಮನಿಸುತ್ತಿದ್ದರು.[19]

ಇಷ್ಟೇ ಅಲ್ಲದೇ ವೀರ ಸೋಮೇಶ್ವರನ ಕಾಲದಲ್ಲಿದ್ದ ಇತರೆ ಆಡಳಿತ ವರ್ಗದ ಸಿಬ್ಬಂದಿಯ ವಿವರ ಇಂತಿದೆ:

**ರಾಜ್ಯದ ಅಧಿಕಾರಿಗಳು**:

| | | |
|---|---|---|
| 1) | ಕೋಶಾಧಿಕಾರಿ | ಸಾಮಾನ್ಯ ಲೆಕ್ಕಪತ್ರ |
| 2) | ನಿಷ್ಠಧಿಕಾರಿ | ಬೊಕ್ಕಸಧಿಕಾರಿ |
| 3) | ಮೂಲ್ಯಾಧಿಕಾರಿ | ಸಂಬಳ ನಿಗದಿ ಮಾಡುವ ಅಧಿಕಾರಿ |

4) ಅರ್ಘಾಧಿಕಾರಿ ಮಾರುಕಟ್ಟೆಯಲ್ಲಿ ಬೆಲೆ ನಿಗದಿ ಮಾಡುವ ಅಧಿಕಾರಿ

5) ಕಾರ್ಣಾಧಿಕಾರಿ ಧಾರ್ಮಿಕ ಕಾರ್ಯದ ಮೇಲ್ವಿಚಾರಣೆ ನಡೆಸುವ ಅಧಿಕಾರಿ

6) ವೈದ್ಯಾಧಿಕಾರಿ ಹದಿನಾಲ್ಕು ವೈದ್ಯಾಧಿಕಾರಿಗಳ ಮೇಲ್ವಿಚಾರಕ

7) ಶಾಸ್ತ್ರಾಧಿಕಾರಿ ಬೇರೆ ಶಾಸ್ತ್ರಗಳ ಅಧಿಕಾರಿ ಉದಾ. ರಾಜಕೀಯ, ಕೃಷಿ

8) ಚಿತ್ರಾಧಿಕಾರಿ ಸಂಗೀತ, ಜ್ಯೋತಿಷ್ಯ ಶಾಸ್ತ್ರ ಚಿತ್ರಗ್ಯಾಲರಿ ಅಧಿಕಾರಿ

9) ಭೃಗಾಧಿಕಾರಿ ಜಿಂಕೆಗಳ ಮೇಲ್ವಿಚಾರಣಾಧಿಕಾರಿ

10) ಅಂಗಾಧಿಕಾರಿ ಅಂಗರಕ್ಷಕ ಪಡೆ

11) ಪ್ರಾಣಾಧಿಕಾರಿಗಳು ವೈದ್ಯರು

12) ಘಾಸಾಧಿಕಾರಿ ಅರಣ್ಯ ಮೇಲ್ವಿಚಾರಣೆ

13) ಸಿದ್ಧಾಧಿಕಾರಿ ಅಲಂಕಾರ ಮೇಲ್ವಿಚಾರಣೆ

14) ವಸ್ತ್ರಾಧಿಕಾರಿ ಉಡುಪುಗಳ ವಿನ್ಯಾಸ ಮೇಲ್ವಿಚಾರಣೆ ಅಧಿಕಾರಿ

15) ಪಾಲನಾಧಿಕಾರಿ ತೋಟಗಾರಿಕಾ ಅಧಿಕಾರಿ

16) ಪರ್ನಾಧಿಕಾರಿ ಅಡಿಕೆಗಳ ಮೇಲ್ವಿಚಾರಣೆ ಮತ್ತು ಅದಕ್ಕೆ ಸಂಬಂಧಿಸಿದ ಅಧಿಕಾರಿ

17) ವರ್ಣಾಧಿಕಾರಿ ಎಲ್ಲಾ ಜನಾಂಗದ ಮೇಲ್ವಿಚಾರಣೆ

18) ದುಷ್ಯತಾಧಿಕಾರಿ ಜೈಲ್ ಸೂಪರಿಂಡೆಂಟ್

19) ದುರ್ಗಾಧಿಕಾರಿ ಕೋಟೆಗಳ ಮೇಲ್ವಿಚಾರಣೆ[20]

## ಪ್ರಾಂತೀಯ ಹಾಗೂ ಸ್ಥಳೀಯ ಆಡಳಿತ

ಆಡಳಿತ ಕಾರಣಗಳಿಗಾಗಿ ಸಾಮ್ರಾಜ್ಯವನ್ನು ಹಲವು ಭಾಗಗಳಾಗಿ ವಿಭಜನೆ ಮಾಡಲ್ಪಟ್ಟು, ಆಡಳಿತ ನಡೆಸಲಾಗುತ್ತಿತ್ತು. ಇದು ಸ್ಥಳೀಯ ಆಡಳಿತದ ಬೆಳವಣಿಗೆಗೆ ಸಹಕಾರಿಯಾಗಿರುತ್ತಿತ್ತೆಂದು ಹೇಳಬಹುದಾಗಿದೆ. ಮಧ್ಯಕಾಲೀನ ಯುಗದಲ್ಲಿ ಕರ್ನಾಟಕವು ಕುಂತಲವೆಂದು, ತುಂಡಿ 3000, ಪಳಸೆಗೆ 12,000, ಬನವಾಸಿ 12,000 ಮತ್ತು ನೊಳಂಬವಾಡಿ 32,000, ಗಂಗವಾಡಿ 96,000, ಕೊಂಕಣ 900, ಪಾಯ್ದೆ 500 ಮತ್ತು ಆಳುವ ಖೇಡ 6000 ಎಂದು ವಿಭಜಿಸಲ್ಪಟ್ಟಿತ್ತು.[21] ನೊಳಂಬವಾಡಿ ಹಾಗೂ ಗಂಗವಾಡಿಯಂತಹ ದೊಡ್ಡ ದೊಡ್ಡ ಪ್ರಾಂತ್ಯಗಳನ್ನು ಸಣ್ಣ ಸಣ್ಣ ಪ್ರಾಂತ್ಯಗಳಾಗಿ ಪುನಃ ವಿಭಜಿಸಿಲಾಗುತ್ತಿತ್ತು. ಹಳ್ಳಿಗಳನ್ನು ಒಟ್ಟುಗೂಡಿಸಿ ಪ್ರಾಂತ್ಯಗಳಾಗಿ ವಿಭಜನೆ ಮಾಡಲು ಹಲವಾರು ಪದ್ಧತಿಗಳು ಬಳಕೆಯಲ್ಲಿದ್ದಿತು. ದಶಮಾಂಶ ಪದ್ಧತಿಯು ಬಹಳ ಪ್ರಸಿದ್ಧ

ವಾಗಿತ್ತು. ಈ ಪದ್ಧತಿಯಡಿಯಲ್ಲಿ ಹತ್ತುಹತ್ತರ ಗುಂಪಿನಲ್ಲಿ ಹಳ್ಳಿಗಳನ್ನು ಸೇರಿಸಿ, ಅವುಗಳನ್ನು ನೂರರಂತೆ ಕೂಡಿಸಲಾಗುತ್ತಿತ್ತು. ಈ ನೂರರ ಗುಂಪು ಸಾವಿರದ ಗುಂಪಿನ ಭಾಗವಾಗಿತ್ತು. ನಮಗೆ ಎಪ್ಪತ್ತು ಪಡಿನಾಡುಗಳ ವಿವರ ದೊರಕುತ್ತದೆ.[22] ಒಂದು ಪ್ರಾಂತ್ಯದ ಹೆಸರು ಆ ಪ್ರಾಂತ್ಯ ಹೊಂದಿದ್ದ ಹಳ್ಳಿಗಳ ಸಂಖ್ಯೆಯಿಂದ ಇರುತ್ತಿತ್ತು. ನಾಡು ಎಂಬ ಪದ ಹತ್ತು, ನೂರು, ಸಾವಿರ ಸಂಖ್ಯೆಗೂ ಪ್ರಾಂತ್ಯ ಎಂದೇ ಕರೆಯಲಾಗುತ್ತಿತ್ತು. ಪೆರಯನಾಡು ಹಾಗೂ ತೆಕ್ಕಾಲುನಾಡು ಎಂಬುವರ ಉಲ್ಲೇಖಗಳು ದೊರಕುತ್ತವೆ.[23] ಪೆರಯನಾಡೆಂದರೆ ಕಂಪನ, ವೃತ್ತಿ ಅಥವಾ ಹತ್ತರ ಒಂದು ಘಟಕವಾಗಿದ್ದರೆ, ತೆಕ್ಕಾಲ ನಾಡು ನೂರರ ಒಂದು ಘಟಕವಾಗಿತ್ತು. ಸಾಕದಳದ ವಿವರಣೆಯಲ್ಲಿ ಹತ್ತರ ಅಥವಾ ನೂರರ ಒಂದು ಸಂಖ್ಯೆಯು ಪ್ರಾಯಶಃ ಆ ಹೆಸರಿಗೆ ಸೇರಿದ ಹಳ್ಳಿಗಳ, ಪಟ್ಟಣಗಳ, ನಗರಗಳ ಸಂಖ್ಯೆಯಿರಬೇಕೆಂದು ಬಲ್ಲ ಸಾಕ್ಷ್ಯಾಧಾರಗಳು ಹೇಳುತ್ತವೆ. ಆದರೆ ಸಾವಿರಾರು ಹಾಗೂ ಲಕ್ಷಗಳ ಸಂಖ್ಯೆಯಿರುವ ನಾಡು ಕುರಿತು ವಿವಾದವಿದೆ. ಬಿ.ಎಲ್.ರೈಸ್ ಪ್ರಕಾರ, ದೊಡ್ಡ ಸಂಖ್ಯೆಯು, ಸಾವಿರದ ನಾಡಾಗಿದ್ದು, ಉದಾ, ಗಂಗವಾಡಿ 96,000 ಪ್ರಾಂತ್ಯವು 96 ನಾಡು ಗಳನ್ನು ಹೊಂದಿತ್ತು. ಅವರ ಇನ್ನೊಂದು ವ್ಯಾಖ್ಯಾನದ ನಾಡಾಗಿದ್ದು, ಉದಾ, ಗಂಗವಾಡಿ 96,000 ಪ್ರಾಂತ್ಯವು 96 ನಾಡುಗಳನ್ನು ಹೊಂದಿತ್ತು. ಅವರ ಇನ್ನೊಂದು ವ್ಯಾಖ್ಯಾನದ ಪ್ರಕಾರ ಅದು ಆ ಪ್ರಾಂತ್ಯದ ಆದಾಯದ ಮೌಲ್ಯ. ಇದಕ್ಕೆ ಚಿಕ್ಕಮಗಳೂರು ತಾಲ್ಲೂಕಿನ ಆರು ಸಾವಿರದ ನಾಡು ಉದಾಹರಣೆ. ಈ ತಾಲ್ಲೂಕು 9 ಮಂಡೆ, 14 ಗ್ರಾಮಗಳು ಹಾಗೂ 6000 ಭೂಮಿಯನ್ನು ಹೊಂದಿತ್ತು.[24] ಪ್ರತಿಯೊಂದು ಜಿಲ್ಲೆ ದಂಡನಾಯಕರ ಆಡಳಿತದಲ್ಲಿತ್ತು. ಹಾಗೂ ಅವನಿಗೆ ಸಹಾಯಕ ರಾಗಿ ಅಧಿಕಾರಿ ವರ್ಗ ಇದ್ದಿತು. ಇವರಿಗೆ ಸಲಹೆಗಾರರಾಗಿ ಮಹಾಪ್ರಧಾನ, ಖಜಾಂಚಿಯಾಗಿ ಭಂಡಾರಿ, ಕಾರ್ಯದರ್ಶಿಯಾಗಿ ಸೇನ ಬೋವ, ಪೆರ್ಗಡೆ ಅಥವಾ ಹೆಗ್ಗಡೆ ಎಂಬ ಅಧಿಕಾರಿಗಳೂ ಮುಖ್ಯ ಸಹಾನಿಯ ಅಡಿಯಲ್ಲಿ ಅಶ್ವದಳವೂ ಇದ್ದಿತು.[25] ದಂಡನಾಯಕನ ಕರ್ತವ್ಯಗಳನ್ನು ವಿವರಿಸುವ ಡೆರೆಟ್‌ರವರು ಅವನು ಹಳೆಯ ಆಳುವ ಮನೆತನಗಳು, ಮಠಾಧೀಶರು, ಪ್ರಮುಖ ಆಚಾರ್ಯರುಗಳನ್ನು ನಿಭಾಯಿಸಬೇಕಾಗಿತ್ತು. ಅವನು ತೆರಿಗೆ ಸಂಗ್ರಹಣೆ ಹಾಗೂ ನ್ಯಾಯಾಡಳಿತದ ಹೊಣೆ ಹೊತ್ತಿದ್ದನು ಮಗ್ಗದೆರೆ, ಆಳೆಂದರೆ, ಬಲವನ, ಗಾಣದೆರೆ, ಒಕ್ಕಲುದೆರೆ ಹಾಗೂ ಶ್ರೀಗಂಧ, ಆನೆ, ಕುದುರೆ, ಹಳದಿ, ಕಾಳು ಮೆಣಸು, ಉಪ್ಪು, ಏಲಕ್ಕಿ ಹಾಗೂ ಅಮೂಲ್ಯ ರತ್ನಗಳ ಮೇಲಿನ ಸುಂಕವನ್ನು ಸುಂಕ ಹೆಗ್ಗಡೆ ಎಂಬ ಅಧಿಕಾರಿ ಸಂಗ್ರಹಿಸುತ್ತಿದ್ದನು.[26] ಮಂಗಳವಾರ ಸಂತೆಗಳಲ್ಲಿ ಸ್ವೀಕರಿಸಲಾದ ಸುಂಕ ಕೊಡುಗೆಗಳನ್ನು ರಾಜಾಜ್ಞೆಯ ಉಲ್ಲಂಘನೆ ಎಂದು ಬಗೆಯಲಾಗುತ್ತಿತ್ತು ಹಾಗೂ ಆ ಅಧಿಕಾರಿಗಳನ್ನು ಶಿಕ್ಷಿಸುವುದೊ ಹಿಂಬಡ್ತಿ ನೀಡುವುದೊ ಅಥವಾ ಕೆಲಸದಿಂದ ಕಿತ್ತು

ಹಾಕುವುದೊ ಮಾಡಲಾಗುತ್ತಿತ್ತು. ಪ್ರಾಂತ್ಯಗಳ ಪರಮೋಚ್ಚ ಅಧಿಕಾರಿಗಳಿಂದ ದಂಡನಾಯಕರು, ಯುದ್ಧ ಕಾಲಗಳಲ್ಲಿ ಸೈನ್ಯಾಡಳಿತ ಮೇಲ್ವಿಚಾರಣೆಯನ್ನು ಹಾಗೂ ನಿರ್ವಹಣೆಯನ್ನು ನಿರ್ವಹಿಸುತ್ತಿದ್ದರು. ಹಾಗೂ ಶಾಂತಿ ಕಾಲಗಳಲ್ಲಿ ಪೌರಾಡಳಿತವನ್ನು ನಿರ್ವಹಿಸುತ್ತಿದ್ದರು.[27] ವೀರ ಸೋಮೇಶ್ವರನ ಕಾಲದಲ್ಲಿ ವಿವಿಧ ಜಿಲ್ಲೆಗಳಲ್ಲಿ, ವಿವಿಧ ಅವಧಿಯಲ್ಲಿದ್ದ ದಂಡನಾಯಕರುಗಳ ಪಟ್ಟಿ ಇಂತಿದೆ.

| | ದಂಡನಾಯಕರುಗಳ ಹೆಸರು | ಇದ್ದ ಸ್ಥಳ | ಕಾಲ |
|---|---|---|---|
| 1 | ಮರಿಯಾ ನಾಯಕ | ತಿಪಟೂರು ತಾ. | ಕ್ರಿ.ಶ. 1232[28] |
| 2 | ನರಸಿಂಗಯ್ಯ ನಾಯಕ | ಜಗಳೂರು ತಾ. | ಕ್ರಿ.ಶ. 1238[29] |
| 3 | ಬೋಗಯ್ಯ ದಂಡನಾಯಕ | ಗೋವಿಂದನಹಳ್ಳಿ | ಕ್ರಿ.ಶ. 1236[30] |
| 4 | ಪೆರುಗಾದಿದೇವ ದಂಡನಾಯಕ | ಅಗರ | ಕ್ರಿ.ಶ. 1236[31] |
| 5 | ಮಹಾಪ್ರಧಾನ ಅದಾಯಿದಾದಾ | ಬಸರಾಳು | ಕ್ರಿ.ಶ. 1237[32] |
| 6 | ಗೋವಿಂದ ನಾಯಕ | ತಲಕಾಡು | ಕ್ರಿ.ಶ. 1239[33] |
| 7 | ಪೋಲಲ್ವದಂಡ ದಂಡನಾಯಕ | ಬೇಲೂರು | ಕ್ರಿ.ಶ. 1241[34] |
| 8 | ಕನ್ನೇಯ ದಂಡನಾಯಕ | ಅಗ್ರಹಾರ ಬಾಚೋಹಳ್ಳಿ | ಕ್ರಿ.ಶ. 1242[35] |
| 9 | ಸೋವಿದೇವ ದಂಡನಾಯಕ | ತಗಾರೆ | ಕ್ರಿ.ಶ. 1245[36] |
| 10 | ಪೆರುಮಾಲು ದಂಡನಾಯಕ | ಈಡೂರು | ಕ್ರಿ.ಶ. 1247[37] |
| 11 | ಅಮೇಯ ನಾಯಕ | ತಿಪಟೂರು ತಾ. | ಕ್ರಿ.ಶ. 1251[38] |
| 12 | ಮೇಲದೇವ ದಂಡನಾಯಕ | ಬೆಳ್ತೂರು | ಕ್ರಿ.ಶ. 1255[39] |
| 13 | ಸೋಮಣ್ಣ ದಂಡನಾಯಕ | ತಿಪಟೂರು ತಾ. | ಕ್ರಿ.ಶ. 1263[40] |
| 14 | ಮುರಾರಿ ಮಲ್ಲಯ್ಯ ದಂಡನಾಯಕ | ಗೋವಿಂದನಹಳ್ಳಿ | ಕ್ರಿ.ಶ. 12ನೇ ಶತಮಾನ[41] |
| 15 | ನಾಗೇಯ ನಾಯಕ | ಯಲ್ಲೇಸಪುರ | ಕ್ರಿ.ಶ. 12ನೇ ಶತಮಾನ[42] |

ಪ್ರಾಂತ್ಯಗಳು ನಾಡುಗಳಾಗಿ ವಿಭಜಿಸಲ್ಪಟ್ಟಿತ್ತು. ನಾಡುಗಳನ್ನು 'ನಾಡಗೌಡ' ಅಥವಾ 'ನಾಡ ಹೆಗ್ಗಡೆ'ಯು ಆಳುತ್ತಿದ್ದನು. ಅವನು ನಾಡಿನ ಸಾಮಾನ್ಯಾಡಳಿತವನ್ನು ನೋಡಿಕೊಳ್ಳುತ್ತಿದ್ದನು. ಅವನಿಗೆ ಸೇನಾಬೋವನು ಸಹಾಯಕನಾಗಿದ್ದನು. ನಾಡು, ಮಹಾನಾಡುಗಳೆಂಬ ಸಭೆಗಳು, ಸ್ಥಳೀಯ

ಆಡಳಿತದಲ್ಲಿ ಪ್ರಮುಖ ಸ್ಥಾನ ಹೊಂದಿತ್ತು. ದೀಕ್ಷಿತರ ಪ್ರಕಾರ, ಮಹಾನಾಡು ಪ್ರಾಂತೀಯ ಹಾಗೂ ವಾಣಿಜ್ಯ ವ್ಯವಹಾರಗಳನ್ನು ನೋಡಿಕೊಳ್ಳುವ ಸಂಸತ್ತಾದರೆ, ನಾಡು ಎಲ್ಲಾ ಜನರಿಗೆ ಸಂಬಂಧಿಸಿದ ಸಂಸತ್ತಾಗಿತ್ತು.[43] ಮಹಾನಾಡು ದೊಡ್ಡ ಸಭೆಯಾಗಿತ್ತು ಹಾಗೂ ಪ್ರಾಂತೀಯ ಸೌಂದರ್ಯ ವೃದ್ಧಿಸಲು ಕೊಡುಗೆಗಳನ್ನು ನೀಡುತ್ತಿತ್ತು. ನಾಡಿನ ಪ್ರಮುಖ ವರ್ತಕರ ಸಂಘಗಳ ಉಲ್ಲೇಖಗಳೂ ಇವೆ. ಕ್ರಿ.ಶ. 1260ರ ಅರ್ಜುನವಾಡ (ಬೆಳಗಾಂವ್) ದ ಶಾಸನವೊಂದು 'ನಾಲ್ಕು ಪಟ್ಟಣಗಳು' ಎಂದು ಉಲ್ಲೇಖಿಸಿದೆ.[44] ಈ ಶಾಸನವು ಇನ್ನೂ ಮುಂದೆ ಹೋಗಿ, ಮಲೆನಾಡಿನ ಸಂತೆಗಳ ಲಾಭವನ್ನು ನಾಲ್ಕು ಪಟ್ಟಣಗಳು ದೇವಸ್ಥಾನವೊಂದಕ್ಕೆ ಸಮರ್ಪಿಸಿದ್ದನ್ನು ಹೇಳುತ್ತದೆ. ಇನ್ನೊಂದು ಪ್ರಾಂತ್ಯದಲ್ಲೂ ಸಹ, ವರ್ತಕರ ಸಂಘವೊಂದು ಇದ್ದಿದ್ದು, ಅವಶ್ಯಕ ಸಂದರ್ಭದಲ್ಲಿ ಸಭೆ ಸೇರುತ್ತಿತ್ತು. ಈ ಸಭೆಗಳು ಹರಿಹರ[45] ಬೆಣ್ಣೆಪೂರುಗಳಲ್ಲಿ[46] ನಡೆಯುತ್ತಿತ್ತು.

ಮಹಾನಾಡು ಒಮ್ಮೊಮ್ಮೆ ಸಭೆ ಸೇರುತ್ತಿದ್ದರೆ, ನಾಡು ಪದೇ ಪದೇ ಸೇರುತ್ತಿತ್ತು. ಮಹಾನಾಡಿನ ಜಾಗ, ಸದಸ್ಯತ್ವ, ಕಾರ್ಯ ಚಟುವಟಿಕೆಗಳ ಬಗ್ಗೆ ಹೆಚ್ಚೇನು ಮಾಹಿತಿ ದೊರೆಯದಿದ್ದರೆ, ಅದೇ ಕಂಪಣ ಅಥವಾ ಗ್ರಾಮಗಳ ಸಮೂಹವನ್ನೂ ಪ್ರತಿನಿಧಿಸುವ ನಾಡಿನ ಬಗ್ಗೆ ಬಹಳಷ್ಟು ವಿಷಯಗಳು ದೊರೆಯುತ್ತವೆ.

## ನಾಡಿನ ಅಧಿಕಾರಿಗಳು

ನಾಡಗೌಡನು ಹಿರಿಯ ಅಧಿಕಾರಿಯಾಗಿದ್ದನು. ಸುಂಕದ ಹೆಗ್ಗಡೆಯು ಅಬಕಾರಿ ಸುಂಕಗಳನ್ನು ಸಂಗ್ರಹಿಸುತ್ತಿದ್ದನು. ಶ್ರೀ ಕರ್ಣಾನಂದ ಹೆಗ್ಗಡೆಯು ಲೆಕ್ಕಿಗ ಅಧಿಕಾರಿಯಾಗಿದ್ದನು. ಅಧಿಕಾರಿ ಸಾಮಾನ್ಯ ಅಧಿಕಾರಿಯಾಗಿದ್ದರೆ, ಹಲವಾರು ಜಿಲ್ಲೆಗಳ ಉಸ್ತುವಾರಿ ನೋಡಿಕೊಳ್ಳುತ್ತಿದ್ದನು. ಸಂಸತ್ತು ಅಂಗೀಕರಿಸಿದ ನಿಯಮಗಳನ್ನು ನಾಡಗೌಡನು ಜಾರಿಗೆ ತರುತ್ತಿದ್ದನು. ತೆರಿಗೆ ನೀತಿ, ಕೃಷಿಯ ಬೆಳವಣಿಗೆ, ನ್ಯಾಯಾಡಳಿತ, ಸರ್ವಾಂಗೀಣ ಬೆಳವಣಿಗೆ ಅವನ ಹೊಣೆಗಾರಿಕೆಯಾಗಿತ್ತು. ಅವನಿಗೆ ನಾಡಿನ ಆದಾಯಗಳ ಆಡಳಿತದಲ್ಲಿ ಆಸಕ್ತಿ ಇರುತ್ತಿತ್ತು.[47] ತೆರಿಗೆ ರದ್ದುಪಡಿಸುವಾಗ ಅಥವಾ ತೆರಿಗೆಯ ಹಣವನ್ನು ನಿಗದಿತ ಕಾರ್ಯಕ್ಕಾಗಿ ಮೀಸಲಿಟ್ಟಾಗ ನಾಡಗೌಡನು ಅದರ ವಿವರ ನೀಡಬೇಕಾಗಿತ್ತು. ನಾಡಿನ ಲೆಕ್ಕಪರಿಶೋಧಕನನ್ನು 'ನಾಡ ಸೇನಾಬೋವ್' ಎಂದು ಕರೆಯ ಲಾಗುತ್ತಿತ್ತು. ಅವನನ್ನು ಹಳ್ಳಿಯ ಪ್ರತಿನಿಧಿ ಸಭೆ ಆರಿಸುತ್ತಿತ್ತು. ಸ್ಥಾನಗಳು ಸಾಮಾನ್ಯವಾಗಿ ಅನುವಂಶಿಕವಾಗಿತ್ತು. ಅವನು ಸರಕಾರಕ್ಕೂ ಸೇವೆಯನ್ನು ಸಲ್ಲಿಸಬೇಕಿತ್ತು.[48]

## ನ್ಯಾಯಾಡಳಿತ

ನ್ಯಾಯಾಂಗದ ಪರಿಪಾಲನೆಯಲ್ಲಿ ರಾಜನಿಗೆ ಪ್ರಮುಖ ಪಾತ್ರವಿದ್ದಿತು. ಅವನು ಪಂಚ ಪ್ರಧಾನರ ಸಹಾಯದಿಂದ ಪ್ರಮುಖ ವಿವಾದಗಳನ್ನು ಬಗೆಹರಿಸುತ್ತಿದ್ದನು.

## ಟಿಪ್ಪಣಿಗಳು ಮತ್ತು ಉಲ್ಲೇಖಗಳು

1) E.C. ಕೊಳ್ಳೇಗಾಲ, 93, (ಕ್ರಿ.ಶ. 1237) ಪುಟ: 146
2) ಪ್ರೊ. ಬಿ.ಷೇಕ್ ಆಲಿ ಮತ್ತು ಪ್ರೊ.ಜಿ.ಆರ್.ರಂಗಸ್ವಾಮಯ್ಯ: ದಕ್ಷಿಣ ಭಾರತದ ಇತಿಹಾಸ
3) Derret: The Hoysalas: p.122
4) E.C.V, Arkalgud, 12
5) A.R.S.I.E. 1906, No.387, Rangacharya, Vol. III, P. 1652
6) A.R.S.I.E. 1892, No.64: E.I.Vol. II, P. 176
7) Derret: The Hoysalas: P.120
8) ಅದೇ P.122
9) ಅದೇ P.124
10) ಅದೇ P.126
11) ಅದೇ P.128
12) ಪ್ರೊ. ಬಿ.ಷೇಕ್ ಆಲಿ ಮತ್ತು ಪ್ರೊ.ಜಿ.ಆರ್.ರಂಗಸ್ವಾಮಯ್ಯ: ದಕ್ಷಿಣ ಭಾರತದ ಇತಿಹಾಸ
13) MER. 118-124 of 1936-37
14) T.V.Mahalingam, `South Indian Polity', p.12
15) M.A.R. 1902, p.22
16) T.V.Mahalingam, `South Indian Polity', p.12
17) E.C. Vol. V. Gn 269; MAR. 1913, Para 83
18) E.C. Vol. V. Ar. 8
19) Derrett, The Hoysalas, p. 191
20) T.V.Mahalingam, `South Indian Polity', p.120
21) Derret, The Hoysalas
22) Dikahit, Local Self-Government in Mediaeval Karnataka p.19
23) E.C. Vol. VI Cn. 72

24) E.C. Vol. X. Mr. 45

25) E.C. Vol. VI. Cn. 89

26) Derrett, The Hoysalas, P. 189

27) E.C. Vol. V. AK, 117, Hn 144

28) Ibid, XII, 78, Tiptur Taluk

29) Ibid, XI, 33, Jagalur Taluk

30) Ibid, VI, 39, Govindanahalli

31) Ibid, IV, 88, Agara

32) Ibid, VI, 30, Basaralu

33) Ibid, V, 149, Talakadu

34) Ibid, 15, Beluru

35) Ibid, VI, 79, Agarahara Bhahalli

36) Ibid, V, 529, Tagare

37) Ibid, IV, 128, Eduru

38) Ibid, XII, 13, Tiptur Taluk

39) Ibid, III, 48, Belaturu

40) Ibid, XII, 8, Tiptur Taluk

41) Ibid, VI, 38, Govindanahalli

42) Ibid, VIII, 73, Yellespura

43) Dikahit, Local Self-Government in Medieval Karnataka P.35

44) E.I. Vol. XIII. P.26

45) E.C. Vol. XI. Dg.59

46) South Indian Inscriptions IX, (1) No.350

47) E.C. Vol. IV Hg.18

48) E.C. Vol. VI. Cn.89

49) T.V.Mahalingam, `South Indian Polity', P.228

50) MAR. 1911 P.44

51) E.C. Vol. VI. Cn-44

# ಅಧ್ಯಾಯ 3
# ಸಾಮ್ರಾಜ್ಯದ ಕ್ರೋಢೀಕರಣ ಮತ್ತು ವಿಸ್ತರಣೆ

## ವೀರಸೋಮೇಶ್ವರನು ಪಟ್ಟಕ್ಕೆ ಬಂದಾಗ ಇದ್ದ ಸಾಮ್ರಾಜ್ಯ

ವೀರಸೋಮೇಶ್ವರನು ಅಧಿಕಾರಕ್ಕೆ ಬರುವ ಮುನ್ನ ಹೊಯ್ಸಳ ಸಾಮ್ರಾಜ್ಯವು ಇಡೀ ದಕ್ಷಿಣ ಭಾರತದಲ್ಲೇ ಅಜೇಯ ಸಾಮ್ರಾಜ್ಯವೆಂದು ಕರೆಸಿಕೊಂಡಿದ್ದರೂ, ಈತನ ಕಾಲಾವಧಿಯಲ್ಲಿ ಅಂದರೆ ಸೋಮೇಶ್ವರನು ಸಿಂಹಾಸನಾರೂಢನಾದಾಗ ಕೆಲವು ಪ್ರಾಂತ್ಯಗಳು ಕೈಬಿಟ್ಟು ಹೋಗಿದ್ದವು. ಆದರೂ ಈತನು ತಮಿಳುನಾಡಿನವರೆಗೂ ತನ್ನ ಸಾಮ್ರಾಜ್ಯ ವಿಸ್ತರಣೆ ಮಾಡಿ, ಮುಖ್ಯವಾಗಿ ಅಲ್ಲೇ ಆಡಳಿತ ನಡೆಸಿ, ಇನ್ನೊಂದು ಕೇಂದ್ರವಾದ ದ್ವಾರಸಮುದ್ರಕ್ಕೆ ಆಗಾಗ್ಗೆ ಭೇಟಿ ನೀಡುತ್ತಿದ್ದನು.

ಸಾಮ್ರಾಜ್ಯವನ್ನು ರಾಜ್ಯಗಳಾಗಿ ಅಥವಾ ಪ್ರಾಂತ್ಯಗಳಾಗಿ ವಿಭಜನೆ ಮಾಡಲಾಗಿತ್ತು. ಅಲ್ಲಿ ಯುವರಾಜಕುಮಾರರು ಅಥವಾ ಪ್ರಾಂತ್ಯಾಧಿಕಾರಿಗಳು ಆಡಳಿತ ನಡೆಸುತ್ತಿದ್ದರು. ಸ್ವತಃ ವೀರ ಸೋಮೇಶ್ವರನೇ ಕ್ರಿ.ಶ. 1228ರಲ್ಲಿ ಅಧಿಕಾರಕ್ಕೆ ಬರುವ ಮುನ್ನ ತಮಿಳುನಾಡಿನ ಪ್ರಾಂತ್ಯಾಧಿಕಾರಿಯಾಗಿ ಕಾರ್ಯ ನಿರ್ವಹಿಸುತ್ತಿದ್ದನ್ನು ತಿಳಿಯಬಹುದಾಗಿದೆ.[1] ರಾಜ್ಯ ವಿಸ್ತರಣೆಯ ಜೊತೆಗೆ ಸಾಮ್ರಾಜ್ಯದಲ್ಲಿ ಶಾಂತಿ ಸುವ್ಯವಸ್ಥೆಗಳನ್ನು ಕಾಪಾಡುವ ಹಾಗೂ ಅಕ್ಕಪಕ್ಕದ ರಾಜರುಗಳ ಆಕ್ರಮಣಕ್ಕೆ ರಾಜ್ಯ ತುತ್ತಾಗದಂತೆ ರಕ್ಷಿಸುವ ಮಹತ್ತರ ಹೊಣೆಗಾರಿಕೆಯ ಕಾರ್ಯ ಸೋಮೇಶ್ವರನದ್ದಾಗಿತ್ತು. ಅವನ ಆಳ್ವಿಕೆಯ ಸಮಯದಲ್ಲಿ ಹೊಯ್ಸಳರ ನೆರೆರಾಜ್ಯಗಳೆಂದರೆ, ಈಶಾನ್ಯದಲ್ಲಿ ವಾರಂಗಲ್‌ನ ಕಾಕತೀಯರು ಉತ್ತರದಲ್ಲಿ ಸೇವುಣರು, ದಕ್ಷಿಣದಲ್ಲಿ ಪಾಂಡ್ಯರು, ಕಾಡವರು, ಚೇರರು, ಚೋಳರು ಆಡಳಿತ ನಡೆಸುತ್ತಿದ್ದರು.

## ದಕ್ಷಿಣದಲ್ಲಿ ಸೋಮೇಶ್ವರನ ನೀತಿ

ಹೊಯ್ಸಳ ರಾಜರುಗಳಲ್ಲಿ ಸೋಮೇಶ್ವರನ ಆಳ್ವಿಕೆಯು ಬಹಳ ದುರಂತಮಯವಾದುದಾಗಿ ಕಾಣುತ್ತದೆ. ಅವನ ಅನೇಕ ಪೂರ್ವಜರು ಹಾಗೂ ಅವನ ವಂಶಸ್ಥರು ಹಲವಾರು ಸೋಲುಗಳು ಮತ್ತು ವಿಫಲತೆಗಳನ್ನು ಅಥವಾ ಅಂತಹ ಕಹಿ ಅವಮಾನಗಳನ್ನು ಸ್ವಅಭಿನಂದನೆಯಾಗಿ ಸ್ವೀಕರಿಸುವ ಅವಕಾಶವನ್ನು ಹೊಂದಿರಲಿಲ್ಲ. ಸೋಮೇಶ್ವರನ ದೇಶದ ಮೇಲೆ ಹೆಚ್ಚು ಅವಲಂಬಿತವಾದುದು. ಆದರೆ ಅವನ ಕಾರ್ಯಾಚರಣೆಗಳಲ್ಲಿ ಇದೊಂದನ್ನೇ ಏರುಪೇರುಗಳ ಕೂಪವನ್ನಾಗಿಸುವುದು ಅಸಮರ್ಪಕ. ಇಲ್ಲಿನ ವಾಸ್ತವದ ಸಂಗತಿಯೆಂದರೆ ಈ ಘಟ್ಟಗಳ ಕೆಳಗೆ ಸಾಮ್ರಾಟನು

ಅವನೇ ಸ್ವತಃ ಈ ದೇಶಕ್ಕೆ ವಿಲೀನಗೊಂಡಿರುವುದಲ್ಲದೆ, ತನ್ನದೇ ವಂಶಪಾರಂಪರ್ಯ ಮೈದಾನ ಪ್ರದೇಶದ ಮಾಮೂಲಿಯ ಜವಾಬ್ದಾರಿಗಳನ್ನು ನಿಭಾಯಿಸುವ ಹೊಣೆಗಾರಿಕೆಗಿಂತ ಆ ಘಟ್ಟದ ಕೆಳಗಿನ ಪ್ರದೇಶದ ಸಂಘರ್ಷ ಮನೋಭಾವದಿಂದ ಕೂಡಿದ ಶತ್ರುಗಳನ್ನು ಹೋರಾಡಲು ಹೆಚ್ಚು ಸಮರ್ಥನಾಗಿದ್ದನು. ಈ ಬಯಲು ಪ್ರದೇಶದಲ್ಲಿ ಅವನನ್ನು ಯಾವುದೇ ತಪ್ಪಿನಿಂದ ಅವನು ಕೈಗೊಂಡ ರಾಜತಂತ್ರದಲ್ಲಿ ನಾವು ಆಪಾದಿಸಿರಬಹುದು. ಆದರೆ ಅವನು ಕೆಲವೇ ಕೆಲವರು ಮಾತ್ರ ತಿಳಿದುಕೊಳ್ಳಬಹುದಾದ ಗಹನ ವಿಚಾರಗಳಲ್ಲಿ ತಲ್ಲೀನನಾಗಿದ್ದನು. ಹೊಯ್ಸಳ ನಾಡಿನಲ್ಲಿ ಸುವ್ಯವಸ್ಥೆಯನ್ನು ಕಾಪಾಡುವ ಕಾರ್ಯವು ಕರ್ನಾಟಕ ರಾಜಕೀಯ ಚತುರ ಗರಡಿಯಲ್ಲಿ ಬೆಳೆದವನಿಗಿಂತ ಹೆಚ್ಚಾಗಿ ಕಡುಕಷ್ಟದ ಮಧ್ಯೆ ಬೆಳೆದವನಿಗೆ ಮಾತ್ರ ಅದು ಸಾಧ್ಯವಾಗುವ ಮಾತಾಗಿತ್ತು.

ಎರಡನೇ ಬಲ್ಲಾಳನ ಕಾಲದಲ್ಲಿ ಬಹಳ ಜಾಗರೂಕತೆಯಿಂದ ಸಾರ್ವಜನಿಕ ಸುವ್ಯವಸ್ಥೆಯನ್ನು ಕಾಪಾಡಿದ ವ್ಯಕ್ತಿಗೆ ಮಾತ್ರ ಮೇಲಿನ ಅಂಶಗಳು ಎಡೆಮಾಡಿಕೊಟ್ಟ ಕ್ಲಿಷ್ಟತೆಗಳನ್ನು ಸ್ಪಷ್ಟವಾಗಿ ಅರ್ಥಮಾಡಿಕೊಳ್ಳಲು ಸಾಧ್ಯ ಮತ್ತು ಇದರ ವ್ಯಾಕುಲತೆಯ ಮೂಲವಾದ ನ್ಯೂನತೆಯು ವಿಷ್ಣುವರ್ಧನನಂತೆ ಇವನಿಗೂ ಕೂಡ ಇತ್ತು. ನಾವು ಸುರಕ್ಷತೆಯ ಅಂತರದಿಂದ ನೋಡಿದಾಗ ಸೋಮೇಶ್ವರನು ಆ ಬಯಲು ಪ್ರದೇಶದಲ್ಲಿ ನೆಲೆಸಿದ್ದ ವಿಚಿತ್ರ ಪರಿಸ್ಥಿತಿಗಳ ಬಗ್ಗೆ ಸಾಮಾನ್ಯವಾಗಿ ಕೊಡುತ್ತಿದ್ದ ಗಮನಕ್ಕಿಂತ ಹೆಚ್ಚಿನ ಗಮನವನ್ನು ಹರಿಸಬೇಕಾಗಿತ್ತು. ಏಕೆಂದರೆ ತಮಿಳುನಾಡಿನ ಅರ್ಹ ಜಯವು ಅಲ್ಲಿನ ಸ್ಥಿತಿಗತಿಯನ್ನು ಮತ್ತೆ ತೀರಾ ಹದಗೆಡಿಸಿತ್ತು. ಚೋಳನ ನೆರವಿಗೆ ಹೋದ ಎರಡನೇ ಬಲ್ಲಾಳನ ಮೂಲ ಉದ್ದೇಶವೇನಿತ್ತೆಂದರೆ ಸೇವುಣರಿಂದ ಬೆಳವೊಳ, ಹಲಸಿಗೆ ಮತ್ತು ಬನವಾಸಿಯನ್ನು ಮರಳಿ ಪಡೆಯಲು ಪ್ರತ್ಯಕ್ಷವಾದ ಅಥವಾ ಪರೋಕ್ಷವಾದ ಹಾದಿಯನ್ನು ಹುಡುಕುವುದಾಗಿತ್ತು ಎಂಬುದನ್ನು ಈ ಮೂಲಕ ಸ್ಮರಿಸಬಹುದಾಗಿದೆ.[2] ಆದರೆ ಸಮಯ ಕಳೆದಂತೆ ದಕ್ಷಿಣದಲ್ಲಿ ಸಮೃದ್ಧಿಯುಳ್ಳ ಸಂಪತ್ತನ್ನು ಗಳಿಸಬೇಕೆಂಬುದು ಸ್ಪಷ್ಟವಾಯಿತು. ಆದರೆ ಆ ಸಂಪತ್ತನ್ನು ಪಡೆಯಲು ಸಾಕಷ್ಟು ಗಮನವನ್ನು ಕೇಂದ್ರೀಕರಿಸಬೇಕಾಗಿತ್ತು. ಇದನ್ನು ತುಂಬಿಸಲು ಅಪರೂಪವಾಗಿ ಬಲಿತ್ಯಾಗಗಳೂ ಅತ್ಯವಶ್ಯವೆನಿಸಿದ್ದವು. ಆದ್ದರಿಂದ ಕಾವೇರಿ ತೀರದ ಸಂಸ್ಥಾನದ ನಿಯಂತ್ರಣದಲ್ಲಿ ಹೊಯ್ಸಳ ರಾಜನಿಗೆ ಲಾಭವೋ ನಷ್ಟವೋ ಎಂಬುದನ್ನು ನಿರ್ಧರಿಸುವ ಕಾಲವು ಬರುವ ಸಾಧ್ಯತೆಯಿತ್ತು. ಹೊಯ್ಸಳ ರಾಜ್ಯದ ಹಿತಾಸಕ್ತಿಯಲ್ಲಿ ಶ್ರೇಷ್ಟ ಆಸಕ್ತಿಯನ್ನು ಹೊಂದಿದ ರಾಜನಿಗೆ ಮಾತ್ರ ಆ ಬಯಲು ಪ್ರದೇಶದಲ್ಲಿ ಅಲ್ಲಿನ ದುರ್ಗಮವನ್ನು ಎದುರಿಸುವ ಸಾಮರ್ಥ್ಯವಿತ್ತು. ಆದರೆ ದಕ್ಷಿಣದಲ್ಲಿ ಬೆಳೆದ ಸೋಮೇಶ್ವರನು ಅಲ್ಲಿನ ಪರಿಸ್ಥಿತಿಗೆ ದೂರವಾಗಿದ್ದನು ಹಾಗೂ ದ್ವಾರಸಮುದ್ರದೆಡೆಗಿನ

ತನ್ನ ಪ್ರಯಾಣವು ಬಹಳ ಪ್ರಯಾಸಕರ ಎಂದು ಪರಿಗಣಿಸಿದ್ದನು. ಕಣ್ಣಾನೂರನ್ನು ಉಳಿಸಿಕೊಳ್ಳುವ ಅವನ ಶತಾಯ ಗತಾಯ ಪ್ರಯತ್ನವು ವಿಫಲವಾಗುವುದೆಂದು ತಿಳಿದಿದ್ದರೂ ಅವನು ಮಾಡಿದ ದುಸ್ಸಾಹಸದಿಂದಾಗಿ ಅವನ ಸೋಲು ತುಂಬಲಾರದ ನಷ್ಟವನ್ನುಂಟು ಮಾಡಿತು. ಇಷ್ಟರಲ್ಲಿ ಆ ಬಯಲು ಪ್ರದೇಶದಲ್ಲಿನ ಪ್ರಭಾವೀ ಹಿತಾಸಕ್ತಿಗಳನ್ನು ಬೇರ್ಪಡಿಸಲಾಗುತ್ತಿತ್ತು ಮತ್ತು ದಕ್ಷಿಣದ ದಂಡಯಾತ್ರೆಯ ವೆಚ್ಚವು ತಮಿಳು ದೇಶದ ಅಪಾರ ಸಂಪತ್ತಿನ ಒಳಹರಿವಿನೊಂದಿಗೆ ಹೊಯ್ಸಳ ಸಾಮ್ರಾಜ್ಯದ ಆರ್ಥಿಕತೆಯನ್ನು ಕಾಪಾಡಲು ಪ್ರಾರಂಭಿಸಿತು. ಬೆಲೆಗಳನ್ನು ನಿಯಂತ್ರಿಸಲು ಹಾಗೂ ಎಲ್ಲಾ ವರ್ಗದವರಲ್ಲೂ ದಂಗೆಯನ್ನೆಬ್ಬಿಸಲು ಕಾರಣವಾಯಿತು.

ಚೋಳ ಮತ್ತು ಪಾಂಡ್ಯರ ವಂಶಗಳ ನಡುವಿನ ಅಧಿಕಾರದಲ್ಲಿ ಸಮಾನತೆಯನ್ನು ಕಾಪಾಡುವಲ್ಲಿ ತಾನು ಚಾಣಾಕ್ಷ ಎಂದು ನಿಸ್ಸಂದೇಹವಾಗಿ ತಿಳಿದನು. ಈ ಯೋಜನೆಯಲ್ಲಿ ಕೇವಲ ಮೂರು ಪಕ್ಷಗಳು ಸಂಬಂಧಿಸಿದ್ದರೆ ಎಲ್ಲವೂ ಸರಿಯಾಗುತ್ತಿತ್ತು. ಆದರೆ ಚೋಳರು ಕಾಡವ, ನೆಲ್ಲೂರಿನ ತೆಲುಗು, ತಿಕ್ಕ ಗಂದಗೋಪಾಲ ಮತ್ತು ಅವರೆಲ್ಲರಿಗಿಂತ ಹೆಚ್ಚಾಗಿ ಕಾಕತೀಯ ಗಣಪತಿ ಯವರ ಬೆಂಬಲವನ್ನು ಹೊಂದಿದ್ದರು. ಅವನ ಇನ್ನೂ ಕೆಲವು ಮಿತ್ರಪಕ್ಷಗಳು ಹೊಯ್ಸಳರ ಉಪ ಸ್ಥಿತಿಯನ್ನು ವಿರೋಧಿಸಿದರು. ಹಾಗೂ ಚೋಳ ಸಾಮ್ರಾಜ್ಯವನ್ನು ಹೊಯ್ಸಳರಿಂದ ಬೇರ್ಪಡಿಸಲು ಅವರದೇ ಆದ ಕಾರಣಗಳಿದ್ದವು. ಅದೇ ರೀತಿಯಲ್ಲಿ ಚೋಳ ಆಸ್ಥಾನವು ಒಂದು ನಿಶ್ಚಿತ ಅಭಿಪ್ರಾಯ ವನ್ನು ಹೊಂದಿರಲಿಲ್ಲ. ಬಹುಶಃ ರಾಜರಾಜನ ಮಗನಾದ ಮೂರನೇ ರಾಜೇಂದ್ರನು ಅವನ ಸ್ವಂತ ಹಕ್ಕಿನಿಂದ 1246ರಲ್ಲಿ ಆಳಲು ಪ್ರಾರಂಭಿಸಿದನು ಹಾಗೂ ಮೂರನೇ ರಾಜರಾಜನು ಇವನ ಅಳಿಯ ನಾಗುವ ಪರಿಸ್ಥಿತಿಯಲ್ಲಿ ಇವನು ಯಾವುದೇ ರೀತಿಯಲ್ಲೂ ಅದಕ್ಕೆ ಬದ್ಧನೆಂದು ಪರಿಗಣಿಸಲಿಲ್ಲ. ಇವರಿಬ್ಬರಿಗಿಂತಲೂ ಅವನಿಗೆ ಹೆಚ್ಚು ಆಸೆ ಮತ್ತು ಸಾಮರ್ಥ್ಯವಿತ್ತು ಹಾಗೂ ಚೋಳ ದೇಶದಲ್ಲಿದ್ದ ಹೊಯ್ಸಳರನ್ನು ವಿರೋಧಿಸಲು ಇವನು ತಡಮಾಡಲಿಲ್ಲ.

1236ರಲ್ಲಿ ಸೋಮೇಶ್ವರನು ಅಲ್ಲಿ ಉತ್ತಮ ನೆಲೆಯನ್ನು ಹೊಂದಿದ್ದನು ಮತ್ತು ಅವನ ಸಾಕುತಾಯಿ ಸೋಮಲಾ, ಅವನ ತಂದೆ, ಅಜ್ಜ ಮತ್ತು ಅಜ್ಜಿಯ ಹೆಸರಿನಲ್ಲಿ ಮೂರ್ತಿಗಳನ್ನು ಪ್ರತಿಷ್ಠಾಪಿಸುತ್ತಿರುವುದನ್ನು ನಾವು ಕಾಣುತ್ತೇವೆ.

1236ರ ಮೇ ತಿಂಗಳಿಗಿಂತ ಮೊದಲು ಪಾಂಡ್ಯರು ಚೋಳ ರಾಜ್ಯದ ಮೇಲೆ ದಾಳಿ ನಡೆಸಿದರು. ಆದರೆ ಹೊಯ್ಸಳ ಸೇನೆಯಿಂದ ಸೋಲಲ್ಪಟ್ಟರು. ಸನ್ನಿವೇಶಗಳು ಈ ರೀತಿ

ಇದ್ದವೆಂದು ತೋರುತ್ತದೆ. ತಿರುನೇವಲಿಯ ಒಂದು ಶಾಸನವು ಹೇಳುವಂತೆ, ಚೋಳರಾಜನಾದ ರಾಜೇಂದ್ರನು ಪಾಂಡ್ಯರಿಗೆ ಅಧೀನನಾಗಿ ಇರಲು ಇಚ್ಛಿಸಲಿಲ್ಲ ಮತ್ತು ಪುನಾಲ್‌ನಾಡು ಅಂದರೆ ಕಾವೇರಿ ಕಣಿವೆ ಪ್ರದೇಶವು ಹೊಯ್ಸಳರಿಗಿಂತ ಚೋಳರಿಗೆ ಸೇರಿತ್ತೆಂದು ತಿಳಿದನು ಹಾಗೂ ಪಾಂಡ್ಯರ ವಿರುದ್ಧ ಚೋಳರ ಸ್ವತಂತ್ರ ರಾಜ್ಯವನ್ನು ಸ್ಥಾಪಿಸಲು ಒಂದು ಬೃಹತ್ ಸೇನೆಯನ್ನು ಕಳುಹಿಸಿಕೊಟ್ಟನು. ಪಾಂಡ್ಯರು ಈ ಸೈನ್ಯವನ್ನು ಸೋಲಿಸಿದುದಾಗಿ ಆನಂತರ ಮಾರವರ್ಮನ್ ಪಾಂಡ್ಯನು ಮುದಿಗೊಂಡ ಚೋಳಪುರಂ ಅನ್ನು ಪ್ರವೇಶಿಸಿ ಅಲ್ಲಿ ವೀರರ ಅಭಿಷೇಕವನ್ನು ಆಚರಿಸಿದನು. ಕೇವಲ ಪಾಂಡ್ಯರಿಂದ ಬಂದ ಬೆದರಿಕೆ ಹೆದರಿ ರಾಜೇಂದ್ರನು ಕಾವೇರಿ ತೀರದ ಮೇಲಿನ ತನ್ನ ನಿಯಂತ್ರಣವು ಕೈತಪ್ಪಿ ಹೋಗಿದೆಯೆಂದು ತಿಳಿದಿದ್ದನು. ಹಾಗೂ ಈ ರೀತಿಯಾದ ಸಂದಿಗ್ಧತೆಯು ದೂರವಾದಲ್ಲಿ ಆ ಸಂಪದ್ಭರಿತವಾದ ಆಡಳಿತ ಪ್ರದೇಶದಿಂದ ಸೋಮೇಶ್ವರನನ್ನು ಶಾಶ್ವತವಾಗಿ ಓಡಿಸುವುದಾಗಿ ಯೋಚಿಸಿದನು. ಹೊಯ್ಸಳರು ಯಾವುದೇ ತಡಮಾಡದೆ ಕ್ರಿಯಾ ಶೀಲರಾದರು ಎಂದು ತಿಳಿಯುತ್ತದೆ.

ಇವನಿಗೆ ಪಾಂಡ್ಯರು ಚಾರಿತ್ರಿಕ ಪಟ್ಟಣವಾದ ಮುರಿಗೊಂಡ ಚೋಳಪುರಂನ್ನು ಪ್ರವೇಶಿಸುವುದನ್ನು ತಡೆಯಲಾಗಲಿಲ್ಲ. ಈ ಪಟ್ಟಣವು ಕಾವೇರಿಯ ದಕ್ಷಿಣ ನದಿ ತೀರಕ್ಕೆ ಹಾಗೂ ಕಣ್ಣಾನೂರು ಸಂಸ್ಥಾನದ ಗಡಿ ಪ್ರದೇಶದ ಕೆಳಭಾಗದಲ್ಲಿತ್ತು. ಸೋಮೇಶ್ವರನು ರಾಜೇಂದ್ರನ ಸೇನೆಯು ಸೋಲುವುದನ್ನು ಕಾಯುತ್ತಿದ್ದನು. ಈ ಘಟನೆಯಿಂದ ಅವನಿಗೆ ಯಾವುದೇ ರೀತಿಯ ಅನಾನುಕೂಲವಾಗಿರಲಿಲ್ಲ. ಹಾಗೆಯೇ ಇವನು ಕಾರ್ಯೋನ್ಮುಖವಾಗುವ ಮುನ್ನ ಆ ಪಟ್ಟಣದಲ್ಲಿ ಪಾಂಡ್ಯರು ವಶವಾಗಬೇಕೆಂದು ಆಶಿಸಿದ್ದನು. ಇವನು ಕಾವೇರಿಯನ್ನು ದಾಟಿದನು. ಪಾಂಡ್ಯದ ಮುಖ್ಯ ಬಲವನ್ನು ತಡೆಯುವ ಸಲುವಾಗಿ ದಕ್ಷಿಣದೆಡೆಗೆ ನಡೆದನು. ಹಾಗೂ ಅಲತ್ತೂರು ಮತ್ತು ತಿರುಗೋಕರ್ಣಂನ ದಕ್ಷಿಣದ ಭಾಗದಿಂದ ಆರಂಭಗೊಂಡ ಪಾಂಡ್ಯರ ನಾಡಿನ ಮೇಲೆ ಮುತ್ತಿಗೆ ಹಾಕಿದನು. ನಂಬಲಾರ್ಹವಾದ ಒಂದು ಶಾಸನವು ವರ್ಣಿಸುವ ಪ್ರಕಾರ ಅವನ ಶಕ್ತಿ ಮತ್ತು ಪರಾಕ್ರಮದಿಂದ ಗೆದ್ದ ಪಾಂಡ್ಯನಾಡಿನಲ್ಲಿ ಇವನು ವಾಸಿಸುತ್ತಿದ್ದನು. ಇವನ ಇಬ್ಬರು ಮಂತ್ರಿಗಳಾದ ಬೋರಣ್ಣ ಮತ್ತು ಮಲ್ಲಣ್ಣರು ಪಾಂಡ್ಯರ ದಾಳಿಕೋರರ ಆಕರ್ಷಣೀಯ ಸೇನಾನೆಲೆಯಾಗಿದ್ದು ರಾಮೇಶ್ವರಂ ಕಡೆ ಸಾಗಿದರು. ದೊಡ್ಡ ಪ್ರಮಾಣದ ಹೋರಾಟ ನಡೆಯಿತು.

ಈ ರೀತಿಯಾದ ಇಕ್ಕಟ್ಟಿನ ಪರಿಸ್ಥಿತಿಯಲ್ಲಿ ಪಾಂಡ್ಯರು ಅವರ ಹಳೆಯ ಮಿತ್ರ ಸೇನೆಯಾದ ಕಾಡವರನ್ನು ಸಹಾಯಕ್ಕಾಗಿ ಕರೆದರು. 1236ರ ಡಿಸೆಂಬರ್‌ನಲ್ಲಿ ಸೋಮೇಶ್ವರನು ಸ್ವತಃ ತಾನೇ

ಕಾಡವರಾಯನ ವಿರುದ್ಧದ ವಿಜಯದ ದಂಡಯಾತ್ರೆಯಲ್ಲಿ ಮಂಗಳದ ಕೊಪ್ಪದಲ್ಲಿ ಇದ್ದನು. ಆದರೆ ಕಾಡವ ಕೊಪ್ಪರುಂಜಿಂಗನು ಕಣ್ಣಾನೂರಿನ 20 ಮೈಲು ಉತ್ತರಕ್ಕಿರುವ ಪೆರಂಬೂರಿನಲ್ಲಿ ಸೋಮೇಶ್ವರನ ಇಬ್ಬರು ಬ್ರಾಹ್ಮಣ ದಣ್ಣಾಯಕರನ್ನು ಕೊಂದು ಅವರ ಪತ್ನಿಯರು ಮತ್ತು ಸಂಪತ್ತನ್ನು ವಶಪಡಿಸಿಕೊಂಡಿದ್ದರಿಂದ ಬಹಳ ಎಚ್ಚರಿಕೆಯನ್ನು ವಹಿಸಬೇಕಾಗಿತ್ತು. ಈ ಪಾಪಕ್ಕೆ ಶೀಘ್ರದಲ್ಲಿಯೇ ಪ್ರಾಯಶ್ಚಿತ್ತವನ್ನು ಅವನು ಮಾಡಿದನು. ಆದರೆ ಈ ಘಟನೆಯಲ್ಲಿ ಹೊಯ್ಸಳ ರಾಜನು 'ಕಾಡವ ರಾಜನನ್ನು ಬೆನ್ನಟ್ಟಿದ ಪರಾಕ್ರಮಿ' ಎಂಬ ಬಿರುದನ್ನು ಪಡೆದನು ಮತ್ತು ಅಸಹಾಯಕ ರಾಜೇಂದ್ರನಿಗೆ ಮೊಂಡತನವು ಅವನ ಸೇನೆಯಲ್ಲಿದ್ದ ನಿಸ್ವಾರ್ಥ ಇಬ್ಬಗೆಯ ದಂಡೆಯಾತ್ರೆಗೆ ಕೀರ್ತಿ ತಂದುಕೊಡುವಂತೆ ಮಾಡಿದನು. ಆ ವರ್ಷದ ಒಂದು ಕನ್ನಡ ಶಾಸನವು ಈ ರೀತಿ ಹೇಳುತ್ತದೆ.[4] ಈ ಶೂರ ಸೋವಿದೇವನು ರಾಜರುಗಳನ್ನು ನಾಶಮಾಡುವುದು ಹಾಗೂ ಪೋಷಿಸುವುದನ್ನು ಅಭ್ಯಾಸ ಮಾಡಿದನು. (ಹರ ಮತ್ತು ಹರಿ ದೇವರುಗಳಂತೆ) ಅವರನ್ನು ಯುದ್ಧ ದಲ್ಲಿ ಯಾವುದೇ ಅಂಜಿಕೆಯಿಲ್ಲದೆ ಬೇರು ಸಮೇತ ಕಿತ್ತು ಹಾಕಿದನು ಮತ್ತು ರಾಜೇಂದ್ರ ಚೋಳನನ್ನು ದೀನನಾಗಿ ರಕ್ಷಿಸಿದನು.

ಈ ಯುದ್ಧದಲ್ಲಿ ಪಾಂಡ್ಯರು ಹಾಗೂ ಕಾಡವರ ವಿರುದ್ಧ ಸಂಪತ್ತನ್ನು ಸೂರೆಹೊಡೆದ ಸೋಮೇಶ್ವರನು ತನ್ನ ವಿಜಯವನ್ನು ಎಲ್ಲ ದಿಕ್ಕಿಗೂ ಸಾರಿದನು. ಉತ್ತರದ ಬಯಲುನಾಡಿಗೆ ಹಂಪೆಯ ವಿರೂಪಾಕ್ಷ ದೇವರಿಗೆ ತನ್ನ ಹೆಸರಿನಲ್ಲಿ ಚಿನ್ನದ ಕಾಣಿಕೆಯನ್ನು ತನ್ನ ರಾಯಭಾರಿಯ ಮೂಲಕ ಕಳುಹಿಸಿಕೊಟ್ಟನು. ನಂತರ ವಿಜಯನಗರ ಹಾಗೂ ಪಂಡರಾಪುರದ ವಿಠ್ಠಲಕ್ಕೂ ಒಬ್ಬ ರಾಯಭಾರಿಯನ್ನು ಕಳುಹಿಸಿದನು. ಇದು ಸೇವುಣನನ್ನು ಬಹಳ ಆಕರ್ಷಿಸಿತು. ಇದು ಅವನ ಮಾಹಿತಿಗಾಗಿ ಉದ್ದೇಶಿತವಾಗಿತ್ತು. ಇಷ್ಟರಲ್ಲಿ ವಲ್ಲಯ ದಟ್ಟನಾಯಕನು ತಿರುಮಲಾದೇವಿಗೆ ಕೊಡುಗೆಯನ್ನು ನೀಡಿದನು. ಸೋಮಲಾದೇವಿಯ ಮನೆತನದ ಹಲವು ಅಧಿಕಾರಿಗಳು ತಿರುಗೋಕರ್ಣಂಗೆ ದಾನ ಮಾಡಿದರು. ಪೊಲಲ್ವ ದಣ್ಣನಾಯಕನು ಕಾಸೆಗೆ ಕಾಣಿಕೆಯನ್ನು ನೀಡಿದನು. ಸೋಮಲಾದೇವಿಯು ಸ್ವತಃ (ಸೋಮೇಶ್ವರನ ಸಾಕುತಾಯಿಯಲ್ಲಿ ಬದಲಾಗಿ ಅವನ ರಾಣಿಯಲ್ಲೊಬ್ಬಳು ಎಂದು ಕಾಣುತ್ತದೆ) ಶ್ರೀರಂಗಂಗೆ ಕೊಡುಗೆಯನ್ನು ನೀಡಿದಳು. ಯಾದವ ಸೋಮೇಶ್ವರ ಮತ್ತು ಅವನ ರಾಣಿ ದೇವಿಕಾ ಕೊಟ್ಟ ಕೊಡುಗೆಯ ಶಾಸನವು ಪೂರ್ಣ ಅರ್ಧದಲ್ಲೇ ಉಳಿದುದು ಬಹುಶಃ ಇದೇ ಕಾಲಕ್ಕೆ ಸೇರುತ್ತದೆ. ಕಣ್ಣಾನೂರಿನಲ್ಲಿ ಸೋಮೇಶ್ವರನ ಪರಿಸ್ಥಿತಿಯು ಉತ್ತಮವಾಗಿರುವ ರೀತಿಯಲ್ಲಿ ಕಂಡಿತು. ಹೊಯ್ಸಳ ಅಧಿಕಾರಿಗಳು ಅವರಿಗೆ ಮನ

ಬಂದಂತೆ ತಮಿಳುದೇಶದ ಎಲ್ಲಾ ಭಾಗಗಳಿಗೂ ಪ್ರವೇಶಿಸಿದರು. ಇದೆಲ್ಲವಕ್ಕೂ ಸಂಬಂಧಿಸಿದಂತೆ ಸುಮಾರು 1237ರ ಒಂದು ಶಾಸನವು ಸ್ವಲ್ಪ ಪ್ರಮಾಣದ ಆಧಾರವನ್ನು ಹೊಂದಿದೆ. ಅವನ ಗಡೀ ಪ್ರದೇಶವು ದಕ್ಷಿಣದಲ್ಲಿ ಶ್ರೀರಂಗಂ, ಉತ್ತರದಲ್ಲಿ ಸಾವಿಮೂಲೆ ಮತ್ತು ಪೂರ್ವದಲ್ಲಿ ನಂಗಲ ಎಂದು ತಿಳಿಯಲಾಗಿದೆ. ಕಣ್ಣಾನೂರು ಸಂಸ್ಥಾನ ಮತ್ತು ಪಾಂಡ್ಯ ದೇಶಗಳ ಮಧ್ಯೆ ಪ್ರವೇಶಿಸಿದ ಚೋಳ ಜಿಲ್ಲೆಗಳಲ್ಲಾಗಲಿ ಅಥವಾ ಆ ದೇಶದಲ್ಲೇ ಆಗಲಿ ಅಥವಾ ಕಾನ್ವಿಯ ಪ್ರದೇಶದಲ್ಲೇ ಆಗಲಿ ಏನನ್ನೂ ಹೊಂದಲು ಸಾಧ್ಯವಾಗಲಿಲ್ಲ. ಈ ಉದ್ದೇಶಕ್ಕಾಗಿಯೇ ಉತ್ತರದಲ್ಲಿ ಆರಿಸಿದ್ದ ಗಡಿಯು ವಿಷ್ಣುವರ್ಧನನ ಕಾಲದಲ್ಲೇ ಸ್ಥಾಪಿಸಲ್ಪಟ್ಟಿತ್ತು. ಅವನು ಹೊಸದಾಗಿ ಸಂಪಾದಿಸಿದ ಕೀರ್ತಿಯ ಹೊರತಾಗಿಯೂ ಆ ತಪ್ಪಲು ಪ್ರದೇಶದಲ್ಲಿ ಅವನ ಕೀರ್ತಿಯು ಹೊಯ್ಸಳರ ಪಾರುಪತ್ಯದಡಿಯಲ್ಲಿ ಕನ್ನಡ ಹಾಗೂ ಹಿಂದಿನ ತಮಿಳು ಅಧಿಕಾರಿಗಳ ಮಧ್ಯೆ ಏರ್ಪಡುತ್ತಿದ್ದ ವಿಧ್ವಂಸಕ ಯುದ್ಧ ಸ್ಥಿತಿಗಳನ್ನು ತಡೆಯಲು ಸಾಧ್ಯವಾಗಿರಲಿಲ್ಲ. ಪೂರ್ವದ ಕೆಲವು ನಾಡ ಆಳ್ವರಾದ ಇಲವಂಜಿಯ ರಾಯರ್‌ಗಳು ಸೋಮೇಶ್ವರನ ನಿಷ್ಟ ಸೇವಕರ ಜೊತೆ ಜಗಳ ಕಾಯಲು ಯಾವಾಗಲು ಸಜ್ಜಾಗಿ ನಿಂತಿದ್ದರು. 1237ರ ವಸಂತ ಋತುವಿನಲ್ಲಿ ಸಾಮ್ರಾಟನೇ ಸ್ವತಃ ದಂಡೆತ್ತಿ ಹೋದನು. ಆ ವರ್ಷದ ಅಕ್ಟೋಬರ್‌ನಲ್ಲಿ ಗುರುತಿಸಲಸಾಧ್ಯವಾದ ಸ್ಥಳವಾದ ಡೋಕೇಲ್‌ನಲ್ಲಿದ್ದನು. ನಂತರದ ವರ್ಷದ ಅಂತ್ಯ ಭಾಗದ ಹೊತ್ತಿಗೆ 'ಅವನೇ ಸೃಷ್ಟಿಸಿದ ನಗರವಾದ ಚೋಳ ರಾಜಧಾನಿಯ ವಿಜಯ ರಾಜೇಂದ್ರಪುರವನ್ನು ಸುಖವಾಗಿ ಆಳುತ್ತಿದ್ದನು.' ಈ ನಗರವು ಎಲ್ಲಿತ್ತು ಎಂಬುದು ಸಹಜವಾಗಿ ಪ್ರಶ್ನೆಗಳಿಗೆ ದಾರಿಮಾಡಿಕೊಟ್ಟಿದೆ. ಇದು ವಿಕ್ರಮಪುರ ಎಂದು ಮರುನಾಮಕರಣಗೊಂಡ ಕಣ್ಣಾನೂರು ಆಗಿರಬೇಕು. ಇದು ಮಾಮೂಲಿ ಹೆಸರಾದ ಕಣ್ಣಾನೂರಿಗಿಂತ ಉತ್ತಮವಾದ ಹೆಸರನ್ನೇ ಹೊಂದಿದೆ. ಆದರೆ ಹೊಯ್ಸಳರು ಈ ಶೈಲಿಯಲ್ಲಿ ಚೋಳರನ್ನು ಹೊಗಳಿ ಅವನ ಹೆಸರಿನಲ್ಲೇ ಆ ಸ್ಥಳದ ಹೆಸರನ್ನು ಕರೆಯುವುದು ಈ ಅಂಶಕ್ಕೆ ನಿಲುಕದ ಮಾತಾಗಿದೆ. ಆದಾಗ್ಯೂ ಹೊಯ್ಸಳರು ರಾಜರಾಜ ಮತ್ತು ರಾಜೇಂದ್ರನ ಜೊತೆ ಉತ್ತಮ ಸಂಬಂಧವನ್ನು ಇರಿಸಿಕೊಂಡಿದ್ದನು., ಏಕೆಂದರೆ ಒಂದು ಕಡೆ ಕಣ್ಣಾನೂರಿನ ಹೊಯ್ಸಳ ಅಧಿಕಾರಿಗಳು ಸಾಕಷ್ಟು ಕೊಡುಗೆಗಳನ್ನು ಅವರ ಸಂಸ್ಥಾನ ದಲ್ಲಿ ನೀಡಿದ್ದರು. ಈ ಕೊಡುಗೆಗಳ ಬಗ್ಗೆ ಚೋಳ ಆಳ್ವಿಕೆಯ ಶಕೆಯು ದಾಖಲೆಯನ್ನು ನೀಡುತ್ತದೆ ಆದರೆ ಅವರ (ಹೊಯ್ಸಳರ) ನಾಯಕನ ಆಡಳಿತದಲ್ಲಿಲ್ಲ. ಇನ್ನೊಂದೆಡೆಯಲ್ಲಿ ದಕ್ಷಿಣದ ಹೊಯ್ಸಳ ಸೇನೆಯನ್ನು ಕಣ್ಣಾನೂರಿನಿಂದ ಉತ್ತರಕ್ಕೆ 70 ಮೈಲುಗಳು ದೂರವಿರುವ ಪ್ರದೇಶದಲ್ಲಿ 1239ನೇ ಇಸವಿಯಲ್ಲಿ ಗಂಡಗೋಪಾಲನು ದಾಳಿ ಮಾಡಿದನು. ಈ ಒಪ್ಪಂದದ ಮೇರೆಗೆ ಸೋಮೇಶ್ವರನು ಯಾವುದೇ ಹಿಂಜರಿಕೆಯಿಲ್ಲದೆ ಈ ಸಾಹಸಕ್ಕೆ ಕೈಗೂಡಿಸಿದನು. ಇದರ ಪರಿಣಾಮವಾಗಿ ಒಂದು

ದೀರ್ಘ ಸಹಾಯವನ್ನು ನೀಡಿದ್ದರೆ ಅಥವಾ ಹೊಯ್ಸಳ ರಾಜನು ಉತ್ತರದೆಡೆಗೆ ಸಾಗುತ್ತಿದ್ದಾಗ ಆ ಸಣ್ಣ ಸಂಸ್ಥಾನದ ಮೇಲೆ ಆಕ್ರಮಣ ಮಾಡಿದ್ದರೆ ಪ್ರಾಯಶಃ ಆ ದಂಡಯಾತ್ರೆಯು ನಡೆಯುತ್ತಿರಲಿಲ್ಲ.

ಗಂಡಗೋಪಾಲನು ಕಾಡವರ ರಕ್ಷಣಾ ನೆಲೆಯನ್ನು ಹುಡುಕುತ್ತಾ ದಕ್ಷಿಣದೆಡೆಗೆ ಸಾಗುತ್ತಿದ್ದಾಗ, ಈ ಹಂತದಲ್ಲಿ ಆಕಸ್ಮಿಕವಾಗಿ ಜಂಬೈನ ಹೊಯ್ಸಳರ ಒಂದು ದೊಡ್ಡ ಸೈನ್ಯವನ್ನು ಎದುರಾದರು. 1240ರ ಆಗಸ್ಟ್‌ನಲ್ಲಿ ಸೋಮೇಶ್ವರನು ಅವನ ವಿರುದ್ಧ ದಂಡೆತ್ತಿ ಹೋಗುತ್ತಿದ್ದನು. ಅಷ್ಟರಲ್ಲಿ ಅವನ ಸೇನೆಯು ಬಿಡಾರದಲ್ಲಿತ್ತು ಅಥವಾ ಮೂಪೆಯ ಬಳಿಯಿತ್ತು. ಆ ಸಮಯದಲ್ಲಿ ಬಹುಶಃ ಈತನಿಗೆ ಪುತ್ರ ಸಂತಾನವಾಯಿತು. ಇವನೇ ನರಸಿಂಹನಾಗಿದ್ದು ಮುಂದಿನ ಮೂರನೇ ನರಸಿಂಹನಾಗಿರಬಹುದು. ಸಮಕಾಲೀನ ತೆಲುಗು ಕವಿಯಾದ ತಿಕ್ಕಣ ಸೋಮಾಲಾಜಿಯ ಹೇಳಿಕೆಗಳಿಂದ ನಾವು ನಿರ್ಧರಿಸುವುದಾದರೆ ಈ ದಂಡಯಾತ್ರೆಯ ಪರಿಣಾಮವು ಫಲಕಾರಿಯಾಗಿರಲಿಲ್ಲ. ಈ ಕವಿಯು ಎಲ್ಲಾ ಸತ್ಯಾಂಶಗಳನ್ನು ಹೇಳದಿದ್ದರೂ ಎಲ್ಲವನ್ನೂ ಅರಿಯುವ ಉತ್ತಮ ಸ್ಥಿತಿಯಲ್ಲಿದ್ದ ತಿಕ್ಕಣನು ತನ್ನ ನಿರರ್ವಕನೋತ್ತರ ರಾಮಾಯಣದ ಆರಂಭಿಕ ಪದ್ಯಗಳಲ್ಲಿ ಹೇಳುವಂತೆ ತಿಕ್ಕನು ಅವನೇ ಸ್ವತಃ 'ಚೋಳರ ಸಂಸ್ಥಾಪಕ' ಎಂದು ಕಲ್ಪಿಸಿಕೊಂಡು ಪಳಗಿಸಲಾಗದ ಶಕ್ತಿಯಾದ 'ಕರ್ನಾಟಕ ಸೋಮೇಶ್ವರ'ನ ಅಹಂಕಾರವನ್ನು ಅಡಗಿಸಿ ಈ ಬಿರುದನ್ನು ಹೆಗಲಿಗೇರಿಸಿದ ಎಂದು ಬರೆಯುತ್ತಾನೆ. ಈ ಗಂಡಗೋಪಾಲನಿಂದ ಸೋಲಿಗೊಳಗಾದ ಕಾಡವರ ಸೋಲು ಹೊಯ್ಸಳರಿಗೆ ಅನುಕೂಲಕಾರಿಯೆಂದು ಕಂಡರೂ ಸೋಮೇಶ್ವರನ ಚಿಂತೆಗೆ ದಾರಿಮಾಡಿಕೊಟ್ಟಿತು. ಏಕೆಂದರೆ ಕೊಪ್ಪರುಂಜಿಗರ ತಿರುವನಮಲ್ಲೈ ಮತ್ತು ಚಿದಂಬರಂಗಿಂತ ದೂರದ ಪ್ರದೇಶಗಳಿಗೆ ಗಮನಹರಿಸುತ್ತಿದ್ದುದು ಅವನ ಮೂಲ ಅಳಲಾಗಿತ್ತು. ಆ ಎರಡು ಪ್ರದೇಶಗಳಲ್ಲಿ ರಾಜರಾಜ ಮತ್ತು ರಾಜೇಂದ್ರರು ಹೊಯ್ಸಳರನ್ನು ಅಲವಂಬಿಸಿದ್ದುದು ಕೊಪ್ಪರುಂಜಿಂಗರ ಮನಸ್ಸಿನಲ್ಲಿತ್ತು. ಈಗ ತಿಕ್ಕ ಗಂಡ ಗೋಪಾಲನು ಎದುರು ದಿಕ್ಕಿನ ಕಾಡವರನ್ನು ಬಲಹೀನರನ್ನಾಗಿ ಮಾಡಿದ್ದನು. ಇದರಿಂದ ದಕ್ಷಿಣದಲ್ಲಿ ಉಳಿಯುವ ಸೋಮೇಶ್ವರನ ಕಾರಣವೂ ಕ್ಷೀಣವಾಯಿತು. ತಿಕ್ಕನು ತನ್ನ ಶಕ್ತಿಯ ಪ್ರಾಬಲ್ಯದಿಂದ ಅಲ್ಪ ಸ್ವಲ್ಪ ಸಾಧಿಸಿದನು. ಆ ನಂತರ ಕೆಲವು ವರ್ಷಗಳ ಬಳಿಕ ಅವನ ಮಗನೂ ಅವನ ರೀತಿಯ ಪ್ರಯತ್ನವನ್ನು ಮಾಡುವ ಹೊಣೆಯನ್ನು ಹೊಂದಿದ್ದನು.

### ಉತ್ತರದಲ್ಲಿ ಸೋಮೇಶ್ವರನ ನೀತಿ

ದಕ್ಷಿಣದಲ್ಲಿ ಸೋಮೇಶ್ವರನ ಸ್ಥಿತಿಗಳು ಈ ಹಾದಿಯನ್ನು ಹಿಡಿದಿದ್ದರೆ, ಉತ್ತರದಲ್ಲಿ ಹೊಯ್ಸಳರ ಉದ್ದೇಶವು ಮುಂದುವರೆಯುತ್ತಿರಲಿಲ್ಲ. ಅವಮಾನವೆಂಬುದು ಇಲ್ಲದಿದ್ದರೆ ಅದೇ ರೀತಿ

ಉತ್ತರದ ಸೇನೆಗೆ ವೈಭವರುಇಲ್ಲದಂತಾಯಿತು. 1239ರಲ್ಲಿ ಹೊಸಗುಂದದ ಬೀರರಸ ಸಂತರನು ಸೇವುಣ ಅಧಿಕಾರಿಯೊಬ್ಬನ ಮೇಲೆ ಆಕ್ರಮಣವನ್ನು ನಡೆಸಿದನು. ಇದೊಂದು ದೊಡ್ಡ ಪ್ರಮಾಣದ ಯುದ್ಧವಾಗಿದ್ದು ಬಹಳ ವರ್ಷಗಳ ಕಾಲ ನಡೆಯುವ ಉದ್ದೇಶವನ್ನು ಹೊಂದಿತ್ತು. ಹೊಸಗುಂದದ ಸಂತರನು ಹೊಯ್ಸಳರ ಮಿತ್ರಸೈನ್ಯವಾಗಿದ್ದನು. ಆದರೆ ಸೋಮೇಶ್ವರನು ಯಾವ ಮಟ್ಟದಲ್ಲಿ ಅವನಿಗೆ ಸಹಾಯ ಹಸ್ತವನ್ನು ನೀಡಿದ್ದ ಎಂಬುದು ನಮಗೆ ತಿಳಿಯದಾಗಿದೆ. ಅವನ ಮೂಲ ಉದ್ದೇಶವೇನೆಂದರೆ ಅವನ ರಾಜ್ಯಕ್ಕೆ ಮತ್ತು ಅದರಿಂದಾಚೆಗೆ ಸೇವುಣರು ಮಾಡುತ್ತಿದ್ದ ಅತಿಕ್ರಮಣ ವನ್ನು ತಡೆಯುವುದಾಗಿತ್ತು. 1239 ಮತ್ತು 1298ರ ನಡುವೆ ಗುಟುವಿನ ಕದಂಬರು, ರಟ್ಟರು ಸಂತರು ಅವರ ಸ್ವಂತ ಉದ್ದೇಶದಿಂದಾಗಿ ಹೊಯ್ಸಳರೊಂದಿಗೆ ಸೇವುಣ ಅಧಿಕಾರಿಗಳ ವಿರುದ್ಧ ಅಮೋಘವಾಗಿ ಹೋರಾಡಿದರು. ಒಂದನೇ ನರಸಿಂಹನ ಆಳ್ವಿಕೆ ಹಾಗೂ ಅದರಿಂದ ಪರಿಣಮಿಸಿದ ಅವಕಾಶಗಳಿಗೆ ಪ್ರತಿಕ್ರಿಯಿಸಿದ ಸೋಮೇಶ್ವರನ ಮಧ್ಯೆ ಏರ್ಪಟ್ಟ ಗೊಂದಲವು ಅವನ ತಾತನ ಆಳ್ವಿಕೆಗೆ ನಿಕಟವಾಗಿ ಹೋಲಿಕೆಯಾಗುತ್ತಿತ್ತು. 1238ರ ಒಂದು ಶಾಸನದಿಂದ ಸೇವುಣ ದಂಡನಾಯಕ ನೊಬ್ಬನು ಪಾಂಡ್ಯ ನಾಡನ್ನು ವಶಪಡಿಸಿಕೊಳ್ಳಲು ಸಫಲನಾದನೆಂದು ನಮಗೆ ತಿಳಿಯುತ್ತದೆ. ಅಂದರೆ ಉಚ್ಚಂಗಿಯನ್ನು ಅವಲಂಬಿಸಿದ್ದ ನಾಡನ್ನು ವಶಪಡಿಸಿಕೊಂಡನೆಂದು ತಿಳಿಸುತ್ತದೆ. ವಾಸ್ತವ ವಾಗಿ ಆ ಸ್ಥಳದ ಕಡೆಯ ಹೊಯ್ಸಳ ದಾಖಲೆಯು 1232ನೇ ಇಸವಿಯದ್ದಾಗಿದ್ದು ಬಾಲ್ಲುಲಿಯ ದ್ದಾಗಿದೆ. ಸೇವುಣರ ಮೊದಲ ದಾಖಲೆಯು ಅದೇ ಪ್ರದೇಶವಾಗಿದ್ದು 1250ರ ದಿನಾಂಕವನ್ನು ಹೊಂದಿದೆ. ಆದ್ದರಿಂದ ಇಲ್ಲಿ ನಮಗೆ ತಿಳಿಯುವ ವಿಷಯವೇನೆಂದರೆ ಒಂದು ದಾಳಿಯಿಂದ ದೇಶವನ್ನು ರಕ್ಷಿಸಲು ಸಾಮ್ರಾಟನಿಗೆ ವಿಫುಲ ಅವಕಾಶಗಳಿದ್ದವು. ಆದರೆ ಅವನು ಬಲ್ಲಾಳನ ಸಾಮ್ರಾಜ್ಯದ ಒಂದು ಭಾಗವನ್ನು ಉಳಿಸಿಕೊಳ್ಳಲು ವಿಫಲನಾದನು. ಇದನ್ನು ಎರಡನೇ ನರಸಿಂಹನ ಕಾಲದಲ್ಲೂ ಕಳೆದುಕೊಂಡಿರಲಿಲ್ಲ. ಸೋಮೇಶ್ವರನ ವಿಫಲತೆಯಲ್ಲಿ ಸೇವುಣ ಅಧಿಕಾರಿಗಳು ಹೆಮ್ಮೆ ಯಿಂದ ಬೀಗುತ್ತಿದ್ದರು.

1241 ಸೆಪ್ಟೆಂಬರ್ ಹೊಯ್ಸಳ ಚಕ್ರಾಧಿಪತ್ಯದಲ್ಲಿ ಅನಿರೀಕ್ಷಿತ ಘಟನೆಯೊಂದು ನಡೆಯಿತು. ಬಲಶಾಲಿ ಮಂತ್ರಿಯಾದ ಕದಂಬರು ದಣ್ಣನಾಯಕನು ವಿಷ್ಣುವಿನ ಆತ್ಮ ವಿಶ್ವಾಸಿಯಾದನೆಂದರೆ ಒಬ್ಬ ಪ್ರಭಾವೀ ಸೇವಕನಿಂದ ಸೋಮೇಶ್ವರ ಭಂಟನ ಹಂತಕ್ಕೆ ತಲುಪಿ ಕೇವಲ ತನ್ನ ರಾಜನ ಶತ್ರುಗಳನ್ನು ಮಾತ್ರ ಸದೆಬಡಿಯದೆ ಅವನ ಹಿಂದಿನ ಸಹ ಸೇವಕರ ಮೇಲೂ ತಿರುಗಿಬಿದ್ದನು. ಅವನು ಚೋಳರ ದಕ್ಷಿಣ ಆಡಳಿತ ಪ್ರದೇಶಗಳ ಪೂರ್ವ ತೀರದ ಪ್ರದೇಶವಾದ ವೇದನಾರಾಯಣದ ಮೇಲೆ ದಾಳಿ

ಮಾಡಿದನು ಮತ್ತು ಇದನ್ನು ಮುಂದುವರೆಸಿ ಹೊಯ್ಸಳರ ಮೂಲ ದೇಶವಾದ ದಕ್ಷಿಣದ ನಾಡುಗಳಲ್ಲಿ ಒಂದಾದ ಕಬ್ಬುಹು ಅಥವಾ ಕಬಹು ನಾಡನ್ನು ದೋಚಿದನು. ಇಲ್ಲಿನ ವೈಪರೀತ್ಯ ಗಳು ರಾಜನ ಚಟುವಟಿಕೆಗಳ ಮೇಲೆ ಕೆಟ್ಟ ಪರಿಣಾಮವನ್ನು ಬೀರಿದ್ದವು. 1242ರಲ್ಲಿ ಅವನ ಅಪರೂಪದ ಒಂದು ಭೇಟಿಯಲ್ಲಿ ಆ ರಾಜ್ಯವನ್ನು ಗೌರವಿಸಿದನು. ಆ ವರ್ಷದ ಸೆಪ್ಟೆಂಬರ್‌ನಲ್ಲಿ ಅವನು ಪುನಃ ಚೋಳನಾಡಿನಲ್ಲಿದ್ದನು. ಪಾಕಲೆಯ ಬಿಡಾರದಲ್ಲಿದ್ದನು. ಡಿಸೆಂಬರ್‌ನ ಅನಿಶ್ಚಿತ ಸ್ಥಿತಿ ಯಲ್ಲಿದ್ದನು. 1243ಕ್ಕಿಂತ ಸ್ವಲ್ಪ ಮೊದಲು ಕಣ್ಣಾನೂರಿಗೆ ಹಿಂತಿರುಗಿದ ನಂತರ ಒಂದು ವರ್ಷದ ನೆಮ್ಮದಿಯ ಕಾಲವನ್ನು ಕಳೆದನು. ಆದರೆ ಇದು ತೊಂದರೆಯಿಂದ ಮುಕ್ತವಾಗಿರಲಿಲ್ಲ. ಇಷ್ಟರಲ್ಲಿ ದಕ್ಷಿಣದ ತಲಕಾಡಿನ ಒಂದು ಹಳ್ಳಿಯು ದಾಳಿಗೆ ತುತ್ತಾಯಿತು. ಇದು ಬಹುಶಃ ಸಿಂಗಣ ದಣ್ಣಾನಾಯಕ ಯೋಜನೆಗಳಲ್ಲಿ ಒಂದಾಗಿತ್ತು.[7] 1244ರಲ್ಲಿ ದ್ವಾರಸಮುದ್ರವೂ ಸಹ ಹೊಯಸಳರ ಹಿರಿಯ ಅಧಿಕಾರಿಗಳ ಮಧ್ಯೆ ಏರ್ಪಟ್ಟ ವೈರತ್ವಕ್ಕೆ ತುತ್ತಾಯಿತು. ಈ ಸಂಘರ್ಷವು ಆ ವರ್ಷದ ಮೇ ತಿಂಗಳವರೆಗೂ ಮುಂದುವರೆಯಿತು. ಇದು ಹೊಯ್ಸಳರ ನಾಡಿನ ಇತರೆ ಭಾಗಗಳಲ್ಲಿನ ಸಂಘರ್ಷಗಳ ಜೊತೆ ಮುಂದುವರೆಯಿತು. ಸೋಮೇಶ್ವರನು ಈಗ ಕಣ್ಣಾನೂರಿನಲ್ಲಿ ಉಳಿದನು ಮತ್ತು 1246ರಲ್ಲಿ ಚೋಳನ ವ್ಯವಹಾರದಲ್ಲಿ ಭಾಗಿಯಾಗಿ ಅವನಿಂದ ಭೂ ಉಂಬಳಿಯನ್ನು ಎಳೆಯಲು ಪ್ರಯತ್ನಿಸುತ್ತಿದ್ದನು. ಈ ಒಪ್ಪಂದಗಳು ದಕ್ಷಿಣದ ಅಸ್ತವ್ಯಸ್ಥತೆ, ಉತ್ತರದ ನಷ್ಟ, ಪೂರ್ವದ ಶೀತಲಯುದ್ಧ ಹಾಗೂ ಅವನು ಕೈಗೊಂಡ ಎಲ್ಲಾ ಕಾರ್ಯಾಚರಣೆಗಳು ಇವನಿಗೆ ತುಂಬ ಹಿಡಿಸಿರಬೇಕು. ಏಕೆಂದರೆ ಇವನು ಸೋಮಯ ದಣ್ಣನಾಯಕ ಎಂಬುವವನನ್ನು ಅವನ ಸಂಸ್ಥಾನದಲ್ಲಿ ಹೆಚ್ಚು ಅಧಿಕಾರವನ್ನು ಹೊಂದುವಂತೆ ಪ್ರೋತ್ಸಾಹಿಸಿದನು. ಬಹಳ ಪ್ರಮುಖವಾದ ಆಡಳಿತ ಪ್ರದೇಶವು ಬಹಳ ಚಾಣಾಕ್ಷತನದಿಂದಾಗಿ ಇವನ ಕೈ ಸೇರಿತು. ಸೋಮಯ, ಸಿಂಗಣ ಮತ್ತು ಕಾಂಬಯರು ಚೋಳ ಆಸ್ಥಾನದ ಸಂಪ್ರದಾಯದ ಮಂತ್ರಿಗಳಾಗಿದ್ದರು. ಅವರ ನ್ಯಾಯ ನಿಷ್ಠೆಯ ಪ್ರವೃತ್ತಿಯು ಆಗ ಬಹಳ ವೈಯಕ್ತಿಕವಾಗಿದ್ದ ತಮಿಳು ರಾಜಕೀಯದೊಂದಿಗೆ ಬೆರೆತು ಕಲುಷಿತವಾಯಿತು. ಹೊಯ್ಸಳನಾಡಿನ ಹತ್ತಿರದಲ್ಲೇ ಇದ್ದ ಸೋವಿದೇವನನ್ನು 1244ರಲ್ಲಿ ಸೋಲಿಸಿದ ಬೋಗಯ್ಯನೆಂಬುವನು ಅವನ ರಾಜಧಾನಿಯಿಂದ ಕೇವಲ ಹತ್ತು ಮೈಲು ದೂರವಿದ್ದ ಜಿಲ್ಲೆಗಳನ್ನು ದಾಳಿ ಮಾಡಿದನು. ಇದರ ನಷ್ಟವನ್ನು ಹಲವು ವರ್ಷಗಳ ನಂತರ ತುಂಬಿಕೊಡ ಲಾಯಿತು. ಸೋಮೇಶ್ವರನ ಆಳ್ವಿಕೆಯಲ್ಲಿ ಹೊಸ ಕಾರ್ಯಾಚರಣೆಗಳನ್ನು ಕೈಗೆತ್ತಿಕೊಂಡರು ಹಾಗೂ ಅವರು ಹೊಸ ಉತ್ಕರ್ಷಗಳನ್ನು ಎದುರಿಸಬೇಕಾಯಿತು.

## 1247-1252 ಸೋಮೇಶ್ವರನ ಅಭೇದ್ಯ ಮೈತ್ರಿ

ರಾಜೇಂದ್ರನು ತನ್ನ ಸಮಯದ ಸದುಪಯೋಗ ಮಾಡಿಕೊಂಡನು. 12 ವರ್ಷದ ಮೊದಲ ಅನುಭವವನ್ನು ಪುನಃ ಮರುಕಳಿಸುವ ಯೋಜನೆಯಲ್ಲಿ ಸೋಮೇಶ್ವರ ಪೂರ್ವ ಅನುಮತಿಯನ್ನು ಪಡೆಯದೆ ಪಾಂಡ್ಯ ರಾಜಕುಮಾರರ ವಿರುದ್ಧ ದಕ್ಷಿಣದೆಡೆಗೆ ಒಂದು ಸೈನ್ಯವನ್ನು ಕಳುಹಿಸಿದನು. ಸೋಮೇಶ್ವರನು ಚೋಳರ ಜೊತೆಯ ಸಾಂಪ್ರದಾಯಿಕ ಒಪ್ಪಂದವನ್ನು ತ್ಯಜಿಸಿ ಚೋಳ ಸೇನೆಯನ್ನು ಅಡ್ಡಹಾಕಲು ತನ್ನ ಜನರನ್ನು ಕಳುಹಿಸಿದನು. ಅವನು ಸಂಪೂರ್ಣ ಜಯಶಾಲಿಯಾದ. ಸೋತು ಸುಣ್ಣವಾಗಿದ್ದ ರಾಜೇಂದ್ರನಿಗೆ ಮತ್ತೊಂದು ವಿಪ್ಪತ್ತು ಕಾಯ್ದಿತ್ತು. ದಕ್ಷಿಣದ ಸೋಲಿನ ಜೊತೆಗೆ ಉತ್ತರದಿಂದಲೂ ಆಕ್ರಮಣ ಮಾಡಲಾಯಿತು. ಪಾಂಡ್ಯರ ನಾಡಿಗೆ ಅಷ್ಟು ಸುಲಭವಾಗಿ ಸೋಮೇಶ್ವರನು ನುಗ್ಗಿದ್ದನ್ನು ನೋಡಿದರೆ ರಾಜೇಂದ್ರನ ತತ್‌ಕ್ಷಣದ ಕಾರ್ಯಾಚರಣೆಗಿಂತ ಮುನ್ನ ಇವರಿಬ್ಬರಲ್ಲಿ ಒಂದು ಹೊಂದಾಣಿಕೆಯಿತ್ತು ಎಂಬುದು ಈ ಮೂಲಕ ತಿಳಿಯುತ್ತದೆ. ಅವನು ಬಹಳ ತೃಪ್ತನಾಗಿ ತನ್ನನ್ನು ತಾನೇ 'ಪಾಂಡ್ಯ ವಂಶವನ್ನು ಕಾಪಾಡುವ ಚತುರ ಬಲಗೈ' ಎಂದು ಕರೆದುಕೊಂಡಿರಬಹುದು. ಆದರೆ ಇದರ ಪುನರಾವರ್ತನೆಯು ಇದಕ್ಕಿಂತ ಸ್ವಲ್ಪ ಮುಂಚೆ ಮಾರವರ್ಮನ್ ಸುಂದರ ಪಾಂಡ್ಯನ ಜೊತೆ ವೈವಾಹಿಕ ಸಂಬಂಧವನ್ನು ಏರ್ಪಡಿಸಿದ್ದ ಎಂಬುದು ಒಂದು ದಾಖಲೆಯಿಂದ ತಿಳಿದುಬರುತ್ತದೆ.[8] ಈ ದಾಖಲೆಯು ಸೋಮೇಶ್ವರನನ್ನು ಆ ರಾಜನ ಮಾಮದಿ ಎಂದು ವರ್ಣಿಸಿರುವ ಎರಡು ದಾಖಲೆಗಳಲ್ಲಿ ಬರುತ್ತದೆ. ಮೊದಲನೆಯದು ಹೇಳುವಂತೆ ಸೋಮೇಶ್ವರನು ಪಾಂಡ್ಯರನ್ನು ಕೇರಳಸಿಂಗವನ ನಾಡಿನ ತಿರುಕ್ಕೊತಿಯಾರ್ ಗ್ರಾಮದ ತೆರಿಗೆಯನ್ನು ಪೂಜೆಗಾಗಿ ಮತ್ತು ಪೂಸಲ ವೀರ ಸೋಮಿದೇವನ್ ಸಂಧಿ ಎಂದು ಹೊಯ್ಸಳರ ಹೆಸರಿನಲ್ಲಿ ಸ್ಥಾಪಿತವಾದ ಆ ಹೆಸರಿನ ಸೇವೆಯ ಖರ್ಚಿಗೆ ಕಳುಹಿಸಿಕೊಡುವಂತೆ ಕೇಳಿಕೊಂಡಿದ್ದನು. ಇದೇ ವರ್ಷದ ಇನ್ನೊಂದು ದಾಖಲೆಯು ತಿರುನೇವಲಿಯ ಬಳಿಯ ಕೂಡಲೂರ್ ಬಳಿ ಒಂದು ಅಗ್ರಹಾರದ ನಿರ್ಮಾಣವನ್ನು ಮಂಜೂರು ಮಾಡಿತು. ಅದನ್ನು ಪೂಸಲ ವೀರಸೋಮಿದೇವ ಕತುರವೇದಿ ಮಂಗಳಂ ಎಂದು ಕರೆಯುವ ಸಾಧ್ಯತೆಯಿತ್ತು. ಹೊಯ್ಸಳನು ತನ್ನ ಸ್ವಂತ ಆಧ್ಯಾತ್ಮಿಕ ಹಿತದೃಷ್ಟಿಯಿಂದಾಗಿ ಉಂಬಳಿಯನ್ನು ಕೊಡುವುದರ ಮತ್ತು ಕೊಡಲ್ಪಡುವ ಹಾಗೆ ಮಾಡುವ ಮೂಲಕ ಪಾಂಡ್ಯರ ಗಡಿಯ ಹತ್ತಿರವೇ ಅಗ್ರಹಾರವನ್ನು ಸ್ಥಾಪಿಸುವ ಮೂಲಕ ತನ್ನ ಸಂಬಂಧಿಕರಿಗೆ ಯಾವುದಾದರೊಂದು ರೀತಿಯ ಜವಾಬ್ದಾರಿಯನ್ನು ವಹಿಸುವುದರಲ್ಲಿ ಇವನು ಆಸಕ್ತನಾಗಿದ್ದನು. ಮಾಮದಿ ಎಂಬ ಪದವನ್ನು 'ಮಾವ' * ಎಂದು ಭಾವಾಂತರಿಸಬಹುದು. 1240–47ರ ಅವಧಿಯಲ್ಲಿ ಸೋಮೇಶ್ವರನು ತನ್ನ ಮಗಳಾದ 'ಪಮ್ಮಿಯಕ್ಕಂ' ಎಂಬುವಳನ್ನು ಮಾರವರ್ಮನ್ ಸುಂದರಪಾಂಡ್ಯ

ನಿಗೆ ಕೊಟ್ಟು ವೈವಾಹಿಕ ಸಂಬಂಧ ಏರ್ಪಡಿಸಿಕೊಂಡಿರಬೇಕೆಂದು 'ತಿರುಮ್ಯಮಿ ಮತ್ತು ತೈನ್ನವೆಲ್ಲಿ' ಶಾಸನಗಳಿಂದ ತಿಳಿದುಬರುತ್ತದೆ.9 ಹೊಯ್ಸಳ ಪಾಂಡ್ಯರ ಸಹಕಾರವನ್ನು ನಾವೂ ಇನ್ನೂ ಹೆಚ್ಚು ತಿಳಿದುಕೊಳ್ಳಬಹುದು. ಹೊಯ್ಸಳರ ದಣ್ಣನಾಯಕನೊಬ್ಬನು ಪಾಂಡ್ಯ ರಾಜ್ಯದ ಈಗಿನ ತಿರುಮಯ್ಯಮ್ ತಾಲ್ಲೂಕಿಗೆ ಹೋಲುವ ಒಂದು ಭಾಗವನ್ನು ಆಳುತ್ತಿದ್ದನು. ಅದನ್ನು ಇವನು ತೆಗೆದುಕೊಂಡಿರುವುದಾಗಿ ಘೋಷಿಸಿದನು. ಪಾಂಡ್ಯರ ನಂಬಿಕೆಯಂತೆ ಅದನ್ನು ರಾಜೇಂದ್ರನಿಂದ ರಕ್ಷಿಸುವುದಾಗಿ ಹೇಳಿಕೊಂಡನು.

1247–48ನೇಯ ವರ್ಷದಿಂದ ನಾವು ರಾಜೇಂದ್ರ ಚೋಳನನ್ನು ಹೊಯ್ಸಳರ ವಿರುದ್ಧ ನಿರಾಶಾದಾಯಕ ಮತ್ಸರವನ್ನು ಹೊಂದಿದ ಮನಸ್ಥಿತಿಯಲ್ಲಿ ಕಾಣುತ್ತೇವೆ. ಹೊಯ್ಸಳ ಸೋಮೇಶ್ವನು ಅವನ ಮೇಲೆ ಯುದ್ಧ ಮಾಡಿರಲಿಲ್ಲ. ಅವನ ವಿರುದ್ಧ ನೇರವಾದ ಶತ್ರುತ್ವವನ್ನು ತೋರಿಸಿರಲಿಲ್ಲ. ಆದರೆ ಕೇವಲ ಅವನ ಬಿರುದನ್ನು 'ಪಾಂಡ್ಯ ರಾಜರ ಛಿದ್ರಕ' ಎಂಬುದರಿಂದ 'ಪಾಂಡ್ಯ ರಾಜ್ಯದ ರಕ್ಷಕ' ಎಂಬುದಕ್ಕೆ ಬದಲಾಯಿಸಿದ್ದನಷ್ಟೆ. ಅವನು ಚೋಳರ ರಾಜ್ಯಾಡಳಿತ ಪ್ರದೇಶವನ್ನು ಕ್ಷೀಣ ಮಾಡಿರಲಿಲ್ಲ. ಆದರೆ ಪಾಂಡ್ಯ ದೇಶಕ್ಕೆ ಅವರ ಸೇನೆಯನ್ನು ರಕ್ಷಿಸಲು ಕಳುಹಿಸಿದ್ದನು ಮತ್ತು ಅಧಿಕಾರಕ್ಕೆ ಮರಳಿ ಬರಲು ಸಹಾಯ ಮಾಡಿದ್ದನು. ಆಕಸ್ಮಿಕವಾಗಿ ರಾಜೇಂದ್ರನ ಸೈನಿಕರೇ ದಾಳಿ ಕೋರರಾಗಿದ್ದಾಗ ಅವರನ್ನು ಹತ್ತಿಕ್ಕುವ ಕೆಲಸ ಮಾಡುತ್ತಿದ್ದನು. ಇದು ಅಧಿಕೃತವಾದ ವಿವರಣೆ ಯಾಗಿರಬೇಕು. ಸೋಮೇಶ್ವರನ ಅಧಿಕಾರಿಗಳು ಈ ದಂಡೆಯಾತ್ರೆಗೆ ಸಂಬಂಧಿಸಿದಂತೆ ಬಹಳ ಕುಶಾಗ್ರಮತಿಗಳಾಗಿದ್ದರು. ಚೋಳರು ಯಾವುದೇ ಪ್ರತಿರೋಧ ಕ್ರಿಯೆಯನ್ನು ವ್ಯಕ್ತಪಡಿಸಲಿಲ್ಲ. ಈ ರೀತಿಯಾಗಿ ಅವನು ಸ್ವಲ್ಪಕಾಲ ಕಾಯ್ದು ಬೇರೆ ಕಡೆಯಿಂದ ಸಹಾಯವನ್ನು ಸಂಪಾದಿಸಿ ಆನಂತರ ತನ್ನ ಉಪದ್ರವಿ 'ಮೈತ್ರಿ'ಯ ವಿರುದ್ಧ ಸೇಡನ್ನು ತೀರಿಸಿಕೊಳ್ಳಬೇಕಾಗಿತ್ತು. ಈ ನಡುವೆ ಸೋಮೇಶ್ವರನು ಬಹಳ ಅಸ್ವಸ್ಥತೆಯ ಆರೋಗ್ಯ ಸ್ಥಿತಿಯಲ್ಲಿ ಕಣ್ಣಾನೂರಿನಲ್ಲಿದ್ದನು. ದೇವಾಲಯಗಳ ಅಭಿವೃದ್ಧಿಗಾಗಿ ಹಾಗೂ ನಿಸ್ಸಂದೇಹವಾಗಿ ಆ ಸ್ಥಳದಲ್ಲಿ ತನ್ನ ಆಳ್ವಿಕೆಯನ್ನು ಮುಂದುವರೆಸುವ ಉದ್ದೇಶದಿಂದಾಗಿ ನೀಡುತ್ತಿದ್ದನು ಹಾಗೂ ದಾನ ಮಾಡುವಂತೆ ಪ್ರೇರೇಪಿಸುತ್ತಿದ್ದನು.[10] ರಾಜೇಂದ್ರನು ಅವನ ಉತ್ತರದ ಸಾಮಂತರೊಂದಿಗೆ ಹೆಚ್ಚುಕಾಲ ಕಳೆಯುತ್ತಿದ್ದನು. ಕಾಕತೀಯ ಗಣಪತಿಯು ಕಾನ್ಚಿಯನ್ನು ಹೊಂದಲು ಬಿಟ್ಟಿದ್ದನು. ಏಕೆಂದರೆ ಈ ಶಕ್ತಿಶಾಲಿ ರಾಜನಿಗೆ ದಕ್ಷಿಣದ ಭಾಗವನ್ನು ಗೆಲ್ಲುವುದು ಅವನ ಆಸೆಯಾಗಿತ್ತು. ಈ ಆಘಾತವು ಸೋಮೇಶ್ವರನಿಗೆ ಒಂದು ಸ್ವಲ್ಪ ವಿಶ್ರಾಂತಿ ಯನ್ನು ನೀಡಿತು. ಆದರೆ 1252ರಲ್ಲಿ ಚೋಳರ ಕೋಪವು ಇವನ ಮೇಲೆ ಇಮ್ಮಡಿಯಾಯಿತು.

ಹೊರನೋಟಕ್ಕಿದ್ದ ಸ್ನೇಹ ಮತ್ತು ಏಕತೆಯು ಮಾಯವಾದವು. ರಾಜೇಂದ್ರನ ಈ ಪರಿಸ್ಥಿತಿಗಳ ಆಯ್ಕೆಯು ಸರಿಯಾಗಿತ್ತು. ಏಕೆಂದರೆ ಸಿಂಗಣ ದಣ್ಣಾಯಕನು ಆಗತಾನೆ ಪೃಥ್ವಿಂಗಂಗನ ಮೇಲೆ ದಂಡೆಯಾತ್ರೆಯನ್ನು ಮಾಡಿದ್ದನು. ಇವನೊಬ್ಬ ಬಹಳ ಹಿಂದಿನ ಪೀಳಿಗೆಯ ತಮಿಳಿಯನ್‌ನ ಅರಸನಾಗಿದ್ದನು. ಇವುಗಳನ್ನು ತನ್ನ ಹಲವಾರು ವಿಜಯಗಳೊಂದಿಗೆ ಸೇರಿಸಿಕೊಂಡನು, ಮತ್ತು ಮೂರನೇ ಒಂದು ಭಾಗಕ್ಕೆ ಸಮನಾದ ಒಂದು ಭಾಗವನ್ನು ವಹಿಸಿಕೊಂಡಿದ್ದನು.

1252ರ ಜೂನ್ ಹೊತ್ತಿಗೆ ಹೊಯ್ಸಳನು ದೋರಸಮುದ್ರದಲ್ಲಿದ್ದನು. ಚೋಳನು ತನ್ನನ್ನು ತಾನೇ 'ಶತ್ರು ಕನ್ನಡ ರಾಜನಿಗೆ ಸಾವಿನ ದಂಡ, ಶೂರನ ಆಭರಣವನ್ನು ಹೊಂದಿದವನು. ಸ್ವತಃ ವೀರ ಸೋಮೇಶ್ವರನೇ ಅವನ ಕಾಲಿಗೆ ಆ ಆಭರಣವನ್ನು ಅರ್ಪಿಸಿದ್ದನು' ಎಂದು ಕರೆದುಕೊಂಡನು. ಚೋಳರ ಶಕ್ತಿಯುತವಾದ ಸಾಮ್ರಾಜ್ಯವನ್ನು ಮರಳಿ ತರುವತ್ತ ರಾಜೇಂದ್ರನು ಆಸಕ್ತನಾಗಿದ್ದನು. ಪಾಂಡ್ಯ ಮತ್ತು ಕೇರಳವನ್ನು ಸೋಲಿಸಿರುವುದಾಗಿ ಘೋಷಿಸಿದನು. ಇಲ್ಲಿ ಇವರಿಬ್ಬರು ರಾಜೇಂದ್ರನು ಮೈತ್ರಿ ಸೇನೆಗಳಾಗಿದ್ದು ಇದರ ಮೂಲಕ ಮನುವಿನ ವಂಶವನ್ನು ಘೋಷಿಸಿರುವುದಾಗಿ ಹೇಳಿ ಕೊಂಡನು. 1253ರಲ್ಲಿ ಬಹಳ ಘನವಾದ ಬಿರುದಾದ 'ಸೋಮೇಶ್ವರ ಶತ್ರುವಿಗೆ ಸಾವಿನ ದಂಡ' ಎಂಬ ಬಿರುದನ್ನು ಪಡೆದನು. ಶ್ರೀರಂಗಂನಲ್ಲಿ ಅಸ್ತಿತ್ವದಲ್ಲಿರುವ ಶಾಸನಗಳಿಂದ ತೆಗೆದುಕೊಳ್ಳಲಾದ ಈ ಬಿರುದುಗಳಿಂದ ತಿಳಿಯುವುದೇನೆಂದರೆ, ಕಣ್ಣಾನೂರಿನ ತಕ್ಷಣದ ಸಹೋದರತ್ವವನ್ನು ಹೊಯ್ಸಳರ ಕೈಯಿಂದ ಕಿತ್ತುಕೊಂಡಾಗಿತ್ತು. ಇಷ್ಟರಲ್ಲಿ ಚೋಳರ ವಿರುದ್ಧದ ರಕ್ಷಣೆಗೆ ಈ ಸಾಮ್ರಾಟನು ಹೆಚ್ಚು ಗಮನ ಹರಿಸಲಾಗಲಿಲ್ಲ. ಏಕೆಂದರೆ ಈ ವೇಳೆಗಾಗಲೇ ಉತ್ತರ ಮತ್ತು ದಕ್ಷಿಣ ಹೊಯ್ಸಳ ನಾಡೆರಡರಲ್ಲೂ ಕೋಲಾಹಲವೇರ್ಪಟ್ಟಿತ್ತು. ಬಹುಶಃ ಸಿಂಗಣ ದಣ್ಣಾಯಕನು ಈ ಅವ್ಯವಸ್ಥೆಗೆ ಮೂಲ ಕಾರಣನಾಗಿರಬಹುದು. ಇದರ ಪರಿಣಾಮವಾಗಿ ಸೋಮೇಶ್ವರನು ಎರಡೂ ಕಡೆಯ ದಂಡೆಯಾತ್ರೆಯನ್ನು ಕೈಗೊಂಡನು.

## 1252-1254 ಕಣ್ಣಾನೂರಿನಲ್ಲಿ ಸೋಮೇಶ್ವರನ ಪುನರ್ ಸ್ಥಾಪನೆ ಮತ್ತು ಸಾಮ್ರಾಜ್ಯದ ಒಡಕು

ಸೋಮೇಶ್ವರನು ತನ್ನ ನೆಚ್ಚಿನ ಕಣ್ಣಾನೂರಿನಲ್ಲಿ ಅಜ್ಞಾತವಾಸದಲ್ಲಿದ್ದಾಗ ಇವನನ್ನು ಶ್ರೇಷ್ಠ ವ್ಯಾಕರಣ ಪಂಡಿತನಾದ ಕೇಶೀರಾಜನ ತಂದೆಯಾದ ಮಲ್ಲಿಕಾರ್ಜುನನು ತನ್ನ ರಚನೆಯಾದ 'ಸೂಕ್ತಿ ಸುಧಾರ್ಣವ' ಎಂಬುದರಿಂದ ರಂಜಿಸಿದನು. ಈ ಕುತೂಹಲಕಾರಿಯಾದ ಕವನಗುಚ್ಛವು ಕನ್ನಡ

ಸಾಹಿತ್ಯ ಇತಿಹಾಸದಲ್ಲಿನ ಇದರ ಸ್ಥಾನವನ್ನು ಇಲ್ಲಿ ಚರ್ಚಿಸಲಾಗದ ಒಂದು ವಿಶಿಷ್ಟ ಅಂಶವನ್ನು ಹೊಂದಿದೆ. ಈ ಅಂಶವು ಹೊಯ್ಸಳರ ರಾಜತ್ವದ ಕಲ್ಪನೆಯನ್ನು ಅರ್ಥಮಾಡಿಕೊಳ್ಳುವ ನಮ್ಮ ಅಭ್ಯಾಸಕ್ಕೆ ಸಮರ್ಪಕವಾಗಿದೆ. ಇಲ್ಲಿನ ಪ್ರತಿಯೊಂದು ಅಧ್ಯಾಯವೂ ರಾಜನನ್ನು ಉಲ್ಲೇಖಿಸುತ್ತದೆ. ಹಾಗೂ ಇಲ್ಲಿನ ಹೆಚ್ಚು ಅಧ್ಯಾಯಗಳು ಸೋಮೇಶ್ವರ ಮತ್ತು ಅವನ ತಂದೆ ನರಸಿಂಹ ಅಥವಾ ಅವನ ಅಜ್ಜ ಎರಡನೇ ಬಲ್ಲಾಳನ ಒಂದಲ್ಲ ಒಂದು ವಿಶಿಷ್ಟ ಗುಣವನ್ನು ಉದ್ದೇಶಿಸುವ ಹಲವಾರು ಉಲ್ಲೇಖಗಳಿವೆ.[11] ಇಡೀ ಕೃತಿಯನ್ನು ಒಂದು ಪರಿಷ್ಕೃತ ಆಶೀರ್ವಾದದ ರೀತಿಯಲ್ಲಿ ಶೃಂಗರಿಸಲಾಗಿದೆ. ಕನ್ನಡದ ಶ್ರೇಷ್ಠ ಕೃತಿಗಳಿಂದ ಆಯ್ದ 'ಮುತ್ತಿನ ಸಾಲುಗಳ' ಸಂಗ್ರಹವೆಂದು ಉದ್ದೇಶಿಸಲ್ಪಟ್ಟರೂ ಇದನ್ನು ಒಂದೇ ಚೌಕಟ್ಟಿನಲ್ಲಿ ಸಂಪಾದಿಸಿ ಹೆಣೆದಿದ್ದಾನೆ. ಇದರ ಉದ್ದೇಶವು ಶ್ರೋತೃವಿನ ಮನಸ್ಸಿನಿಂದ ದುಃಖ ಮತ್ತು ವಿಫಲತೆ ಭಾವನೆಯನ್ನು ಪ್ರತ್ಯೇಕಿಸುವುದು ಮತ್ತು ರಾಜನ ಜೀವನದ ಶ್ರೇಷ್ಠ ಘಟನೆಗಳು ಮತ್ತು ಅವುಗಳ ಪ್ರಶಂಸನೀಯ ಸಂತೋಷವನ್ನು ಶ್ರೀಮಂತವಾದ ಮತ್ತು ಯಶಸ್ವಿಯಾದ ಒಂದೇ ರಚನೆಯಲ್ಲಿ ವರ್ಣಿಸಬೇಕೆಂಬುದಾಗಿತ್ತು. ಇದರಿಂದಾಗಿ ಹಲವಾರು ಉದ್ದೇಶಗಳು ನೆರವೇರಿದವು. ಇದು ಇದರ ಬರಹಗಾರರು ಕನ್ನಡನಾಡಿನ ಸಾಹಿತ್ಯಿಕ ಸಾಧನೆಗಳ ಮೇಲೆ ಹೊಂದಿದ್ದ ಅಪಾರ ಸಲುಗೆಯನ್ನು ಪ್ರದರ್ಶಿಸಿತು. ನಿಸ್ಸಂಶಯವಾಗಿ ಅವನಿಗೆ ಗಣನೀಯ ಖ್ಯಾತಿಯನ್ನು ತಂದುಕೊಟ್ಟಿತು. ಇದು ಹೊಯ್ಸಳೇಶ್ವರನಿಗೆ ಎಲ್ಲಾ ರೀತಿಯಲ್ಲೂ ರುಚಿಸುವ ವೇಷಭೂಷಣದಲ್ಲಿ ದೇಶೀಯ ಬರಹಗಾರರ ರಸಭರಿತವಾದ ಬರವಣಿಗೆಯನ್ನು ಅರ್ಪಿಸಿತು. ಇದು ಸೋಮೇಶ್ವರನಿಗೆ ಅವನು ಅದರಲ್ಲಿ ಅಷ್ಟೇನು ಹೆಚ್ಚಿನ ಜ್ಞಾನವನ್ನು ಹೊಂದದ ಕರ್ನಾಟಕದ ಸಂಸ್ಕೃತಿಯನ್ನು ಬೋಧಿಸಿತು ಮತ್ತು ದೇಶಾಭಿಮಾನದ ಹುರುಪು ಕವಿಗಳು ಮತ್ತು ಸಾಮಂತರ ತುಟಿಯ ಮೇಲೆ ಇನ್ನೂ ಇತ್ತು ಎಂಬುದನ್ನು ಇಡೀ ಆಸ್ಥಾನಕ್ಕೆ ಮನದಟ್ಟು ಮಾಡಿತು. ಈ ಕೃತಿಯಿಂದ ಸೋಮೇಶ್ವರನು ಬಹಳ ಸಂತೃಪ್ತನಾದನೆಂದು ನಾವು ತಿಳಿಯುತ್ತೇವೆ ಮತ್ತು ಇದಕ್ಕೆ ಸಮಾನವಾಗಿ ಅದನ್ನು ಸಮರ್ಪಣೆಯಾಗಿ ಸ್ವೀಕರಿಸಿದನು. ಇದರ ಪ್ರಶಂಸೆ ಮತ್ತು ಅಭಿನಂದನಾ ಧನಿಯು ಹೊಯ್ಸಳ ಸಾಮ್ರಾಜ್ಯದ ಪ್ರಸ್ತುತದ ಸ್ಥಿತಿ ಮತ್ತು ಅದರ ಭವಿಷ್ಯದ ನಂಬಲಾರ್ಹ ಆಶೋತ್ತರಗಳೆರಡರ ದೃಷ್ಟಿಯಿಂದ ಅಸಂಬದ್ಧವಾದರೂ, ಎಲ್ಲಾ ದೃಷ್ಟಿಯಿಂದಲೂ ಸಾಹಿತ್ಯ ವಿಡಂಬನೆಯ ಒಂದು ದೊಡ್ಡ ಅಸಂಬದ್ಧ ಉದಾಹರಣೆಯಾದರೂ ಇದು ರಾಜನನ್ನು ಉತ್ತೇಜಿಸುವಲ್ಲಿ ವಹಿಸಿದ ಪಾತ್ರವನ್ನು ನಾವು ಅಲ್ಲಗಳೆಯಲಾಗುವುದಿಲ್ಲ. ಇದರಿಂದಾಗಿ 1253ರ ಮಾರ್ಚ್ ವೇಳೆಗೆ ಸೋಮೇಶ್ವರನು ಪುನಃ ಕಣ್ಣಾನೂರಿನಲ್ಲಿದ್ದನು. 'ವಿಕ್ರಮಪುರ' ಎಂದು ಕರೆಯಲಾದ ಬೃಹತ್ ರಾಜಧಾನಿಯನ್ನು ಅವನ ಬಾಹುಬಲದಿಂದ ಜಯಿಸಿದ್ದನು. ಈ ವೇಳೆಗೆ

ರಾಜೇಂದ್ರನು ಕಾನ್ಸಿ ಮತ್ತು ಮಧುರಿಯಿಂದ ಆಘಾತಕಾರಿ ಸುದ್ದಿಯನ್ನು ಕೇಳಿದನು ಮತ್ತು ಹೊಯ್ಸಳರ ಅವಶ್ಯಕತೆಯನ್ನು ಆಗ ಅರಿತನು. ಒಂದು ಸಂಧಾನವನ್ನು ಮಾಡಿಕೊಳ್ಳಲಾಯಿತು. ದೇವಸ್ಥಾನದ ಗೋಡೆಗಳ ಮೇಲೆ ಕೆತ್ತಲಾದ ಮಾಮದಿಗೆ ಯಾವುದೇ ಖಂಡನಾರ್ಹ ಉಲ್ಲೇಖ ಗಳನ್ನು ಚೋಳರು ಮಾಡಲಿಲ್ಲ.

ಸೋಮೇಶ್ವರನು ತನ್ನ ವಿಜಯವನ್ನು ಆನಂದಿಸಲು ಕೇವಲ ಕೆಲವೇ ಕ್ಷಣಿಕ ಸಮಯವನ್ನು ಹೊಂದಿದ್ದ. ಮೊದಲನೆಯದಾಗಿ ಜೈನಧರ್ಮದೆಡೆಗೆ ತತ್‌ಕ್ಷಣವಾದ ಅತಿ ಉತ್ಸಾಹವನ್ನು ತೋರಿಸಿದನು. ಇವನು ನಾಲ್ಕು ಗಡಿ ಪ್ರಾಂತ್ಯಗಳಲ್ಲಿ ತ್ರಿಭುವನ ವಿಜಯ ತೀಥಾಧಿನಾಥನನ್ನು ಗೌರವಾರ್ಥವಾಗಿ ಇಳೆಯರಾಜನನ್ನಾಗಿ ಪ್ರದರ್ಶಿಸಲು ಒಂದು ಆಜ್ಞೆಯನ್ನು ಹೊರಡಿಸಿದನು. ಇವನ ಮಗನಾದ ನರಸಿಂಹನು ಈಗಾಗಲೇ ಹಿಂದಿನ ಮಾರ್ಚ್‌ನ ತಿಂಗಳಲ್ಲಿ ಬೇಲೂರಿನ ಚನ್ನಕೇಶವ[12] ದೇವರಿಗೆ ಕೊಡುಗೆಯನ್ನು ನೀಡಿದ್ದು, 1254ರ ಡಿಸೆಂಬರ್‌ನಲ್ಲಿ ವಿಜಯ ಪಾರ್ಶ್ವನಿಗೆ ಕಾಣಿಕೆಯನ್ನು ನೀಡಿದನು. ಇದೇ ರಾಜಕುಮಾರನು 1255ರ ಫೆಬ್ರವರಿಯ ಕಡೆಯ ಹೊತ್ತಿಗೆ ತನ್ನ ಉಪನಯನ ಆಚರಣೆಯ ಸಂದರ್ಭದಲ್ಲಿ ಒಂದು ಬಸದಿಗೆ ಮತ್ತೊಂದು ಕಾಣಿಕೆ ನೀಡಿದನು. 1254ರಲ್ಲಿ ರಾಜನ ಇಬ್ಬರು ಗಂಡುಮಕ್ಕಳನ್ನು ಪಟ್ಟದ ಹಂತಕ್ಕೇರಿಸಿದ ಅಂಶವನ್ನೊಳಗೊಂಡಂತೆ ಸೋಮೇಶ್ವರನು ಪುನಃ ಅತೀವ ಭಾದೆಯಿಂದ ರೋಸಿ ಹೋಗಿದ್ದನು. ಬಿಜ್ಜಳ ಮಾಚದೇವಿಯಿಂದ ಜನಿಸಿದ ನರಸಿಂಹನು ಹೊಯ್ಸಳ ನಾಡಿನ ಗದ್ದುಗೆಯನ್ನೇರಿದಾಗ ಕೇವಲ 15 ವರ್ಷದವನಾಗಿದ್ದನು. ಈತನ ಇನ್ನೋರ್ವ ಪತ್ನಿ ಚಾಳುಕ್ಯರ ರಾಜಕುಮಾರಿ ದೇವಲ ಅಥವಾ ದೇವಿಕಾಳಿಯಿಂದ ಪಡೆದ ಮಗನಾದ ರಾಮನಾಥನು (ನರಸಿಂಹ) ಅವನಿಗಿಂತ ದೊಡ್ಡವನಾಗಿರಲಿಲ್ಲ. ನರಸಿಂಹನು 1255ರಲ್ಲಿ ದೋರ ಸಮುದ್ರವನ್ನು ಆಳಿತನೆಂದು ರಾಮನಾಥನ ಮೊದಲ ವರ್ಷವು 1254 ಆಗಿದ್ದು ಅವನ ಎರಡನೇ ವರ್ಷವು ಅವನ ತಂದೆಯಂತೆ 'ಭುವಿಯ ಅಥವಾ ಭುವನಶ್ರೇಷ್ಟ ಸಾಮ್ರಾಟ' ಎಂಬ ಬಿರುದುಗಳಿಂದ ಹೊಗಳಲಾಯಿತು. ಹೊಯ್ಸಳ ಸಾಮ್ರಾಜ್ಯವನ್ನು ಆಳುವ ವಿಧಾನವು ಸಂಪೂರ್ಣವಾಗಿ ವಿಫಲತೆ ಯನ್ನು ಹೊಂದಿತ್ತು ಎಂಬುದನ್ನು ಸೋಮೇಶ್ವರನು ಸ್ಪಷ್ಟವಾಗಿ ಮನಗೊಂಡಿದ್ದನು. ಅದರಂತೆ ಘಟ್ಟ ಪ್ರದೇಶದ ಮೇಲ್ಭಾಗ ಮತ್ತು ಕೆಳಭಾಗದ ಎರಡೂ ಪ್ರದೇಶಗಳನ್ನೂ ತಲಾ ಒಬ್ಬೊಬ್ಬರು ಸಾಮ್ರಾಟರು ನೋಡಿಕೊಂಡು ಅಲ್ಲಿನ ಪರಿಸ್ಥಿತಿಗಳನ್ನು ನಿಭಾಯಿಸುವಂತೆ ಭವಿಷ್ಯದ ಒಂದು ಯೋಜನೆಯನ್ನು ರೂಪಿಸಿದನು. ಸಮೀಪಿಸುತ್ತಿರುವ ಸಾವನ್ನು ನಿರೀಕ್ಷಿಸುತ್ತ ಅಥವಾ ಅವನ ಅಸಮರ್ಥತೆಯ ಅರಿವಿನಲ್ಲಿ ಧರ್ಮಶಾಸ್ತ್ರದ ಪ್ರಕಾರ ಅವನ ಕ್ಷೀಣಿಸುತ್ತಿದ್ದ ಸಾಮ್ರಾಜ್ಯವನ್ನು ಪ್ರತೀ

ನ್ಯಾಯಬದ್ಧ ಮಗನಿಗೆ ಪಿತ್ರಾರ್ಜಿತ ರಾಜ್ಯದಲ್ಲಿ ಒಂದು ಭಾಗವನ್ನು ಕೊಡುವ ನಿಯಮವನ್ನಾಧರಿಸಿ ತನ್ನಿಬ್ಬರು ಮಕ್ಕಳ ನಡುವೆ ಇಬ್ಭಾಗ ಮಾಡಿದನು. ಈ ರೀತಿಯಾಗಿ ಹೊಯ್ಸಳ ರಾಜ್ಯ ಸರ್ಕಾರವು ವಯಸ್ಕ ಅಸಮರ್ಥನೊಬ್ಬನ ಮತ್ತು ಇಬ್ಬರು ಅಪ್ರಾಪ್ತರ ಕೈಯಲ್ಲಿ ಬಹಳ ಸಂಕಷ್ಟ ಪರಿಸ್ಥಿತಿಯಲ್ಲಿ ಸಿಲುಕಿಕೊಂಡಿತು. ಸರ್ವವ್ಯಾಪ್ತಿಯಾಗಿ ಮೆರೆಯುತ್ತಿದ್ದ ಸಿಂಗಣ ದಣ್ಣಾಯಕನು ಬಹಳ ಚಟುವಟಿಕೆ ಯಿಂದ ಕೂಡಿದ್ದನು ಮತ್ತು ಹೆಚ್ಚು ಉನ್ನತಿಯನ್ನು ಸಾಧಿಸಿದ್ದನು, ಇವನೊಂದಿಗಿನ ಸೋಮೇಶ್ವರ ಹಾಗೂ ರಾಜೇಂದ್ರ ಸಂಬಂಧವು ಅಸ್ಪಷ್ಟತೆಯಿಂದ ಕೂಡಿತ್ತು. 1251–52ರಲ್ಲಿ ಅವನು ದೇವಸ್ಥಾನ ಗಳಿಗೆ ಕಾಣಿಕೆಯನ್ನು ನೀಡುತ್ತಿದ್ದನು. ರಾಮನಾಥನ ಮೂರನೇ ವರ್ಷದಲ್ಲಿ ಅವನು ಒಂದು ಸಾಲೈ ಅಥವಾ ದವಾಖಾನೆಯನ್ನು ಶ್ರೀರಂಗಂ ಬಳಿ ಸ್ಥಾಪಿಸಿದನು ಮತ್ತು ರಾಮನಾಥನ 23ನೇ ವಯಸ್ಸಿನಲ್ಲಿ ಪೂರ್ವಕ್ಕೆ 20 ಮೈಲು ದೂರದಲ್ಲಿದ್ದ ಕಣ್ಣಾನೂರಿನಿಂದ ತಿರುಮೂಲವಾಡಿಯ ದೇವರಿಗೆ ಕೊಡುಗೆ ಯನ್ನು ಕೊಡುವಲ್ಲಿ ಭಾಗವಹಿಸಿದ್ದನು. ಅವನ ದಾನದ ತಾತ್ಕಾಲಿಕ ಫಲವನ್ನುಣ್ಣಲು ಅವನಿಗೆ ಒಂದು ವರ್ಷಕ್ಕಿಂತ ಹೆಚ್ಚು ಅವಕಾಶ ಮಾಡಿಕೊಡಲಿಲ್ಲ.[13]

### 1254–1257 ಜಾತವರ್ಮನ್ ಸುಂದರಪಾಂಡ್ಯನ ದಿಗ್ವಿಜಯ: ಸೋಮೇಶ್ವರನ ಸೋಲು

1ನೇ ಜಾತವರ್ಮನ್ ಸುಂದರಪಾಂಡ್ಯನು ಪಾಂಡ್ಯ ವಿಜಯಗಳತ್ತ ಗಮನ ಹರಿಸಿದನು. ಅವನ ಅಧಿಕಾರೋಹಣದಿಂದ ಪಾಂಡ್ಯರ ನೀತಿಗಳಿಗೆ ಒಂದು ಹೊಸ ಮೆರುಗು ಬಂದಿತು. ಚೋಳ ಹೊಯ್ಸಳರ ಮೈತ್ರಿಯ ಸ್ಪಷ್ಟ ನ್ಯೂನತೆಗಳು ಗಮನವನ್ನು ಸೆಳೆದವು. ಹೊಯ್ಸಳ ಕಡವರ ಮಧ್ಯೆ, ಕಡವ ಚೋಳರ ಮಧ್ಯೆ ಇವರೆಲ್ಲರೂ ಮತ್ತು ತಿಕ್ಕಣ್ಣನ ಮಗನಾದ ನೆಲ್ಲೂರಿನ ಗಂದಗೋಪಾಲ ಮತ್ತು ಹಾಗೂ ಕಾಕತೀಯ ಗಣಪತಿಯ ನಡುವಿನ ಸ್ಪರ್ಧೆಯ ಮಟ್ಟವು ಎಷ್ಟಿತ್ತೆಂಬುದನ್ನು ನಿರ್ದಿಷ್ಟವಾಗಿ ಲೆಕ್ಕ ಮಾಡಬಹುದು. 1255 ನಡುಬೇಸಿಗೆಯಲ್ಲಿ ಪಾಂಡ್ಯರು ಎತ್ತರವಾಗಿ ಒಂದು ಅನ್ವೇಷಿಕ ದಂಡೆಯಾತ್ರೆಯನ್ನು ಹೊರಡಿಸಿದನು. ಇದರಲ್ಲಿ ಸೋಮೇಶ್ವರನು ಅಪಾರ ನಷ್ಟದಿಂದ ಹಿಮ್ಮೆಟ್ಟಿಸಿದನು. ನಂತರ ಪಾಂಡ್ಯರ ನೆರವಿಗೆ ಬಾಣರು ಬಂದರು. ಆದರೆ ಸೋಮೇಶ್ವರನು 1256ರಲ್ಲಿ ಅವನನ್ನು ಶರಣಾಗುವಂತೆ ಮಾಡಿದನು. ಇಷ್ಟರಲ್ಲಿ ಸೋಮೇಶ್ವರ ಆರೋಗ್ಯವು ಎಷ್ಟು ಹದಗೆಟ್ಟಿತ್ತೆಂದರೆ ಅವನು ಬದುಕುವ ಸಾಧ್ಯತೆಗಳು ದೂರವಾಗಿದ್ದವು. ಈ ಸಂದರ್ಭದಲ್ಲಿ ರಾಜ ಬಂಟನಿಗೆ ತಿಳಿಸಲಾಯಿತು. ಇವನ ಸಾಂಪ್ರದಾಯಿಕ ಕರ್ತವ್ಯವೆಂದರೆ ಅವನ ದೊರೆಯನ್ನು ಪರ ಲೋಕಕ್ಕೆ ಕರೆದೊಯ್ಯುವುದು ಅಂದರೆ ಅವನೂ ತನ್ನ (ಅವನ) ದೊರೆಯ ಜೊತೆ ಮರಣ ಹೊಂದ ಬೇಕಾಗಿತ್ತು. ಈ ರಾಜಬಂಟನು ತನ್ನ ಹೆಂಡತಿಯರು ಮತ್ತು ಸೇವಕರೊಡಗೂಡಿ ಆತ್ಮಹತ್ಯೆ ಮಾಡಿ

ಕೊಂಡನು. ಅವನ ಆತ್ಮಾರ್ಪಣೆಯು ಅವೇಳೆಯಿಂದ ಕೂಡಿತ್ತು. ಏಕೆಂದರೆ ರಾಜನು ಗುಣಮುಖನಾದನು.

ಈ ಸಮಯದಲ್ಲಿ ಜಾತವರ್ಮನ್ ಸುಂದರನು ಬಲವಾಗಿ ಚೋಳ ದೇಶದ ಮೇಲೆ ಚಂಡಮಾರುತದಂತೆ ನುಗ್ಗಿದನು. ಅವನ ದಾಳಿಗೆ ಕಾಡವರು, ನೆಲ್ಲೂರಿನ ತೆಲುಗು ಕೋಡ ಕಾಕತೀಯರು ಮತ್ತು ಸೇವುಣರು ತರಗೆಲೆಯಂತೆ ಉದುರಿಹೋದರು. ಇಡೀ ತಮಿಳು ದೇಶ ಮತ್ತು ತೆಲುಗು ಜಿಲ್ಲೆಗಳ ಒಂದು ಭಾಗವು ಪಾಂಡ್ಯರ ಆಳ್ವಿಕೆಗೆ ಸೇರಿದವು. ಕೇರಳ ಮತ್ತು ಸಿಲೋನ್‌ನಿಂದ ಪ್ರಾರಂಭವಾದ ಇವನ ದಿಗ್ವಿಜಯದ ಕಥೆಯು ಯಾವುದೇ ಅಡೆತಡೆಯಿಲ್ಲದೆ ನಿರಂತರವಾಗಿ ಮುಂದುವರೆಯಿತು. ವಿಕ್ರಮ ಪಾಂಡ್ಯನೊಂದಿಗೆ ಆ ದೇಶದ ಪ್ರಸಿದ್ಧ ದೇವಾಲಯಗಳನ್ನು, ಅವನು ವಶಪಡಿಸಿಕೊಂಡ ಹೇರಳವಾದ ನಗ, ನಾಣ್ಯ, ವಜ್ರ, ವೈಡೂರ್ಯ, ಐಶ್ವರ್ಯಗಳನ್ನು ಲೂಟಿ ಮಾಡಿದ ನಲ್ಲದೆ ದಕ್ಷಿಣದಲ್ಲಿ ಶ್ರೀರಂಗಂನಿಂದ ಉತ್ತರದಲ್ಲಿ ನೆಲ್ಲೂರಿನವರೆಗೆ ಸಂಸ್ಕೃತ ಮತ್ತು ತಮಿಳಿನ ಹಲವಾರು ನಮೂನೆಗಳ ಇಪ್ಪತ್ತಕ್ಕೂ ಕಡಿಮೆ ಇಲ್ಲದಂತೆ ಶಾಸನಗಳನ್ನು ಪ್ರತಿಷ್ಠಾಪಿಸಿದನು. ಇವುಗಳು ಅವನ ವಿಸ್ಮಯಕಾರಿ ಗೆಲುವಿಗೆ ವಿಸ್ತೃತವಾದ ಹಾಗೂ ಸ್ಪುಟವಾದ ಸಾಕ್ಷಿಯನ್ನೊದಗಿಸುತ್ತವೆ. ಶ್ರೀರಂಗಂನ ಕೊಯಿಲೊಲುಗು ತಿಳಿಸುವಂತೆ ಸುಂದರನು ಸುಂದರವಾಗಿ ಸಿಂಗರಿಸಿದ ಒಂದು ಆನೆಯ ಮೇಲೆ ಕುಳಿತು ಚಿನ್ನದ ತುಲಾಭಾರವನ್ನು ಮಾಡಿದ್ದ ಎನ್ನಲಾಗಿದೆ. ಈ ದಾಖಲೆಗಳಿಂದ ತಿಳಿಯುವುದೇನೆಂದರೆ ಬಾಣನು ಈ ಕಾರ್ಯಾಚರಣೆಗಳಿಂದ ಬಹಳ ನೋವನ್ನನುಭವಿಸಿದನು. ಇನ್ನೊಂದೆಡೆ ಸಿಂಗಣ್ಣ ದಣ್ಣಾಯಕನು ತನ್ನ ಜೀವನವನ್ನು ಕಳೆದುಕೊಂಡನು. ಕ್ಷೇಮ ಎಂಬ ಈ ತಮಿಳು ದೇಶದ ಸಂಕಷ್ಟ ಪರಿಸ್ಥಿತಿಯನ್ನು ನಿಭಾಯಿಸಲು ಸೇವುಣರಿಂದ ನೇಮಕವಾದ ಸೇವುಣ ಅಧಿಕಾರಿಯು ಗಣಪತಿಯ ಗುಂಪಿಗೆ ಸೇರಿದವನಾಗಿದ್ದು ಈ ವ್ಯಕ್ತಿಯು ಬೇರೆಯ ಸಂದರ್ಭಗಳಲ್ಲಿ ಸೇವುಣರಿಂದ ಸಹಾಯ ಪಡೆದು ಪ್ರಸಿದ್ಧನಾಗಿದ್ದನು. ಇವನು ಹೊಯ್ಸಳರಿಗೆ ಒಂದು ದೊಡ್ಡ ತಲೆನೋವಾಗಿದ್ದನು. ಆದರೆ ಇವನನ್ನಾಗಿ ಸಾವಿನ ಕೂಪಕ್ಕೆ ಪಾಂಡ್ಯನು ತಳ್ಳಿದನು. ಇದರ ಮುಖಾಂತರ ದೊರೆ ರಾಮನಿಗೆ ಅಂದರೆ ರಾಮನಾಥನಿಗೆ ಒಂದು ಸೇವೆಯನ್ನು ಮಾಡಿರುವುದಾಗಿ ಹೇಳಿಕೊಂಡನು. ಅವನ ದಿಗ್ವಿಜಯ ಯಾತ್ರೆಯ ಹಾದಿಯಲ್ಲಿ ರಾಮನಾಥನಿಗೆ ಒಂದು ಸೇವೆಯನ್ನು ಮಾಡಿರುವುದಾಗಿ ಹೇಳಿಕೊಂಡನು. ಅವನ ದಿಗ್ವಿಜಯ ಯಾತ್ರೆಯ ಹಾದಿಯಲ್ಲಿ ಕಣ್ಣಾನೂರನ್ನು ವಶಪಡಿಸಿಕೊಂಡು ತನ್ನ ವಿಶೇಷ ರಕ್ಷಣೆಯಡಿ ಕಾವೇರಿ ಸಂಸ್ಥಾನವನ್ನು ತೆಗೆದುಕೊಂಡನು. ಸೋಮೇಶ್ವರ ಮತ್ತು

ರಾಮನಾಥ ಇವರಿಬ್ಬರು ತಿರುವನಮಲೈ ಕಡೆಗೆ (ಪರ್ವತ ರಾಜನಿಗೆ ಸೇರಿದ ನಗರ) ಸಾಗಿ ಅಲ್ಲಿ ಆಶ್ರಯವನ್ನು ಹೊಂದಿದರು.[14]

**ಟಿಪ್ಪಣಿಗಳು ಮತ್ತು ಉಲ್ಲೇಖಗಳು**

1) E.C.IV. Krishnarajapet, 63
2) The Hoysalas – P.117
3) The Hoysalas – P.119
4) The Hoysalas – P. 120
5) The Hoysalas – P.121
6) The Hoysalas – P.122
7) The Hoysalas – P.123
8) The Hoysalas – P. 124
9) A.R.S.I.E., 1911, Nos.526 and 527: Rangacharya: Vol. III, P. 1452 and E.C., III Mandya, 62.
10) The Hoysalas – P.125
11) The Hoysalas – P.126
12) The Hoysalas – P.127
13) The Hoysalas – P.128
14) The Hoysalas – P.129

# ಅಧ್ಯಾಯ 4
# ಕೃಷಿ, ಕೈಗಾರಿಕೆ, ವ್ಯಾಪಾರ, ವಾಣಿಜ್ಯ, ಕಂದಾಯ ಮತ್ತು ಆಡಳಿತ ವ್ಯವಸ್ಥೆ

## ಕೃಷಿ

ಹೊಯ್ಸಳರ ಕಾಲದಲ್ಲಿ ಅಷ್ಟೇ ಅಲ್ಲ. ವೀರ ಸೋಮೇಶ್ವರನ ಕಾಲದಲ್ಲಿಯೂ ಸಹ ಭೂಮಿಯು ಆರ್ಥಿಕತೆಯ ಮೂಲವಾಗಿತ್ತು. ಬಹುಪಾಲು ಜನರು ಹಳ್ಳಿಗಳಲ್ಲಿ ವಾಸಿಸುತ್ತಿದ್ದು, ತಮ್ಮ ಜೀವನ ನಿರ್ವಹಣೆಗಾಗಿ ಕೃಷಿಯನ್ನೇ ಅವಲಂಬಿಸಿದ್ದರು. ಬಹುಮಟ್ಟಿನ ಜನರು ರೈತಾಪಿ ವರ್ಗಕ್ಕೆ ಸೇರಿದವರಾಗಿದ್ದು ಕೃಷಿಯ ಮೂಲಕ ವ್ಯಾಪಾರ, ವಾಣಿಜ್ಯ ಮತ್ತು ಕೈಗಾರಿಕೆಗಳನ್ನು ಅವಲಂಬಿಸಿದ್ದರು. ಅಂದಿನ ಕಾಲದಲ್ಲಿ ಜನರು ಬೇರೆ ಮೂಲಗಳನ್ನು ಆದಾಯಕ್ಕೆ ಅವಲಂಬಿಸಿರಲಿಲ್ಲ ಏಕೆಂದರೆ ಅಂದಿನ ಕಾಲದಲ್ಲಿ ದೇಶದ ಆರ್ಥಿಕತೆಯು ಕೆಳಮಟ್ಟದಲ್ಲಿತ್ತು. ಅಂದು ವ್ಯವಸಾಯವು ಸಾಮಾಜಿಕ ಮತ್ತು ಆರ್ಥಿಕ ಜೀವನದಲ್ಲಿ ಮಹತ್ತರ ಪಾತ್ರ ವಹಿಸಿತ್ತು.

ಒಂದು ದೇಶದ ಆರ್ಥಿಕತೆಯು ಮೊದಲನೆಯದಾಗಿ ಕೈಗಾರಿಕೆಯನ್ನು ಅವಲಂಬಿಸಿರುತ್ತದೆ. ವ್ಯವಸಾಯವು ಮೊದಲನೆಯದಾಗಿ ದೇಶಕ್ಕೆ ಆಹಾರವನ್ನು ಒದಗಿಸುವುದರ ಜೊತೆಗೆ, ಎರಡನೆಯದಾಗಿ ಕೈಗಾರಿಕೆಗಳಿಗೆ ಕಚ್ಚಾವಸ್ತುಗಳನ್ನು ಒದಗಿಸುತ್ತದೆ. ಸಮಾಜವು ವರ್ಣವಿಭಾಗದಲ್ಲಿ ವ್ಯವಸಾಯವನ್ನು 'ವೈಶ್ಯ'ರಿಗೆ ವಹಿಸಲಾಗಿತ್ತು. ಆದರೆ ಮುಂದೆ ವೈಶ್ಯರು ಶ್ರೀಮಂತರಾದ ಕಾರಣ ಶೂದ್ರರನ್ನು ಕೆಲಸಕ್ಕಾಗಿ ನೇಮಕ ಮಾಡಿಕೊಳ್ಳ ತೊಡಗಿದರು. ಸಾಹಿತ್ಯಿಕ ಆಧಾರಗಳಿಂದ ನಮಗೆ ತಿಳಿಯುವುದೇನೆಂದರೆ ವ್ಯವಸಾಯ ಮಾಡುವವರನ್ನು "ಒಕ್ಕಲಿಗರು" ಎಂದು ಕರೆಯಲಾಗುತ್ತಿತ್ತು. ಶಾಸನಗಳಿಂದ ದೊರೆಯುವುದೇನೆಂದರೆ ಕೃಷಿಯ ಮೇಲೆ ಹೇರುವ ತೆರಿಗೆಗೆ "ಒಕ್ಕಲು ಮತ್ತು ಒಕ್ಕಲುದರ" ಎನ್ನುತ್ತಿದ್ದರು.

## ಭೂಮಿಯ ವಿಧಗಳು

ಸೋಮೇಶ್ವರನ ಕಾಲದಲ್ಲೂ ಸಹ ಹಿಂದಿನ ರಾಜರುಗಳ ಕಾಲದಲ್ಲಿ ಇದ್ದ ಭೂಮಿಯನ್ನು ಅಂದರೆ ಕೃಷಿ ಭೂಮಿಯಲ್ಲಿ ಹಲವಾರು ವಿಧಗಳನ್ನು ಕಾಣಬಹುದಾಗಿದೆ.

## ವರ್ಜಿತ ಭೂಮಿ

ವರ್ಜಿತ ಭೂಮಿ ಅಂದರೆ ವ್ಯವಸಾಯ ಮಾಡಬಹುದಾದರೂ ಅದನ್ನು ವ್ಯವಸಾಯಕ್ಕೆ ಬಳಸಿರಲಿಲ್ಲ. ಆದರೆ ನಮಗೆ ದೊರೆತಿರುವ ದಾಖಲೆಯ ಪ್ರಕಾರ ವ್ಯವಸಾಯಕ್ಕೆ ಉಪಯೋಗಿಸ

ಬಹುದಾದರೂ ಹೆಚ್ಚು ಫಲವತ್ತಾದ ಕಾರಣ ಮತ್ತು ಜನರ ಅನಾಸಕ್ತಿಯಿಂದಾಗಿ ಉಪಯೋಗಿಸುತ್ತಿರಲಿಲ್ಲ.

**ಬೀಳುಬಿಟ್ಟ ಭೂಮಿ**

ಭೂಮಿಯ ಫಲವತ್ತತೆಯನ್ನು ಕಾಪಾಡಲು ಭೂಮಿಯನ್ನು ಬೀಳು ಬಿಡುವುದು ಸರ್ವೇ ಸಾಮಾನ್ಯವಾಗಿತ್ತು. ಸಾಮಾನ್ಯವಾಗಿ ಭೂಮಿಯನ್ನು ಎರಡು ವರ್ಷಕ್ಕಿಂತ ಹೆಚ್ಚಿಗೆ ಬೀಡು ಬಿಡುತ್ತಿದ್ದರು ಮತ್ತು ಇದು ಭೂಮಿಯ ವಿಭಾಗದ ಮೇಲೆ ಅವಲಂಬಿತವಾಗಿದ್ದವು. ಅದೆಂದರೆ ಪ್ರಥಮ (ಮೊದಲನೆಯ ವರ್ಗ), ದ್ವಿತೀಯ (ಎರಡನೇ ವರ್ಗ), ತೃತೀಯ (ಮೂರನೇ ವರ್ಗ), ಕೊರಾಟೆ (ನಾಲ್ಕನೇ ವರ್ಗ).

**ವ್ಯವಸಾಯ ಯೋಗ್ಯ ಭೂಮಿ**

ಈ ಭೂಮಿಯನ್ನು '3' ವಿಧಗಳಾಗಿ ವಿಂಗಡಿಸಬಹುದು.

1) ತೇವಯುಕ್ತ ಭೂಮಿ
2) ಒಣಭೂಮಿ
3) ತೋಟ[1]

**1) ತೇವಯುಕ್ತ ಭೂಮಿ**

ಹೊಯ್ಸಳರ ಶಾಸನಗಳನ್ನು ಅವಲೋಕಿಸಿದಾಗ ಅಕಾಲದಲ್ಲಿ ತೇವಯುಕ್ತ ಭೂಮಿಯನ್ನು ಅನೇಕ ಹೆಸರುಗಳಿಂದ ಕರೆಯಲಾಗುತ್ತಿತ್ತು. 'ನೀರಮಣ್ಣು' ಎಂಬ ಪದವನ್ನು ಒದ್ದೆಯ ಮಣ್ಣು ಎಂಬುದಾಗಿ ಕರೆಯುತ್ತಿದ್ದರು.

1) ಗದ್ದೆ[2], ಗಾರ್ಡೆ[3], ಗಾಲ್ದೆ[4]
2) ಎರೆಯಗದ್ದೆ[5], ಕೆಂಪು
3) ಮನಲಗದ್ದೆ[6] ಮರಳುಭೂಮಿ
4) ಹತ್ತಿಯಗದ್ದೆ[7] ಅತಿಯಾದ ಮರಳುಭೂಮಿ, ಕ್ಷಲಕ ವಸ್ತುಗಳಿಂದ ವರ್ಜಿತವಾದ ಭೂಮಿ

## 2) ಒಣಭೂಮಿ

ಒಣಭೂಮಿಯಲ್ಲಿ ಅನೇಕ ವಿಧಗಳಿದ್ದು ಅವುಗಳು ಈ ರೀತಿ ಇವೆ.

1) ಬೆದ್ದಲು ಅಥವಾ ಬೆದ್ದಲೆ[8]

2) ಹೊಲ[9]

3) ಎರೆಯ ಹೊಲ[10]

ಕ್ರಿ.ಶ. 1317ರಲ್ಲಿ ನಾಗಮಂಗಲ ತಾಲ್ಲೂಕಿನಲ್ಲಿ ದೊರೆತಿರುವ ಶಾಸನದಲ್ಲಿ 600 ಬೆದ್ದಲನ್ನು ಆಧ್ಯಾತ್ಮಿಕ ಕಾರ್ಯಕ್ಕಾಗಿ ನೀಡಿದ್ದುದು ತಿಳಿದುಬಂದಿದೆ. ಒಣಭೂಮಿಯನ್ನು 'ಹೊಲ' ಎಂದು ಕರೆಯುತ್ತಿದ್ದರು. ಈ ತೆರನಾದ ಭೂಮಿಯಲ್ಲಿ ಜೋಳ, ರಾಗಿ, ಹತ್ತಿ, ಎಳ್ಳು, ಹಳ್ಳು, ಕಡ್ಲೆಕಾಯಿ ಮುಂತಾದ ಬೆಳೆಗಳನ್ನು ಬೆಳೆಯುತ್ತಿದ್ದರು.

## 3) ತೋಟ

ತೋಟದಲ್ಲಿ ಮೂರು ರೀತಿಯ ವಿಧಗಳನ್ನು ಕಾಣಬಹುದಾಗಿದೆ.

1) ತರಕಾರಿ ತೋಟಗಳು

2) ಹೂ ತೋಟಗಳು

3) ಹಣ್ಣು ತೋಟಗಳು

ಶಾಸನಗಳಲ್ಲಿ ತೋಟದ ಬೆಳೆಗಳ ಬಗ್ಗೆ ದೊರೆತಿದೆ. ಉದಾ. ಅಡಿಕೆ ತೋಟ[11], ತೆಂಗಿನ ತೋಟ[12], ಹೂವಿನ ತೋಟ[13], ಮೆಲುಮಕ್ಕಿ ತೋಟ[14], ಕಬ್ಬಿನ ತೋಟ[15], ಮಾವಿನ ತೋಟ[16]. ದಕ್ಷಿಣ ಭಾರತದಲ್ಲಿ ಮನೆಗೆ ತುಂಬಾ ಅವಶ್ಯಕವಾದ ತೆಂಗಿನಕಾಯಿಯನ್ನು ಬೆಳೆಯುತ್ತಿದ್ದರೆಂದು ತಿಳಿದು ಬರುತ್ತದೆ ಹಾಗೂ ವಿಳ್ಯದೆಲೆ ಮತ್ತು ಅಡಿಕೆಯನ್ನು ಸಹ ಬೆಳೆಯುತ್ತಿದ್ದರು. ಕೆಲವು ಶಾಸನಗಳ ಮೂಲಕ ನಮಗೆ ದೇವಾಲಯಗಳು ಕೂಡ ತೋಟಗಳನ್ನು ಹೊಂದಿದ್ದು, ಪೂಜೆಯ ಸಾಮಾಗ್ರಿಗಳಾದ ಎಲೆ, ಅಡಿಕೆ ಮತ್ತು ತೆಂಗಿನ ಫಲಗಳನ್ನು ಬೆಳೆಯಲು ಉಪಯೋಗಿಸುತ್ತಿದ್ದರು. ಕೆಲವು ಭೂಮಿಗಳನ್ನು ವ್ಯವಸಾಯ ಮಾಡಲು ಜನರಿಗೆ ನೀಡಲಾಗುತ್ತಿತ್ತು. ಕ್ರಿ.ಶ. 1183ರಲ್ಲಿ ದೊರೆತಿರುವ ಶಾಸನದಲ್ಲಿ '3' ಎಕರೆ ಉಳುವಂತಹ ಭೂಮಿಯನ್ನು ದಾನ ಮಾಡಿರುವುದು ಕಂಡುಬಂದಿದೆ. ಈ ಭೂಮಿಗೆ 'ತಕ್ಕಲು ಭೂಮಿ' ಎಂದು ಕರೆಯುತ್ತಿದ್ದರು.[17]

## ರಾಜನಿಂದ ದಾನ ಮಾಡಲ್ಪಟ್ಟ ಭೂಮಿ

ರಾಜನಿಂದ ಸಮ್ಮತಿಸಲ್ಪಟ್ಟ ಅಥವಾ ದಾನ ಮಾಡಲ್ಪಟ್ಟ ಭೂಮಿ ಅಂದರೆ ರಾಜನು ಮತ್ತು ಆತನ ಅಧಿಕಾರಿಗಳು ನೀಡುತ್ತಿದ್ದ ಭೂಮಿಯಾಗಿತ್ತು. ಸಾಮಾನ್ಯವಾಗಿ ರಾಜನೇ ಭೂಮಿಯನ್ನು ದೇವಾಲಯಗಳಿಗೆ, ಟ್ರಸ್ಟ್‌ಗಳಿಗೆ ಮತ್ತು ಬ್ರಾಹ್ಮಣರಿಗೆ ನೀಡುತ್ತಿದ್ದನು. ರಾಜನ ಅಧಿಕಾರಿಗಳು ಕೂಡ ದೇವಾಲಯದ ನಿರ್ಮಾಣ ಕಾರ್ಯದಲ್ಲಿ ಸಮವಾದ ಹೊರೆಯನ್ನು ಹೊರುತ್ತಿದ್ದರು. ಇದರ ಫಲವಾಗಿ ಅನೇಕ ದೇವಾಲಯಗಳು ಭಿನ್ನಭಿನ್ನ ಆಕೃತಿಗಳಲ್ಲಿ ಈ ಅವಧಿಯಲ್ಲಿ ನಿರ್ಮಾಣವಾದವು. ದೇವಾಲಯದ ರಕ್ಷಣೆಗೆ ವಿಶೇಷವಾದ ಗಮನವನ್ನು ನೀಡಲಾಗಿತ್ತು. ಅದರ ಅಭಿವೃದ್ಧಿಗೆ ಉಂಬಳಿಯಾಗಿ ನೀಡುವ ಭೂಮಿ ಮತ್ತು ಹಣವನ್ನು ಉಪಯೋಗಿಸಲಾಗುತ್ತಿತ್ತು.[18]

ಸೋಮೇಶ್ವರನ ಕಾಲದಲ್ಲಿ ಕ್ರಿ.ಶ. 1253ರಲ್ಲಿ ಮಂಡ್ಯ ಜಿಲ್ಲೆಯ ಗೌಡಗೆರೆಯಲ್ಲಿ ದೊರೆತಿರುವ ಶಾಸನವೊಂದು, ಗೌಡಗೆರೆಯ ಪಟ್ಟಣ ಸ್ಥಾಯಿಗಳಿಗೆ ದೇವಮಾನ್ಯ ಎಂಬ ರಾಜ ಉಂಬಳಿಯನ್ನು, ಕುಂಬಗೆರೆ ಮತ್ತು ದೇವಗೆರೆಯಲ್ಲಿನ ಭೂಮಿಗಳನ್ನು ದತ್ತಿಯಾಗಿ ಕೊಟ್ಟ ಬಗ್ಗೆ ದಾಖಲೆಯನ್ನು ಒದಗಿಸುತ್ತದೆ. ಈ ದತ್ತಿಯನ್ನು ಮುಖ್ಯವಾಗಿ ಕಾಲಲೇಶ್ವರ ದೇವಾಲಯಕ್ಕೆ ನೀಡಲಾಗಿದ್ದತ್ತೆಂದು ತಿಳಿದುಬಂದಿದೆ.[19]

ಧರ್ಮವನ್ನು ಅಭಿವೃದ್ಧಿಗೊಳಿಸಲು ಸಾಮಾನ್ಯವಾಗಿ ದಾನಿಗಳು ಭೂಮಿಯನ್ನು ಕೊಡುತ್ತಿದ್ದರು. ಕೆಲವು ಸಲ ವಿಶೇಷ ಕಾರ್ಯಗಳಿಗೆ ದಾನ ಮಾಡಲಾಗುತ್ತಿತ್ತು. ಅರಸರು ಯಾವಾಗಲೂ ಯುದ್ಧದಲ್ಲಿ ಅದಕ್ಕಿಂತ ಹೆಚ್ಚಾಗಿ ರಾಜರುಗಳು ತಮ್ಮ ರಾಜ್ಯದ ಏಳಿಗೆಗೆ ಮತ್ತು ಶಾಂತಿಗಾಗಿ ಭೂಮಿಯನ್ನು ಕೆಲವು ಧಾರ್ಮಿಕ ಸಂಸ್ಥೆಗಳಿಗೆ ಕೊಡುತ್ತಿದ್ದರು. ಇದರ ಜೊತೆಗೆ ಅವರಿಗೆ ತಮ್ಮ ನಂತರ ತಮ್ಮ ಉತ್ತರಾಧಿಕಾರತ್ವಕ್ಕೆ ಸಮರ್ಥರಾಜ ಸಿಗಲಿ, ತಮ್ಮ ವಂಶ ಉದ್ಧಾರ ವಾಗಲಿಯೆಂದು ದಾನ ಮಾಡುತ್ತಿದ್ದರು.

ದೇವಾಲಯದಲ್ಲಿ ನಡೆಯುವ ಧಾರ್ಮಿಕ ಕಾರ್ಯಗಳಿಗೆ ಭೂಮಿಯನ್ನು ಕೊಡಲಾಗುತ್ತಿತ್ತು. ಇದು ದಾನಿಯ ಉದಾರ ಗುಣವನ್ನು ಎತ್ತಿ ತೋರಿಸುತ್ತದೆ. ಅದೇ ರೀತಿ ಭೂಮಿಗಳನ್ನು ದೇವಾಲಯದಲ್ಲಿ ನಡೆಯುವ ಕೆಲವೊಂದು ಕಾರ್ಯಗಳಿಗೆ ಕೊಡಲಾಗುತ್ತಿತ್ತು.[20]

ಕ್ರಿ.ಶ. 1228ರಲ್ಲಿ ನಂಜನಗೂಡು ತಾ. ಬದನಾಳುವಿನಲ್ಲಿ ದೊರೆತಿರುವ ಶಾಸನವೊಂದು ಸ್ಥಾನಿಕರು 'ನಿರ್ಬಂಧಿ'ಯಾಗಿ ಕೊಡಬೇಕಾಗಿದ್ದ '6' ಗದ್ಯಾಣಗಳಲ್ಲಿ '2' ಗದ್ಯಾಣಗಳಷ್ಟು ಅಕ್ಕಿ ಮತ್ತು '5' ಪಣಗಳನ್ನು ದೇವರುಗಳಿಂದ ಮೂಲಸ್ಥಾನ ದೇವ ಮತ್ತು ಡೊಂಬೇಶ್ವರ ದೇವರುಗಳ ದಿನನಿತ್ಯದ ಪೂಜೆಗೆ ಕೊಡಬೇಕಾಗಿತ್ತೆಂದು ತಿಳಿದುಬರುತ್ತದೆ.[21]

ಅದೇ ರೀತಿ ಕ್ರಿ.ಶ. 1241ರಲ್ಲಿ ನಂಜನಗೂಡು ತಾಲ್ಲೋಕು ಕಲ್ಲುಂದದಲ್ಲಿ ದೊರೆತಿರುವ ತಮಿಳು ಶಿಲಾಶಾಸನದಲ್ಲಿ ಆ ನಾಡಿನ ಪ್ರಭು ಗಾಮುಂಡರು ಮತ್ತು ಕರನಾಟರ್‌ನು ಪೆರಿಯನಾಡಿನ ತೆರೆಯೂರಿನ ಪೆರುಮಾಲ್‌ಯೆಂಬ ದೇವರಿಗೆ ತಿರುವದೈಯತಮ್ ಎಂಬ ಹಳ್ಳಿಯನ್ನು ಉಂಬಳಿಯಾಗಿ ಕೊಟ್ಟಿದ್ದನ್ನು ದಾಖಲಿಸುತ್ತದೆ.[22]

## ಮಠದ ಭೂಮಿ

ಮಠಗಳಿಗೆ ನೀಡುವಂತಹ ಭೋಗ್ಯದ ಭೂಮಿಯನ್ನು 'ಮಠಪುರ' ಎಂದೇ ಕರೆಯಲಾಗುತ್ತಿತ್ತು.[23]

## ವ್ಯವಸಾಯ ಪದ್ಧತಿ

ಇಂದಿನ ವ್ಯವಸಾಯ ಪದ್ಧತಿಗೂ, ಹೊಯ್ಸಳರ ವ್ಯವಸಾಯ ಪದ್ಧತಿಗೂ ಅಷ್ಟೇನೂ ವ್ಯತ್ಯಾಸವಿರಲಿಲ್ಲ. ಸಾಹಿತ್ಯಿಕ ಆಧಾರಗಳಿಂದ ವ್ಯವಸಾಯ ಪದ್ಧತಿಯ ಕೆಲವು ವಿಧಾನಗಳ ಬಗ್ಗೆ ತಿಳಿದುಕೊಳ್ಳಬಹುದಾಗಿದೆ.[24] ಉಳುವುದು, ಗೊಬ್ಬರ ಹಾಕುವುದು, ಬೀಜಬಿತ್ತುವುದು, ನೀರು ಹಾಯಿಸುವುದು, ಬೇಲಿ ಹಾಕುವುದು, ಕಟಾವು ಮಾಡುವುದು, ಒಕ್ಕಣೆ ಮಾಡುವುದು ಮುಂತಾದವು. ಹಿಂದಿನಿಂದ ಬಂದ ಪದ್ಧತಿಯಂತೆ ರೈತರು ಬೆಳೆಗಳನ್ನು ಹಾಕಲು ವ್ಯವಸಾಯಕ್ಕೆ ಸರಿಯಾದ ಸಮಯವನ್ನು ಜ್ಯೋತಿಷ್ಯರಿಂದ ಕೇಳಿ ತಿಳಿಯುತ್ತಿದ್ದರು.[25] ನಂತರ ಭೂಮಿಯನ್ನು ಜೋಡಿ ಎತ್ತುಗಳಿಂದ ಸರಿಯಾಗಿ ಊಳಲಾಗುತ್ತಿತ್ತು. ಕೊನೆಯಲ್ಲಿ ಉಳುವ ಮೊದಲು ಸಗಣಿಯನ್ನು ಮತ್ತು ಬೂದಿಯನ್ನು ಹಾಕಲಾಗುತ್ತಿತ್ತು.[26] ಹೀಗೆ ಭೂಮಿಯನ್ನು ಬಿತ್ತಲು ಸಿದ್ಧಮಾಡಲಾಗುತ್ತಿತ್ತು.[27]

ಉತ್ತಿ, ಕಳೆ ಕಿತ್ತು, ಗೊಬ್ಬರ ಹಾಕಿದ ನಂತರ ಬೀಜವನ್ನು ಬಿತ್ತಲಾಗುತ್ತಿತ್ತು.[28] ಧಾನ್ಯಗಳ ಬೀಜಗಳನ್ನು ಇಬ್ಬನಿ ಮತ್ತುಬಿಸಲಿಗೆ ಏಳು ರಾತ್ರಿಗಳನ್ನು ಬಿಡಬೇಕಿತ್ತು. ಅದೇ ರೀತಿ ಕೊನೆ ಬೀಜಗಳನ್ನು 3 ರಾತ್ರಿಗಳು ಬಿಡಬೇಕಿತ್ತು. ಕಬ್ಬಿನ ಜೊಲ್ಲೆ ಮತ್ತು ಖಂಡಬೀಜದ ಕತ್ತರಿಸಿದ

ಕೊನೆಯ ಭಾಗಕ್ಕೆ ಜೇನುತುಪ್ಪ, ಬೆಣ್ಣೆ, ಹಂದಿಯ ಕೊಬ್ಬು ಮತ್ತು ಸಗಣಿಯನ್ನು ಕಲಸಿ ಮೆತ್ತ ಬೇಕು. ಗೆಡ್ಡ (ಖಂಡ)ಗಳಿಗೆ ಜೇನುತುಪ್ಪ, ಬೆಣ್ಣೆಯನ್ನು ಮೆತ್ತಬೇಕು. ಅದೇ ರೀತಿ ಹತ್ತಿಯ ಬೀಜಕ್ಕೆ ಸಗಣಿಯನ್ನು ಮೆತ್ತಬೇಕು.[29] ವ್ಯವಸ್ಥಿತ ರೀತಿಯ ನೀರು ಸರಬರಾಜು ಮಾಡುವುದು ಮುಂದಿನ ಹಂತವಾಗಿತ್ತು. ಅದು ಮೊಳಕೆಯೊಡೆದ ನಂತರ ಕ್ರಮಬದ್ಧವಾಗಿ ಸಸಿಗಳನ್ನು ನೆಡುವುದು ನೀರಾವರಿಯು ಈ ಹಂತದಲ್ಲಿ ಪ್ರಮುಖವಾಗಿರುತ್ತದೆ. ಬೆಳೆಯುವ ಗಿಡಗಳಿಗೆ ನೀರನ್ನು ಕಾಲುವೆ, ಕೆರೆಗಳು ಮತ್ತು ಬಾವಿಗಳಿಂದ ಸರಬರಾಜು ಮಾಡುತ್ತಿದ್ದರು.[30]

## ಬೆಳೆಯ ರಕ್ಷಣೆ

ಬೆಳೆಯು ಬೆಳೆದ ನಂತರ ಬೆಳೆಗಳನ್ನು ಕೀಟಗಳಿಂದ, ಹಕ್ಕಿಗಳಿಂದ, ಪ್ರಾಣಿಗಳಿಂದ ಮತ್ತು ಕಳ್ಳಕಾಕರಿಂದ ರಕ್ಷಿಸಬೇಕಿತ್ತು.[31] ಮೊದಲನೆಯದಾಗಿ ಈ ಕೆಲಸಕ್ಕೆ ಹುಲ್ಲಿನಿಂದ ಮಾಡಿದ ವಿಚಿತ್ರ ರೀತಿಯ ಮನುಷ್ಯನಾಕೃತಿಯನ್ನು ಹಸುಗಳು, ಪ್ರಾಣಿಗಳು, ಪಕ್ಷಿಗಳನ್ನು ಹೆದರಿಸಲು ಇಡುತ್ತಿದ್ದರು.

ಎರಡನೆಯದಾಗಿ ಕಾವಲುಗಾರರಿಗೆ ಕಾವಲು ಮನೆಯನ್ನು ನೀಡಿ ಬಿಗಿ ಭದ್ರತೆಯನ್ನು ಮಾಡುವುದಾಗಿತ್ತು.[32] ಮೂರನೆಯದಾಗಿ ಹೊಲಕ್ಕೆ ರಕ್ಷಣೆ ರೀತಿಯಲ್ಲಿ ಬಿಗಿಯಾದ ಬೇಲಿಯನ್ನು ಹಾಕಲಾಗುತ್ತಿತ್ತು. ಈ ಮೂರು ರೀತಿಯ ಪದ್ಧತಿಗಳನ್ನು ನಾವು ಇಂದಿಗೂ ಸಹ ಕಾಣ ಬಹುದಾಗಿದೆ.[33]

ಮನುವಿನ ಪ್ರಕಾರ ಬೇರೆಯವರ ಹೊಲಕ್ಕೆ ಬೇರೆಯವರ ಪ್ರಾಣಿಗಳು ನುಗ್ಗಿ ಬೆಳೆಗಳನ್ನು ಹಾಳು ಮಾಡಿದರೆ ಪ್ರಾಣಿಗಳಿಗೆ ಶಿಕ್ಷೆ ವಿಧಿಸುವ ಬದಲು ಆ ಪ್ರಾಣಿಯ ಯಜಮಾನನಿಗೆ ಶಿಕ್ಷೆ ವಿಧಿಸುತ್ತಿದ್ದರೆಂದು ಹೇಳಿದ್ದಾನೆ. ದೇವರ ಬಗ್ಗೆ ತುಂಬಾ ಭಯವಿದ್ದುದರಿಂದ ಜನ ತುಂಬಾ ವಿಧೇಯರಾಗಿದ್ದು ಬೆಳೆಗಳ ಕಳ್ಳತನದಿಂದ ದೂರವಿದ್ದರು.

## ಉಪಕರಣಗಳು

ಹೊಯ್ಸಳರ ಕಾಲದಲ್ಲಿ ರೈತರು ಅನೇಕ ರೀತಿಯ ಕೃಷಿ ಉಪಕರಣಗಳನ್ನು ಉಪಯೋಗಿಸು ತ್ತಿದ್ದರೆಂದು ತಿಳಿದುಬರುತ್ತದೆ. ನೇಗಿಲು, ಗುದ್ದಲಿ ಸಾಮಾನ್ಯವಾಗಿದ್ದವು. ಹೊಯ್ಸಳರ ಶಾಸನದಲ್ಲಿ ಸಿಗುವ ಗುಲ[34] ಎಂಬುದರಿಂದ ತಿಳಿಯುವುದೇನೆಂದರೆ ರೈತರು ಉಳುವುದಕ್ಕೆ ಕಬ್ಬಿಣದ ನೇಗಿಲನ್ನು

ಉಪಯೋಗಿಸುತ್ತಿದ್ದರೆಂದು ತಿಳಿಯುತ್ತದೆ.[36] ನೇಗಿಲ ಜೊತೆಗೆ ಗುದ್ದಲಿ, ಮಚ್ಚು, ಕೊಡಲಿ ಮತ್ತು ಹಾರೆಯನ್ನು ಉಪಯೋಗಿಸುತ್ತಿದ್ದರು. ನಮಗೆ ಖಚಿತವಾದ ಆಧಾರಗಳಿಂದ ತಿಳಿಯುವುದೇನೆಂದರೆ ಕುಡುಗೋಲನ್ನು ಗರಿಗೆ, ಬೆಳೆಯನ್ನು ಕತ್ತರಿಸಲು ಉಪಯೋಗಿಸುತ್ತಿದ್ದರೆಂದು ತಿಳಿದುಬರುತ್ತದೆ.[37] ನಂತರ ದಾಖಲೆಗಳಿಂದ ನಮಗೆ ಹೆಡಿಗೆ ಮತ್ತು ಕೇಸರಿಗಳ ಬಗ್ಗೆ ತಿಳಿಯುತ್ತದೆ.[38]

ಬುಜಾನನ ಪ್ರಕಾರ ಭತ್ತ ಬಡೆಯಲು ಮರದ ಕುಟ್ಟಾಣಿಗಳನ್ನು ಉಪಯೋಗಿಸುತ್ತಿದ್ದರೆಂದು ಹೇಳಿದ್ದಾನೆ.[39] ನಂತರದ ದಾಖಲೆಗಳಿಂದ ನಮಗೆ ಅಕ್ಕಸಾಲಿಗ,[40] ಬುಟ್ಟಿ ಎಣೆಯುವವರಿಗೆ ಮಚ್ಚು, ಕೊಡಲಿ, ಕೇಂತೂರು ಬೀಸಣಿಗೆ ಮತ್ತು ಧಾನ್ಯದ ಬುಟ್ಟಿಗಳು ಉಪಕರಣಗಳನ್ನಾಗಿ ಮಾಡಿ ಉಪಯೋಗಿಸಲು ಅವರಿಗೆ ಕೊಡಲಾಗುತ್ತಿತ್ತೆಂದು ತಿಳಿದುಬರುತ್ತದೆ.[41]

## ಗೊಬ್ಬರ

ನಮಗೆ ಹೊಯ್ಸಳರಾಜ ವೀರಸೋಮೇಶ್ವರನ ಕಾಲದಲ್ಲಿ ಉಪಯೋಗಿಸುವ ಗೊಬ್ಬರದ ಬಗ್ಗೆ ಖಚಿತವಾದ ಮಾಹಿತಿ ಇಲ್ಲಾ ಗೊಬ್ಬರದ ಗುಂಡಿಯ ಮೇಲೆ ಹೇರುವ ತೆರಿಗೆಯನ್ನು "ತಿಪ್ಪೆಸುಂಕ" ಎಂದು ಮತ್ತು ಈ ಗೊಬ್ಬರವು ಹಸುವಿನ ಸಗಣಿ ಮತ್ತು ಅನೇಕ ಎಲೆಗಳಿಂದ ತಯಾರಿಸಿ ನಂತರ ಉಪಯೋಗಿಸುತ್ತಿದ್ದರು.

## ಬೆಳೆಯ ಅವರ್ತನೆ

ಬೆಳೆಯ ಅವರ್ತನೆಯು ಕೂಡ ಮಣ್ಣಿನ ಫಲವತ್ತತೆಗೆ ಕಾರಣವಾಗುತ್ತಿತ್ತು. ಬೆಳೆಯ ಅವರ್ತನೆಯು ಹಿಂದಿನ ಕಾಲದಿಂದಲೂ ಗೊತ್ತಿದ್ದು, ಸೋಮೇಶ್ವರನ ಕಾಲದಲ್ಲೂ ಮುಂದು ವರೆದಿತ್ತು. ಗದ್ದೆ, ತೋಟ ಮತ್ತು ನಿರಾರಂಭ ಭೂಮಿಗಳಲ್ಲಿ ಯಾವಾಗಲೂ ನೀರು ಸಿಗುತ್ತಿದ್ದ ಕಾರಣ 2–3 ಬೆಳೆಗಳನ್ನು ಬೆಳೆಯಬಹುದಿತ್ತು. ಇದರಿಂದ ನಮಗೆ ತಿಳಿಯುವುದೇನೆಂದರೆ ಆ ಕಾಲದಲ್ಲಿ ಬೆಳೆಯ ಬಗ್ಗೆ ತಿಳಿದಿದ್ದೆಂದು ಗೊತ್ತಾಗುತ್ತದೆ.

ಅಕ್ಕಿ ಮತ್ತು ಕಬ್ಬುಗಳನ್ನು ಗದ್ದೆ ಮತ್ತು ನಿರಾರಂಭ ಭೂಮಿಗಳಲ್ಲಿ ಬೆಳೆಯಲಾಗುತ್ತಿತ್ತು. ಅನೇಕ ತರಹದ ಫಲಗಳು, ತರಕಾರಿಗಳು ಮತ್ತು ಹೂಗಳನ್ನು ಬೆಳೆಯಲಾಗುತ್ತಿತ್ತು. ಜೊತೆಗೆ ಶಾಸನಗಳಿಂದ ತಿಳಿಯುವುದೇನೆಂದರೆ ಒಣ ಭೂಮಿಯೆಂದು ಕರೆಯಲ್ಪಡುವ ನಿರಾವರಿಯ ಬೆದ್ದಲೆ,

ನೀರೆತ್ತುವ ಭೂಮಿ, ಕಾರು ಬೆಳೆಯ ಬೆದ್ದಲೆ ಮತ್ತು ಕದರಂಭಗಳನ್ನು ಮಳೆಯ ಕಾಲದಲ್ಲಿ ವ್ಯವಸಾಯ ಮಾಡಬೇಕಿತ್ತು. ಈ ಕಾಲದಲ್ಲಿ ತಮಿಳು ದೇಶದಲ್ಲಿ ಒಣ ಭೂಮಿಗಳಲ್ಲಿ ಬೆಳೆದ ಒಣ ಬೆಳೆಗೂ ಮತ್ತು ತೇವಯುಕ್ತ ಭೂಮಿಯಲ್ಲಿ ಬೆಳೆದ ಬೆಳೆಗೂ ಕೆಲವು ವ್ಯತ್ಯಾಸಗಳಿದ್ದವು. ಆದ್ದರಿಂದ ರೈತರು ಎಲ್ಲಿ ನಿರಂತರವಾಗಿ ನೀರು ಸರಬರಾಜು ಆಗುತ್ತಿತ್ತೋ ಅಲ್ಲಿ ಒಂದರ ನಂತರ ಇನ್ನೊಂದು ಬೆಳೆಯನ್ನು ಬೆಳೆಯುತ್ತಿದ್ದರು.

## ಮುಖ್ಯ ಬೆಳೆಗಳು

ನಮ್ಮ ಅಧ್ಯಾಯಕ್ಕೆ ಅನುಕೂಲವಾಗುವಂತೆ ಸೋಮೇಶ್ವರನ ಕಾಲದಲ್ಲಿ ಬೆಳೆಯುತ್ತಿದ್ದ ಬೆಳೆಗಳನ್ನು ಈ ಕೆಳಗೆ ಕಾಣಿಸಿದಂತೆ ವಿಭಾಗ ಮಾಡಲಾಗಿದೆ. ಅವುಗಳೆಂದರೆ ದವಸ, ಎಣ್ಣೆ ಬೀಜಗಳು, ತೋಟದ ಬೆಳೆಗಳು, ತರಕಾರಿ, ಹಣ್ಣುಗಳು, ಹೂವುಗಳು ಮುಂತಾದವುಗಳು.

## ಕಾಳುಗಳು

ಆಗಿನ ಕಾಲದಲ್ಲಿ ಬೆಳೆಯುತ್ತಿದ್ದ ಬೆಳೆಗಳೆಂದರೆ ತೊಗರಿ, ಕಡಲೆ, ಹೆಸರು, ಉದ್ದು, ಅವರೆ, ಹುರುಳಿ, ಹಲಸಂದೆ[42] ಈ ಮೇಲೆ ತಿಳಿಸಿರುವ ಬೆಳೆಗಳನ್ನು ಇಂದಿಗೂ ಸಹ ಬೆಳೆಯಲಾಗುತ್ತಿದೆ.

## ತೋಟದ ಬೆಳೆಗಳು

ತೋಟಗಳಲ್ಲಿ ಬೆಳೆಯುವ ಬೆಳೆಗಳೆಂದರೆ ತೆಂಗು, ಕಂಗು, ಅಡಿಕೆ, ಕಬ್ಬು, ಎಲೆಬಲಿ ಮುಂತಾದವು.[43] ದಾಖಲೆಗಳಿಂದ ನಮಗೆ ತಿಳಿಯುವುದೇನೆಂದರೆ ನರಿಗಳು ಕಬ್ಬಿನ ತೋಟವನ್ನು ಹಾಳು ಮಾಡುತ್ತಿದ್ದವು. (ಕಬ್ಬಿನ ತೋಡವಂ ನರಿ ಪೊಕ್ಕಂತೆ)[44] ಕಬ್ಬು ಮತ್ತು ಹತ್ತಿ ಅಂದಿನ ಬಹು ಮುಖ್ಯವಾದ ವಾಣಿಜ್ಯ ಬೆಳೆಗಳಾಗಿದ್ದವು.[45]

## ಫಲಗಳು

ಬಾಳೆ, ಕಡಲಿ (ಬಾಳೆ) ಅಂಬ್ರೂ (ಮಾವು), ಹಲಸು ಕಿತ್ತಲೆ, ನಾರಂಗ, ದಾಳಿಂಬೆ, ದ್ರಾಕ್ಷಿ ಜಂಬು, ಖರ್ಜೂರ, ಪೆರಿಲೆ, ಹೆರಲೆ[46], ನಿಂಬೆ[47], ಬ್ಯಾಲ[48] ಮಾತುಲಂಗ[49] ಮತ್ತು ಹುಣಿಸೆ[50].

## ಹೂಗಳು

ಸಾಹಿತ್ಯಿಕ ಆಧಾರಗಳಿಂದ ನಮಗೆ ಈ ಕೆಳಕಾಣಿಸಿದ ಹೂಗಳ ಬಗ್ಗೆ ಮಾಹಿತಿ ದೊರಕಿದೆ.

- ಸಂಪಿಗೆ
- ನಾಗಸಂಪಿಗೆ
- ಮಲ್ಲಿಗೆ
- ಮಾಧವಿಲತಾ
- ಜಾಲಿ
- ಗಣಗಲಿ
- ಚೆನ್ನಾ ಕಣಗಲಿ
- ಸುರಿಗೆ, ಸುರಹೊನ್ನೆ
- ಕಮಲ
- ಹೊಂಗೆದಾಗೆ: ಕೇದಿಗೆ, ಕೇದಿಗೆ
- ಪಾದರಿ[51]
- ಪಾರಿಜಾತ[52]
- ದಾಸವಾಳ
- ಮಂದಾರ
- ಕಾರವೀರ[53]
- ನಂದಿಬಟ್ಟಲು[54]

ಹಾಗೂ ತರಕಾರಿಗಳೆಂದರೆ:

- ಬೆಂಡೆ[55]
- ಕುಂಬಳ[56]
- ಹೀರೆ[57]

- ಸೌತೆ[58]
- ಹಾಗಲ[59]
- ಸೌರೆ[60]

## ಸಾಕು ಪ್ರಾಣಿಗಳು

ವ್ಯವಸಾಯಕ್ಕೆ ಸಾಕುಪ್ರಾಣಿಗಳು ಅವಶ್ಯಕವಾಗಿದ್ದವು. ಆಕಳುಗಳ ಲಾಲನೆ ಪಾಲನೆಯು ರೈತರಿಗೆ ಪ್ರಮುಖ ಕೆಲಸವಾಗಿತ್ತು. ವ್ಯವಸಾಯ ಹಾಗೂ ಜಾನುವಾರುಗಳು ಒಂದನ್ನೊಂದು ಅವಲಂಬಿಸಿದ್ದವು. ಇವುಗಳು ರೈತರ ಜೀವನದಲ್ಲಿ ಅವಶ್ಯಕವಾದ ಭಾಗವಾಗಿದ್ದವು. ಹಸು, ಎಮ್ಮೆ, ಎತ್ತು, ಕುರಿ, ಆಡು, ಕತ್ತೆ ಮುಂತಾದ ಪ್ರಾಣಿಗಳು ಅಂದಿನ ಕಾಲದ ಸಾಕುಪ್ರಾಣಿಗಳಾಗಿದ್ದವು. ಹಿಂದೂಗಳು ಹಸುವಿಗೆ ಪವಿತ್ರ ಸ್ಥಾನವನ್ನು ನೀಡಿದ್ದರು. ಏಕೆಂದರೆ ಅದು ಮನುಷ್ಯನ ಜೀವನಕ್ಕೆ ಅವಶ್ಯಕವಾಗಿ ಬೇಕಾದ ಹಾಲು, ಮೊಸರು, ಬೆಣ್ಣೆ, ತುಪ್ಪ, ಗಿಣ್ಣುಗಳನ್ನು ಕೊಡುತ್ತಿತ್ತು.[61] ಎತ್ತುಗಳನ್ನು ವ್ಯವಸಾಯ ಕಾರ್ಯಗಳಿಗೆ ಬಳಸಲಾಗುತ್ತಿತ್ತು. ಇವುಗಳನ್ನು ಉಳುವ ಕಾರ್ಯಕ್ಕೆ ಅಷ್ಟೇ ಅಲ್ಲದೆ ನೀರು ಎಳೆಯುವ ಕಾರ್ಯಕ್ಕೂ ಉಪಯೋಗಿಸುತ್ತಿದ್ದರು. ಕಾಲಾನಂತರ ಎತ್ತುಗಳನ್ನು ಬಾರವನ್ನು ಎತ್ತುವುದಕ್ಕೆ ಮತ್ತು ಸಾಗಾಣಿಕೆಗೆ ಉಪಯೋಗಿಸುತ್ತಿದ್ದರು. ಎತ್ತಿನ ಬಂಡಿಗಳಿಗೂ ತೆರಿಗೆಯನ್ನು ವಿಧಿಸಲಾಶಗುತ್ತಿತ್ತು. ಎತ್ತಿನ ಬಂಡಿಯ ಭಾರಕ್ಕೆ ಹಾಕುತ್ತಿದ್ದ ತೆರಿಗೆಗೆ 'ಅಡ್ಡ' ಎಂದು ಕರೆಯುತ್ತಿದ್ದರು. ಕತ್ತೆಯ ಬಾರಕ್ಕೆ 'ಹಾಗ' ಎನ್ನುತ್ತಿದ್ದರು.[62] ಈ ರೀತಿಯ ವ್ಯತ್ಯಾಸದ ತೆರಿಗೆ ಏಕೆಂದರೆ ಪ್ರಾಣಿಗಳು ಭಾರ ಹೊರುವ ಸಾಮರ್ಥ್ಯದ ಮೇಲೆ ತೆರಿಗೆ ನಿರ್ಧಾರವಾಗುತ್ತಿತ್ತು. ಎತ್ತುಗಳನ್ನು ಎಣ್ಣೆ, ಕೈಗಾರಿಕೆ ಮಿಲ್ಲುಗಳಲ್ಲಿಯೂ ಉಪಯೋಗಿಸುತ್ತಿದ್ದರು.[63] ಎರಡು ಎತ್ತುಗಳು ಮತ್ತು ಎತ್ತಿನಿಂದ ಎಳೆಯುವ ಎಣ್ಣೆಯ ಮಿಲ್ಲುಗಳಿದ್ದವು.[64] ಕೆಲವು ತೆರಿಗೆಗಳನ್ನು ಒಳ್ಳೆಯ ಹಸುಗಳಿಗೆ, ಒಳ್ಳೆಯ ಎಮ್ಮೆಗಳಿಗೆ, ಎತ್ತು ಮತ್ತು ಆಡುಗಳ ಮೇಲೆ ಹೇರಲಾಗುತ್ತಿತ್ತು. ನಮಗೆ ಒಳ್ಳೆಯ ಹಸು ಮತ್ತು ಎತ್ತುಗಳ ಬಗ್ಗೆ ಮಾಹಿತಿ ದೊರೆತಿದೆ.[65]

## ಹುಲ್ಲುಗಾವಲು

ಎಲ್ಲಾ ಕಾಲದಲ್ಲೂ ಹುಲ್ಲುಗಾವಲು ವ್ಯವಸಾಯಕ್ಕೆ ಅವಶ್ಯಕವಾಗಿತ್ತು. ಒಂದು ಒಳ್ಳೆಯ ದೇಶವು ಹುಲ್ಲುಗಾವಲನ್ನು ಪ್ರಾಣಿಗಳನ್ನು ಮೇಯಿಸುವುದಕ್ಕೆ ಹೊಂದಿರಬೇಕೆಂದು ಅರ್ಥಶಾಸ್ತ್ರ ಹೇಳುತ್ತದೆ.[66] ಹುಲ್ಲುಗಾವಲು ತೊಂದರೆಗೊಳಗಾದ 'ಎರಡು' ಪ್ರದೇಶಗಳ ಮೇಲೆ ಇರಬೇಕಿತ್ತು.[67]

## ಕಾಡು

ಕಾಡುಗಳು ಜನರಿಗೆ ಆರ್ಥಿಕವಾಗಿ ತುಂಬಾ ಪ್ರಯೋಜನಕಾರಿಯಾಗಿದ್ದವು. ಅವುಗಳನ್ನು ಕಾಡು, ವನ, ನಯಸೇನ ಎಂದು ಹೊಯ್ಸಳರ ಕಾಲದಲ್ಲಿ ಕರೆಯುತ್ತಿದ್ದರು.[68] ಕಾಡುಗಳನ್ನು ಕಾಲ ಬದಲಾದಂತೆ ನಾಶ ಮಾಡುತ್ತಾ ವ್ಯವಸಾಯಕ್ಕೆ ಒಳಪಡಿಸಲಾಗುತ್ತಿತ್ತು. ಕಾಡುಗಳು ತುಂಬಾ ಅನುಕೂಲಕರಗಳನ್ನು ಹೊಂದಿದ್ದರಿಂದ ಮತ್ತು ವ್ಯವಸಾಯವು ಅನುಕೂಲವಾಗುವ ದೃಷ್ಟಿಯಿಂದ ಕಾಡುಗಳನ್ನು ರಕ್ಷಿಸಲಾಗುತ್ತಿತ್ತು. ಕಾಡುಗಳಿಂದ ನಮಗೆ ಕಟ್ಟಿಗೆ, ಔಷಧಿಯುಕ್ತ ಸಸ್ಯಗಳು ಹಾಗೂ ದಿನ ಬಳಕೆಯ ಮುಂತಾದ ವಸ್ತುಗಳು ಸಿಗುತ್ತಿದ್ದವು. ಮರಗಳಿಂದ ಮನುಷ್ಯನಿಗೆ ಹಣ್ಣುಗಳು ಮತ್ತು ಪ್ರಾಣಿಗಳಿಗೆ ಆಹಾರ (ಮೇವು), ಕಾಡಿನಿಂದ ಸಂಗ್ರಹಿಸಿದ ಮರಗಳಿಂದ ನಾಡಿನ ಹಾಗೂ ವ್ಯವಸಾಯಕ್ಕೆ ಉಪಯೋಗವಾಗುವ ಅನೇಕ ವಸ್ತುಗಳನ್ನು ತಯಾರು ಮಾಡಬಹುದಿತ್ತು.[69] ಆ ಕಾಲದಲ್ಲಿ ದೊರೆತಿರುವ ದಾಖಲೆಗಳಿಂದ ಆ ಕಾಲದ ಒಳ್ಳೆಯ ಮರಗಳನ್ನು ಹೀಗೆ ಪಟ್ಟಿ ಮಾಡಬಹುದು.

- ಮತ್ತಿ
- ಹತ್ತಿ
- ಬಸರಿ ಅಥವಾ ಬಸುರಿ
- ಗೋಲಿ (ಆಲ)
- ನುಗ್ಗೆ
- ಹೊಂಗೆ
- ಹುಣಸೆ[70]

## ಕೃಷಿ ಸುಧಾರಣೆ ಮತ್ತು ವಿಸ್ತರಣೆ

ರಾಜ್ಯವೇ ವ್ಯವಸಾಯ ಸುಧಾರಣೆಯನ್ನು ಹಳ್ಳಿಯ ಅಧಿಕಾರಿಗಳು ಹಾಗೂ ಜಿಲ್ಲಾಧಿಕಾರಿಗಳ ನೇತೃತ್ವದಲ್ಲಿ ಜನರ ಮನವಿಯ ಮೇಲೆ ಕೈಗೊಳ್ಳುತ್ತಿತ್ತು. ರಾಜ್ಯವು ವ್ಯವಸಾಯದ ಸುಧಾರಣೆಗಾಗಿ ಭೂಮಿ ನೀಡುವಿಕೆಯನ್ನು ಮತ್ತು ತೆರಿಗೆ ಮೇಲೆ ರಿಯಾಯಿತಿಯನ್ನು ಕೊಡುತ್ತಿದ್ದರು.[71] ಏಕೆಂದರೆ ಕಾಡನ್ನು ಕತ್ತರಿಸುವುದು ಕಷ್ಟದ ಕೆಲಸವಾಗಿತ್ತು. ಆದ್ದರಿಂದ ನಾವು ಸರಕಾರದಿಂದ ಹಾಗೂ ಸ್ಥಳೀಯರಿಂದ ಭೂಮಿ ನೀಡುವಿಕೆ ಹಾಗೂ ತೆರಿಗೆ ಮೇಲೆ ರಿಯಾಯಿತಿ ಕೊಡುವುದನ್ನು ನೋಡ

ಬಹುದಾಗಿದೆ. ಇದರ ಜೊತೆಗೆ ದೇವಾಲಯ ಹಾಗೂ ಸ್ಥಳೀಯ ಜನರಿಂದಲೂ ಕೂಡ ಸುಧಾರಣೆ ಸಹಾಯವಾಗುತ್ತಿತ್ತು.[72]

**ಸಂತೆ**

ವ್ಯವಸಾಯಿಕ ಕಾರ್ಯಗಳಿಗೆ ಅಗತ್ಯವಾದ ವಸ್ತುಗಳನ್ನು ಮಾರಾಟ ಮಾಡಲು ಒಂದು ನಿಗದಿಯಾದ ಜಾಗವನ್ನು ಗೊತ್ತುಪಡಿಸಲಾಗಿತ್ತು. ಅದಕ್ಕೆ 'ಸಂತೆ' ಎನ್ನುತ್ತಿದ್ದರು. ಆಹಾರದ ವಸ್ತುಗಳನ್ನು ಸಂತೆಗಳಲ್ಲಿ ವಾರಕ್ಕೊಮ್ಮೆ ಮಾರಾಟ ಮಾಡಲಾಗುತ್ತಿತ್ತು. ಅನೇಕ ತರಹನಾದ ವ್ಯವಸಾಯದ ವಸ್ತುಗಳಾದ ಅಡಿಕೆ, ವೀಳ್ಯದೆಲೆ, ಬಾಳೆಹಣ್ಣು, ತರಕಾರಿ ಮುಂತಾದವುಗಳನ್ನು ಎತ್ತಿನ ಬಂಡಿಗಳಲ್ಲಿ ಈ ಸಂತೆಗೆ ತಂದು ಮಾರಾಟ ಮಾಡಲಾಗುತ್ತಿತ್ತು. ಈ ವಸ್ತುಗಳ ಮೇಲೆ ಸುಂಕವನ್ನು ಹೇರಲಾಗುತ್ತಿತ್ತು.[73] ಎರಡು ದಾಖಲೆಗಳ ಪ್ರಕಾರ ಮೂರನೇ ನರಸಿಂಹನ ಕಾಲದಲ್ಲಿ 'ಮಂಡಲಿ'ಯ ಬಳಿ ಮಂಗಳವಾರ ಸಂತೆ ನಡೆಯುತ್ತಿತ್ತು. ಸುಂಕ ವಿಧಿಸುತ್ತಿದ್ದರೆಂದು ತಿಳಿದು ಬರುತ್ತದೆ. ಸಂತೆಗಳಿಗೆ ರಾಜರು ಪ್ರೋತ್ಸಾಹ ನೀಡುತ್ತಿದ್ದರೆಂದು ದಾಖಲೆಗಳಿಂದ ನಮಗೆ ತಿಳಿಯುತ್ತದೆ.[74]

**ನೀರಾವರಿ**

ಭಾರತದಲ್ಲಿ ಮಳೆಯು ಕಾಲಕಾಲಕ್ಕೆ ಆಗದ ಕಾರಣ ನೀರಾವರಿಯ ಅವಶ್ಯಕತೆ ಇತ್ತು. ಒಂದು ಒಳ್ಳೆಯ ದೇಶದ ಕೊಡುಗೆಯೇನೆಂದರೆ, ಒಂದು ಉತ್ತಮ ನೀರಾವರಿ ವ್ಯವಸ್ಥೆಯನ್ನು ಹೊಂದಿರುವುದಾಗಿತ್ತು.[75]

ನೀರಾವರಿಯ ವಿಧಾನ ಬಹು ಹಳೆಯದಾಗಿದ್ದು, ಅದರ ಮೂಲ ಪ್ರಾಚೀನ ಈಜಿಪ್ಟಿನದಾಗಿತ್ತು.[76] ಭಾರತದಂತಹ ಕೃಷಿ ದೇಶದಲ್ಲಿ 70% ಬಹುಪಾಲು ಜನರು ಕೃಷಿಯ ಮೇಲೆ ಅವಲಂಬಿತವಾಗಿರುವುದರಿಂದ ನೀರಾವರಿಯ ಅವಶ್ಯಕತೆ ಅಗತ್ಯವಾಗಿತ್ತು. ನೀರಾವರಿಯು ಮೂರು ವಿಧಗಳನ್ನು ಒಳಗೊಂಡಿದೆ. ಅವುಗಳೆಂದರೆ ಕಾಲುವೆ, ಕೆರೆ ಮತ್ತು ಬಾವಿ ನೀರಾವರಿ.[77]

ಹೊಯ್ಸಳ ಅರಸರು ಕೆರೆಗಳನ್ನು ನಿರ್ಮಿಸುತ್ತಿದ್ದರೆಂದು ಶಾಸನಗಳಿಂದ, ಸಾಹಿತ್ಯಿಕ ಆಧಾರಗಳಿಂದ ಗೊತ್ತಾಗುತ್ತದೆ. ಇದರಿಂದ ಕೆರೆಗಳಿಗೆ ಪ್ರಾಮುಖ್ಯತೆ ಇತ್ತೆಂದು ತಿಳಿದು ಬರುತ್ತದೆ. ಕ್ರಿ.ಶ.

13ನೆಯ ಶತಮಾನದಲ್ಲಿ ವ್ಯವಸಾಯಕ್ಕೆಂದೇ ಬರೆದ 'ರತ್ನಂ' ಎಂಬ ಗ್ರಂಥವು ಕೆರೆ, ತೊರೆ, ಬಾವಿ, ಕೊಳ ಮುಂತಾದ ನೀರಾವರಿ ಮೂಲಗಳ ಬಗ್ಗೆ ಹೇಳುತ್ತದೆ.[78]

ಹೊಯ್ಸಳರ ಕಾಲದಲ್ಲಿ ಜನರು ವ್ಯವಸಾಯಕ್ಕೆ ಕೆರೆಯು ಬಹುಮುಖ್ಯವೆಂದು ತಿಳಿದಿದ್ದರು. ಮೊದಲನೆಯದಾಗಿ ಹೊಯ್ಸಳರ ಶಾಸನಗಳನ್ನು ಅದರಲ್ಲೂ ಮುಖ್ಯವಾಗಿ ವೀರಸೋಮೇಶ್ವರನ ಕಾಲದ ಶಾಸನಗಳನ್ನು ಅಧ್ಯಯನಿಸಿದಾಗ ಭೂಮಿಯನ್ನು ಕೊಡುಗೆಯಾಗಿ ಕೊಡುವಾಗ ಕೆರೆಯ ಬದಿಯ ಜಮೀನನ್ನು ಕೊಡುತ್ತಿದ್ದರೆಂದು ತಿಳಿದುಬರುತ್ತದೆ. ಉದಾ: ಹಲವಾರು ಗೌಡರು ಕೆರೆಯ ಕೆಳಗಿನ ಭೂಮಿಯನ್ನು ಹೊಂದಿದ್ದರು.[79] ನಮಗೆ ಸಿಕ್ಕಿರುವ ದಾಖಲೆಗಳ ಪ್ರಕಾರ ಎರಡು ಕೆರೆ ಗಳನ್ನು ದಾನವಾಗಿ ಕೊಟ್ಟಿರುವುದನ್ನು ಕಾಣಬಹುದು.[80] ಅವುಗಳೆಂದರೆ, ನುಲಂಭ ಸಮುದ್ರ ಮತ್ತು ವಲಾಚ ಸಮುದ್ರ. ಹೊಲಗಳಿಗಾಗಿ ಕೆರೆಗಳನ್ನು ಕಟ್ಟಲು ಹಣವನ್ನು ಸಂಗ್ರಹಿಸುತ್ತಿದ್ದರು.[81] ಕೆರೆಗಳನ್ನು ಅನೇಕ ಕೆಲಸ ಕಾರ್ಯಗಳಿಗೆ ಉಪಯೋಗಿಸಲಾಗುತ್ತಿತ್ತು. ಅವುಗಳೆಂದರೆ, ಸ್ನಾನ ಮಾಡಲು, ಬಟ್ಟೆ ಒಗೆಯಲು, ಕುಡಿಯಲು ಹಾಗೂ ಹೊಲಗಳಿಗೆ ನೀರಾವರಿಗೆ ಕೆರೆಗಳನ್ನು ಹೊಲಗಳ ಪಕ್ಕದಲ್ಲಿ ಅಥವಾ ಗ್ರಾಮಗಳ ಮುಂದೆ ಕಟ್ಟಲಾಗುತ್ತಿತ್ತು. ಹೊಯ್ಸಳರ ಶಾಸನಗಳು ಕೆಲವು ಕೆರೆಗಳ ಬಗ್ಗೆ ಮಾಹಿತಿ ನೀಡುತ್ತವೆ. ಹಿರಿಯಕೆರೆ[82], ಪಿರಿಯಕೆರೆ[83], ಹೆಗ್ಗರೆ[84] ಮುಂತಾದವು ಗಳಿಗೆ ದೊಡ್ಡಕೆರೆಗಳೆಮದು ಕರೆಯುತ್ತಿದ್ದರು. ಕಿರುಕೆರೆ85 ಅಥವಾ ಕಿರಿಯಕೆರೆಯನ್ನು ಚಿಕ್ಕ ಕೆರೆಗಳೆಂದು ಕರೆಯುತ್ತಿದ್ದರು.[86] ಹೊಯ್ಸಳರ ಶಾಸನದಲ್ಲಿ ನಮಗೆ ಕೆರೆಗಳಿಗೆ ಸಂಬಂಧಿಸಿದಂತೆ ಕಟ್ಟೆಯೆಂಬುದು ಕಾಣಸಿಗುತ್ತದೆ.[87] ಕಟ್ಟೆ ಎಂದರೆ ಕೆರೆಗಳಿಂದ ನೀರು ಹೊರಹೋಗದಂತೆ ತಡೆ ಗಟ್ಟುವ ವಿಧಾನ. ದಾಖಲೆಯು ಹಿರಿಯ ಕೆರೆಯ ಸೇತುವೆ ಬಗ್ಗೆ ತಿಳಿಸುತ್ತದೆ.[88]

### ಕೆರೆಗಳ ನಿರ್ಮಾಣ

ಸಾಮಾನ್ಯವಾಗಿ ಕೆರೆಗಳ ನಿರ್ಮಾಣದಲ್ಲಿ ತುಬು, ಅಣೆಕಟ್ಟು, ಬಂಡ್ ಮತ್ತು ಕಾಲುವೆಗಳು ಕೂಡ ನಿರ್ಮಾಣವಾಗುತ್ತಿದ್ದವು, ಶಾಸನಗಳು ಇವುಗಳನ್ನು ಸಮರ್ಥಿಸುತ್ತವೆ. ಉದಾ. ದಾಖಲೆಗಳ ಮೂಲಕ ನಮಗೆ ಕಾಡನ್ನು ಕಡಿಯುವುದು, ಭೂಮಿಯನ್ನು ಸಮತಟ್ಟು ಮಾಡುವುದು, ಗುಂಡಿ ಗಳನ್ನು ಮುಚ್ಚುವುದು ಮತ್ತು ಕಾಲುವೆಗಳನ್ನು ನಿರ್ಮಾಣ ಮಾಡುವುದರ ಬಗ್ಗೆ ಮಾಹಿತಿಗಳು ದೊರಕುತ್ತವೆ.[89] ಕೆರೆಯ ನಿರ್ಮಾಣ ಕಾರ್ಯವು ಒಂದು ಯೋಗ್ಯವಾದ ಕಾರ್ಯವಾಗಿದ್ದರಿಂದ ಜನರು

ಹಿರಿಗನ್ನಡ ಗ್ರಂಥಾಲಯ
ಕನ್ನಡ ವಿಶ್ವವಿದ್ಯಾಲಯ. ಹಂಪಿ

ತಮ್ಮ ಜಾತಿಬೇಧಗಳನ್ನು ಮರೆತು ಕೆರೆಯ ನಿರ್ಮಾಣದಲ್ಲಿ ಭಾಗವಹಿಸುತ್ತಿದ್ದರು. ಹೊಯ್ಸಳರಾಜ ವೀರಸೋಮೇಶ್ವರನ ಕಾಲದಲ್ಲಿ ನಿರ್ಮಾಣವಾಗುವ ಕೆರೆಗಳನ್ನು ಈ ರೀತಿ ಪಟ್ಟಿ ಮಾಡಬಹುದು.

| ಕ್ರಮ ಸಂಖ್ಯೆ | ಕಾಲ | ಕೆರೆಯ ಹೆಸರು | ಸ್ಥಳ ಶಾಸನ ಸಂಖ್ಯೆ |
|---|---|---|---|
| 1 | ಕ್ರಿ.ಶ. 1235 | ಗುಜ್ಜವಿನಾಯಕಕಟ್ಟಕೆರೆ | ಮೈಸೂರು E.C.III, Md121 |
| 2 | ಕ್ರಿ.ಶ. 1238 | ನವಿಲೆಡಾನ್ | ಹಾಸನ E.C.XV, A.K.204 |
| 3 | ಕ್ರಿ.ಶ. 1253 | ಬ್ರಹ್ಮಸಮುದ್ರ | ಹಾಸನ E.C.V, cn 237 |

ಅನೇಕ ಮಂತ್ರಿಗಳು, ಸಾರ್ವಜನಿಕರು ಕೂಡ ಇಂತಹ ಶ್ರೇಯಸ್ಕರ ಕಾರ್ಯದಲ್ಲಿ ತೊಡಗುತ್ತಿದ್ದರು. ರಾಜ್ಯವು ಕೆರೆ ಕೊಡುಗೆ ಅಥವಾ ಕಟ್ಟುಕೊಡುಗೆಗಳ ಮೂಲಕ ಖಾಸಗಿ ಜನರಿಗೆ ಹಾಗೂ ಸಂಸ್ಥೆಗಳಿಗೆ ಉತ್ತೇಜನವನ್ನು ನೀಡಿ ನೀರಾವರಿಯ ಯೋಜನೆಗಳನ್ನು ಮಾಡಲು ಉತ್ತೇಜಿಸುತ್ತಿತ್ತು. ಕೆರೆ ಕೊಡುಗೆ ಅಥವಾ ಕಟ್ಟು ಕೊಡುಗೆಯು ಕೆರೆ ನಿರ್ಮಾಣ ಮಾಡಿದವರಿಗೆ ಕೊಡುವ ಭೂಮಿಯಾಗಿದೆ. ಹಿಂದಿನಿಂದಲೂ ಕೆರೆಯ ನಿರ್ಮಾಣ ಕಾರ್ಯ ನಡೆದಿದ್ದು, ಒಟ್ಟಾರೆ ರಾಜ್ಯದಲ್ಲಿ 37,328 ಕೆರೆಗಳು, ಒಟ್ಟು ಜತಲ್ ಪ್ರದೇಶದಲ್ಲಿ 10.89 ಲಕ್ಷಗಳನ್ನು ಒಳ ಗೊಂಡಿದ್ದವು.[90] ಅದು 25,880 ಗ್ರಾಮಗಳನ್ನು, 221 ತಾಲ್ಲೂಕುಗಳನ್ನು ಒಳಗೊಂಡಿದ್ದವು. ಹಿಂದಿನಿಂದಲೂ ಕೆರೆ, ಕಾಲುವೆಗಳನ್ನು ರಾಜರು, ಕುಲೀನ ಶ್ರೀಮಂತರು ಕಟ್ಟಿಸುತ್ತಿದ್ದರೆಂದು ಅದು ಒಂದು ಒಳ್ಳೆಯ ಕಾರ್ಯ ಎಂದು ತಿಳಿದಿದ್ದರು.[91] ದಕ್ಷಿಣ ಪ್ರದೇಶದಲ್ಲಿ 16 ಸಾವಿರ ಕೆರೆಗಳಿದ್ದ ಆ ಪ್ರದೇಶವನ್ನು "ಕೆರೆಗಳ ದೇಶ ಕರ್ನಾಟಕ" ಎನ್ನಲಾಗಿತ್ತು.[92]

130165

## ಕೈಗಾರಿಕೆ

ಹೊಯ್ಸಳರ ಕಾಲದ ಶಾಸನಗಳು ಹಲವಾರು ವೃತ್ತಿಗಳ ಹಾಗೂ ಕೈಗಾರಿಕೆಗಳ ಉಲ್ಲೇಖವನ್ನು ಮಾಡುತ್ತವೆ. ಕರಕುಶಲ ವಸ್ತುಗಳು, ಖಾದಿ ಉದ್ಯಮಗಳು ಬಹಳ ಪ್ರಮುಖವಾದ ಹಾಗೂ ಎಲ್ಲೆಡೆ ಪಸರಿಸಿದ್ದ ಕೈಗಾರಿಕೆಗಳಾಗಿದ್ದವು. ನೇಯ್ಗೆಗಾರರು ಹತ್ತಿ ಹಾಗೂ ರೇಷ್ಮೆ ಉಡುಪು ಗಳನ್ನು ತಯಾರಿಸುತ್ತಿದ್ದರು.[93] ರೇಷ್ಮೇ ಉಡುಪುಗಳಲ್ಲಿ ಚೈನ ಹಾಗೂ ಮಹಾಚೈನ ಮತ್ತು ದುಕೂಲ ಎಂಬ ಉತ್ಕೃಷ್ಟ ದರ್ಜೆಯ ಮಾದರಿಯನ್ನು ತಯಾರಿಸುತ್ತಿದ್ದರು.[94] ಪೇಟ, ಮಸ್ಲಿನ್ ಹಾಗೂ ಸ್ತ್ರೀಯರ ಉಡುಪನ್ನು ಹೆಸರಿಸಲಾಗಿದೆ.[95] ಮಲಬಾರ್, ಮೈಸೂರು, ತೆಲಂಗಾಣಗಳನ್ನು

ತಯಾರಿಕೆಯ ಪ್ರಮುಖ ಸ್ಥಳಗಳು ಎಂದು ಹೇಳಲಾಗಿದೆ.[96] ಕರ್ನಾಟಕದಲ್ಲಿ ಸಿದ್ಧ ಉಡುಪು ತಯಾರಿಸುವುದು ಒಂದು ಪ್ರಮುಖವಾದ ಕಸುಬಾಗಿತ್ತು ಎಂದು ತಿಳಿಯುತ್ತದೆ. ಶಾಸನಗಳು ಸಿಂಪಿಗರ ಮೇಲೆ ವಿಧಿಸಲಾಗುತ್ತಿದ್ದ ತೆರಿಗೆಗಳ ಬಗ್ಗೆ ತಿಳಿಸುತ್ತದೆ. ಒಂದು ಶಾಸನವು ಕತ್ತರಿ ತೆರಿಗೆಯನ್ನು ಉಲ್ಲೇಖಿಸುತ್ತದೆ.[97]

## ವ್ಯಾಪಾರಿ ಸಂಘಗಳು

ವ್ಯಾಪಾರಿ ಸಂಘಗಳು ಅಥವಾ ಸಮುದಾಯಗಳಲ್ಲಿ ಮುಮ್ಮೂರಿದಂಡರು, ಗವರೆ, ಗಾತ್ರಿಗೆ, ಬೀರ, ಬೀರವಾಣಿಗ, ಶೆಟ್ಟಿ, ಶೆಟ್ಟಿಗುಟ್ಟ ಮತ್ತು ವೇಳೆಕಾರ ಹಾಗೂ ವೀರಬಾಣಂಜು ಎಂಬುವನ್ನು ನಾವು ನೋಡುತ್ತೇವೆ. 1218ರ ಶಾಸನವು ಹೇಳುವಂತೆ ಅಯ್ಯವೊಳೆಯ 500 ಸ್ವಾಮಿಗಳೂ, ಮುಮ್ಮುರಿದಂಡರು, ಉಚ್ಚಂಗಯ ನಾನಾ ದೇಶಿ ಹಾಗೂ ಹಲವರು ಜಾತ್ರೆಯೊಂದನ್ನು ನಡೆಸಲು ಆಜ್ಞೆಯನ್ನು ತೆಗೆದುಕೊಂಡು ಸೋಮನಾಥ ದೇವರಿಗೆ ಕೆಲವು ಹರಕೆಗಳನ್ನು ಒಪ್ಪಿಸಿದರು.[98] ದೂರದ ಪ್ರಾಂತ್ಯದಿಂದ ಬರುತ್ತಿದ್ದ ವ್ಯಾಪಾರಿಗಳಿಗೆ ಬಸದಿಗಳು ಹಾಗೂ ವಿಶ್ರಾಂತಿ ಗೃಹಗಳನ್ನು ವ್ಯಾಪಾರಿ ಸಂಘಗಳು ಹಾಗೂ ದೊಡ್ಡ ವರ್ತಕರು ನಿರ್ಮಿಸಿದ್ದರು. ಕೆಲವೊಮ್ಮೆ ಈ ಸಂಘಟನೆಗಳು ನ್ಯಾಯಾಲಯಗಳಾಗಿ ಉತ್ತರಾಧಿಕಾರತ್ವ ನಿಯಮಗಳಿಗೆ ಸಂಬಂಧಿಸಿದಂತಹ ಕಟ್ಟಳೆಗಳನ್ನು ಬಗೆ ಹರಿಸುತ್ತಿದ್ದವು.

## ವಾಣಿಜ್ಯ

ವ್ಯಾಪಾರ ಹಾಗೂ ವಾಣಿಜ್ಯಗಳು ಅವಶ್ಯಕವಾಗಿ ರಫ್ತು ಮತ್ತು ಆಮದು, ಸಾರಿಗೆಯ ಮೂಲ, ಆಂತರಿಕ ಹಾಗೂ ಬಾಹ್ಯ ವ್ಯಾಪಾರ, ಸಮುದ್ರ ವ್ಯಾಪಾರದ ಸಂಘಟನೆ ಹಾಗೆಯೇ ಪರಿಮಾಣಾತ್ಮಕ ಅಂಶದಂತಹ ಹಲವಾರು ಅಂಶಗಳನ್ನು ಹೊಂದಿದೆ. ಶಾಸನಗಳು ಹಾಗೂ ಇತರ ಮೂಲಗಳೂ ನಮಗೆ ಈ ಕಾಲದ ವಾಣಿಜ್ಯದ ಹಲವಾರು ವಸ್ತುಗಳ ಪಟ್ಟಿಯನ್ನು ನೀಡುತ್ತವೆ.

ವ್ಯಾಪಾರದ ಪ್ರಮುಖ ಪದಾರ್ಥಗಳೆಂದರೆ ಹತ್ತಿಬಟ್ಟೆ, ಗಂಧದಮರ, ಅಡಿಕೆ, ಸಾಂಬಾರ ಪದಾರ್ಥಗಳು, ತುಪ್ಪ ಹಾಗೂ ಅರಣ್ಯ ಉತ್ಪನ್ನಗಳು, ಕುಂಕುಮ, ವೀಳ್ಯದೆಲೆ, ಹಳದಿ, ಔಷಧಿಯ ಗಿಡ ಮೂಲಿಕೆಗಳು, ಕಿತ್ತಳೆ, ಬಾಳೆಹಣ್ಣು, ತೆಂಗು, ಗೋಧಿ, ಅಕ್ಕಿ, ಎಣ್ಣೆ, ಎಳ್ಳು, ಉಪ್ಪು, ಹತ್ತಿದಾರ, ಮರದ ಹಲಗೆಗಳು, ಬಿದಿರು, ಲೋಹದ ಪ್ರತಿಮೆಗಳು[99] ಹಾಗೂ ಬರವಣಿಗೆಯ

ಸಾಮಗ್ರಿಗಳಾದ ಸ್ಲೇಟು, ಪೆನ್ಸಿಲ್ ಹಾಗೂ ತಾಳೆಗರಿಗಳಾಗಿದ್ದವು.[100] ಇವುಗಳನ್ನು ಪ್ರಮುಖ ಆಮದು ಪದಾರ್ಥಗಳೆಂದರೆ, ಹತ್ತಿಬಟ್ಟೆ, ಶ್ರೀಗಂಧ, ಅಡಿಕೆ, ತುಪ್ಪ, ಸಾಂಬಾರ ಪದಾರ್ಥಗಳು ಹಾಗೂ ವನ್ಯ ಉತ್ಪನ್ನಗಳಾಗಿದ್ದವು. ಕರ್ನಾಟಕದ ವರ್ತಕ ಸಮುದಾಯಗಳು ಭಾರತದ ಹಲವಾರು ಭಾಗಗಳಲ್ಲಿ ವ್ಯಾಪಾರ ಮಾಡುತ್ತಿದ್ದರು. ಬಳ್ಳಿಗಾವೆಯ ವರ್ತಕರು ಸೌರಾಷ್ಟ್ರ, ಮಗದ, ಪಾಂಡ್ಯ, ಚೇರ, ಚೋಳ ಹಾಗೂ ಇತರೆ ರಾಷ್ಟ್ರಗಳೊಂದಿಗೆ ವಾಣಿಜ್ಯ ಸಂಪರ್ಕವನ್ನು ಹೊಂದಿದ್ದರು.[101] ಒಂದು ಶಾಸನವು ತಿಳಿಸುವಂತೆ ಲಾಳ, ಮಲೆಯಾಳ ಹಾಗೂ ಇನ್ನಿತರ ರಾಷ್ಟ್ರಗಳ ನಾನಾ ದೇಶಿಗಳು ಹಿರಿಸುಂಗಿಯಲ್ಲಿ ಒಂದು ಮಹಾನಾಡನ್ನು ಸ್ಥಾಪಿಸಿದರು.[102] ಇನ್ನೊಂದು ಶಾಸನವು ಲಾಳ, ಚೋಳ, ಮಲೆಯಾಳ ಹಾಗೂ ತೆಲುಂಗ ವರ್ತಕರ ಬಗ್ಗೆ ಉಲ್ಲೇಖವನ್ನು ನೀಡುತ್ತದೆ.[103]

## ಸಾರಿಗೆ ವಿಧಾನಗಳು

ಈ ಕಾಲದಲ್ಲಿ ವ್ಯಾಪಾರ ಮಾರ್ಗಗಳು ಬಹಳಷ್ಟಿದ್ದವು. ಅವುಗಳು ಪ್ರಮುಖ ಪ್ರಾಂತ್ಯಗಳು ಹಾಗೂ ವಾಣಿಜ್ಯ ಕೇಂದ್ರಗಳನ್ನು ಸಂಪರ್ಕಿಸುತ್ತಿದ್ದವು. ಇವುಗಳಲ್ಲಿ ಕೆಲವನ್ನು ಹೆಬ್ಬಟ್ಟ ಅಥವಾ ಹೆದ್ದಾಗಿ ಎಂದು ಕರೆಯಲಾಗುತ್ತಿತ್ತು. ಇನ್ನುಳಿದವು ಕೇವಲ ಹಾದಿಗಳಾಗಿದ್ದವು. ರಸ್ತೆಗಳು, ಗಾಡಿ ಮಾರ್ಗಗಳು ಹಾಗೂ ಗಲ್ಲಿಗಳು ಅಥವಾ ಓಣಿಗಳು ಸಾರ್ವಜನಿಕ ಸ್ವತ್ತಾಗಿದ್ದು ಸಾಮಾನ್ಯವಾಗಿ ಎಲ್ಲರೂ ಬಳಸಬಹುದಾಗಿತ್ತು. ಜಾತ್ರೆಗಳು ಹಾಗೂ ಸಂತೆಗಳು ಜರುಗಿದ್ದ ಸ್ಥಳಗಳಲ್ಲಿ ಹೆಚ್ಚು ರಕ್ಷಣೆಯನ್ನು ಒದಗಿಸಲು ಪುರಸಭೆಯು ಬಹಳ ಮುತುವರ್ಜಿಯನ್ನು ವಹಿಸುತ್ತಿತ್ತು. ವ್ಯಾಪಾರ ಕೇಂದ್ರಗಳ ನಡುವೆ ಪ್ರಮುಖವಾದ ಅಗಲವಾದ ರಸ್ತೆಗಳು ಇದ್ದವು ಎಂದು ತಿಳಿದುಬರುತ್ತದೆ.

## ನಾಣ್ಯವ್ಯವಸ್ಥೆ

ವೀರ ಸೊಮೇಶ್ವರನ ಕಾಲದಲ್ಲಿ ದೊರೆಯುತ್ತಿದ್ದ ನಾಣ್ಯಗಳ ಬಗ್ಗೆ ಶಾಸನಗಳಲ್ಲಿ ಅನೇಕ ವಿವರಗಳು ದೊರೆಯುತ್ತದೆ. ಹೊಯ್ಸಳರ ಕಾಲದಲ್ಲಿ ನಾಣ್ಯ ಹಾಗೂ ವಸ್ತುವಿನಿಮಯ ಪದ್ಧತಿಗಳೆರಡು ರೂಢಿಯಲ್ಲಿದ್ದವು ಎಂಬ ಸುಲಭದ ಊಹೆಯನ್ನು ಮಾಡಬಹುದು. ಸುಂಡಿ, ಲೊಕ್ಕಿಗುಂಡಿ ಹಾಗೂ ದ್ವಾರಸಮುದ್ರದ ಬಳಿಯಿದ್ದ ಟಂಕಶಾಲೆಗಳು ಬಹಳ ಪ್ರಸಿದ್ಧಿಯನ್ನು ಹೊಂದಿದ್ದವು. ಈ ಟಂಕ ಶಾಲೆಗಳ ಮೇಲ್ವಿಚಾರಣೆಗಾಗಿ ರಾಜನು ಅಧಿಕಾರಿಗಳನ್ನು ನೇಮಿಸುತ್ತಿದ್ದನು.[104] ಕೆಲವು ದೇವಾಲಯಗಳು ಟಂಕಶಾಲೆಗಳಾಗಿದ್ದವು. ಲೊಕ್ಕಿಗುಂಡಿಯ ಬಳಿ ಟಂಕಿಸಲಾಗುತ್ತಿದ್ದ ನಾಣ್ಯವನ್ನು ಲೊಕ್ಕಿ ಗದ್ಯಾಣವೆಂದೂ[105] ಹಾಗೂ ಮೊಕ್ಕೆಯ ಬಳಿ ಮುದ್ರಿಸಲಾಗುತ್ತಿದ್ದ ನಾಣ್ಯವನ್ನು ಮೊಕ್ಕೆ

ಗದ್ಯಾಣವೆಂದು[106] ಕರೆಯಲಾಗುತ್ತಿತ್ತು. ಆನೆಯ ಮೊಹರನ್ನು ಹೊಂದಿದ್ದ ನಾಣ್ಯವನ್ನು ನವಿಲು ಪೊಣವೆಂದು ಕರೆಯುತ್ತಿದ್ದರು. ಶಾಸನಗಳು ಗದ್ಯಾಣ, ಕಾಲಂಜು, ಪೊಣ್, ಪಣ, ಅಡ್ಡ, ಹಾಗ, ವೀಸ, ಬೇಳೆ ಹಾಗೂ ಕಾಸು ಎಂಬ ವಿವಿಧ ನಾಣ್ಯಗಳ ಉಲ್ಲೇಖವನ್ನು ಮಾಡಿದೆ. ಪಣವು ಗದ್ಯಾಣದ 1/10 ಅಂಸವಾಗಿತ್ತೆಂದು ತಿಳಿದುಬಂದಿದೆ. ಗದ್ಯಾಣ ಅಥವಾ ಪೊಣ್ ಬಹಳ ಪ್ರಸಿದ್ಧಿಯನ್ನು ಹೊಂದಿದ್ದ ನಾಣ್ಯವಾಗಿತ್ತು. ಈ ನಾಣ್ಯದ ತೂಕವು 965 ಹಾಗೂ 63 ಗ್ರೇನ್‌ಗಳೆಂದು ಹೇಳಲಾಗುತ್ತದೆ.[107] ಕ್ರಿ.ಶ. 1228ರ ವೀರಸೋಮೇಶ್ವರನ ಆಳ್ವಿಕೆಯ ನಂಜನಗೂಡಿನ ತಾಲ್ಲೂಕಿನ ಬದನಾಳು ಗ್ರಾಮದ ಶಾಸನವೊಂದು ಸ್ಥಾನಿಕರು 'ನಿರ್ಬಂಧಿ'ಯಾಗಿ ಕೊಡಬೇಕಾದ 6 ಗದ್ಯಾಣಗಳಲ್ಲಿ 2 ಗದ್ಯಾಣಗಳಷ್ಟು ಅಕ್ಕಿ ಮತ್ತು 5 ಪಣಗಳಷ್ಟವನ್ನು ದೇವರುಗಳಾದ ಮೂಲಸ್ಥಾನ ದೇವ ಮತ್ತು ಡೊಂಬೇಶ್ವರ ದೇವರುಗಳ ದಿನನಿತ್ಯದ ಪೂಜೆಗಾಗಿ ಕೊಡಬೇಕೆಂದು ತಿಳಿಸುತ್ತದೆ.[108] ಕೆಲವು ಶಾಸನಗಳಲ್ಲಿ ದಾಖಲಾಗಿರುವ ಇತರೆ ನಾಣ್ಯಗಳೆಂದರೆ ದ್ರಮ್ಮ ಹಾಗೂ ನಿಷ್ಕ[109] ದ್ರಮ್ಮ ಎನ್ನುವುದು ಗ್ರೀಕ್‌ನ ಪದವಾದ ದ್ರಕ್ ಎಂಬ ಪದದಿಂದ ಬಂದಿದೆ. ಇದೊಂದು ರೋಮನ್ ನಾಣ್ಯವಾಗಿದೆ.

ನರಸಿಂಹನ ಕಾಲದಲ್ಲಿ ಆತನ ಅಧೀನದಲ್ಲಿದ್ದ ಹೆಬ್ಬಾಳೆ ಎಂಬ ಊರಿನ ಆದಾಯದಿಂದ 402 ಗದ್ಯಾಣಗಳಷ್ಟು ಹಣವನ್ನು ದಾನ ಮಾಡಿರುವುದು ತಿಳಿದು ಬರುತ್ತದೆ. ವಾರಣಾಸಿಯ ನಿವಾಸಿಗಳು ನೀಡುತ್ತಿದ್ದ ಹಣವನ್ನು ಸ್ಥಳೀಯ ನಾಣ್ಯದ ಹೆಸರಿನಿಂದ ಕರೆದಿದ್ದಾರೆ. ಆದ್ದರಿಂದ 402 ಹೊಯ್ಸಳ ನಾಣ್ಯಗಳು 331 ಸಮಕಾಲೀನ ಸುಲ್ತಾನರ ನಾಣ್ಯಗಳಿಗೆ ಸಮನಾಗಿತ್ತೆಂದು ತಿಳಿಯಬಹುದು.

### ಭೂಕಂದಾಯ ಮತ್ತು ಆಡಳಿತ

ಕೃಷಿ ದೇಶವಾದ ಭಾರತದಲ್ಲಿ ಭೂ ಕಂದಾಯವೇ ಪ್ರಮುಖ ಆದಾಯದ ಮೂಲವಾಗಿದೆ. ಅದೇ ರೀತಿ ಹೊಯ್ಸಳ ರಾಜ ವೀರಸೋಮೇಶ್ವರನ ಕಾಲದಲ್ಲಿ ರಾಜ್ಯದ ಪ್ರಮುಖ ಆದಾಯ ಭೂ ಕಂದಾಯವಾಗಿತ್ತು. ರಾಜ್ಯ ಸರಕಾರ ಆಡಳಿತವನ್ನು ಪರಿಣಾಮಕಾರಿಯಾಗಿ ನಡೆಸಬೇಕಾದರೆ ರಾಜ್ಯದ ಹಣಕಾಸು ಮುಖ್ಯವಾಗಿತ್ತು. ಕೌಟಿಲ್ಯನಿಂದ ಶುಕ್ರಾಚಾರ್ಯನವರೆಗೆ ಎಲ್ಲಾ ಶಾಸ್ತ್ರಕಾರರು ದೇಶದ ಎಲ್ಲಾ ಚಟುವಟಿಕೆಗಳಿಗೆ ಹಣವೇ ಆಧಾರ ಎಂಬುದಾಗಿ ಒತ್ತಿ ಹೇಳಿದ್ದಾರೆ.[110] ವೀರಸೋಮೇಶ್ವರನ ತೆರಿಗೆ ಪದ್ಧತಿಯಿಂದ ಸಮರ್ಪಕವಾಗಿ ಆತನ ಭಂಡಾರ ತುಂಬುತ್ತಿತ್ತು. ಭೂಕಂದಾಯವನ್ನು ಪ್ರಜೆ

ಗಳು ಸಲ್ಲಿಸುವುದಕ್ಕೆ ಪ್ರತಿಯಾಗಿ ವೀರಸೋಮೇಶ್ವರನು ಅವರುಗಳಿಗೆ ರಕ್ಷಣೆಯನ್ನು ಕರ್ತವ್ಯವೆಂದು ತಿಳಿದು ನೀಡಬೇಕಿತ್ತು. "ಯಾವ ರಾಜನು ಪ್ರಜೆಗಳಿಂದ ಕಂದಾಯವನ್ನು ಪಡೆದು ಸರಿಯಾದ ರೀತಿಯಲ್ಲಿ ರಕ್ಷಣೆಯನ್ನು ಕೊಡುವುದಿಲ್ಲವೋ ಅವನು ನರಕಕ್ಕೆ ಹೋಗುತ್ತಾನೆ" ಎಂಬ ಮನುವಿನ ಮಾತಿಗೆ ರಾಜನು ನಂಬಿಕೆಯಿಟ್ಟಿದ್ದನು.[111]

## ಕಂದಾಯದ ಮೂಲಗಳು

ಕಂದಾಯದ ಮೂಲಕ್ಕೆ ಸಂಬಂಧಿಸಿದಂತೆ ಹೊಯ್ಸಳರ ಶಾಸನಗಳಲ್ಲಿ ನಮಗೆ ಹೆಚ್ಚಾಗಿ ಸಿಕ್ಕಿರುವ ಮಾಹಿತಿಗಳೆಂದರೆ ಭೂಮಿಯನ್ನು ದಾನವಾಗಿ ನೀಡಿದ್ದುದು, ಭೂಮಾರಾಟ ಮತ್ತು ಕಂದಾಯ ಬಗ್ಗೆ ತಿಳಿದು ಬರುತ್ತದೆ. ಕಂದಾಯಕ್ಕೆ ಸಂಬಂಧಿಸಿದಂತೆ ಕೆಲವು ಪದಗಳು ನಮಗೆ ಕಾಣಸಿಗುತ್ತವೆ. ಉದಾ: ಆಯ[112], ಆದಾಯ[113], ಕಂದಾಯ[114] ಶಾಸನಗಳಲ್ಲಿ ಕಂಡುಬರುವ ಕೆಲವು ಪದಗಳನ್ನು ಅರ್ಥಮಾಡಿಕೊಳ್ಳುವುದು ತುಂಬಾ ಕಷ್ಟ. ವ್ಯವಸ್ಥಿತವಾದ ಕಂದಾಯದ ಬಗ್ಗೆ ನಮಗೆ ಯಾವುದೇ ರೀತಿಯ ವಿವರಗಳು ದೊರಕುವುದಿಲ್ಲ. ಆದರೆ ಕೆಲವು. ದಾಖಲೆಗಳ ಮೂಲಕ ಕಂದಾಯವನ್ನು ಕೊಡುಗೆಯಾಗಿ ಹಾಗೂ ಇತರೆ ರೀತಿಯಾಗಿ ನೀಡುತ್ತಿದ್ದು ತಿಳಿದುಬರುತ್ತದೆ. ವೀರ ಸೋಮೇಶ್ವರನ ಕಾಲದ ಆಳ್ವಿಕೆಯಲ್ಲಿ ಕ್ರಿ.ಶ.1237ರಲ್ಲಿ ಕೊಳ್ಳೇಗಾಲ ತಾಲ್ಲೂಕಿನಲ್ಲಿ ದೊರೆತಿರುವ ತಮಿಳು ಶಾಸನವೊಂದು ವೇಲೂರು ಉದಯಾನ ಮಂಡಲಸ್ವಾಮಿ, ಗುತ್ತಿಗೆ ಜಮೀನಿನ ಹೊಣೆಗಾರಿಕೆಯ ಅಧಿಕಾರಿಯಾದ ಕುಮಾರು ಪ್ಪೆರುವಾನಿಗನ್ ತಿರುನಾದ್ ಉದಯಾನ್ ಮತ್ತು ಮತ್ತೊಬ್ಬ ವ್ಯಕ್ತಿ (ಹೆಸರು ತಿಳಿದಿಲ್ಲ) ರವರು ಕೆರೆಯ ಕೆಳಗಿನ ಜಮೀನನ್ನು ಮತ್ತು ನೀರಿನ ಆದಾಯತೆರಿಗೆಯನ್ನು, ದೇಮಾದ ದೇನಿಪ್ಪರುಮಾಯಿಗೆ ಕೊಡುಗೆ ನೀಡಿದ ಬಗ್ಗೆ ದಾಖಲಿಸುತ್ತದೆ.[115] ಅದೇ ಜಾಗದಲ್ಲಿ ಕ್ರಿ.ಶ. 1238ರಲ್ಲಿ ದೊರೆತಿರುವ ಶಾಸನವೊಂದು ಸೋಮೇಶ್ವರನ ಅಧಿಕಾರಿಗಳಾದ ಕೊಡಾಯಿ ಅಲ್ವಾನ್, ಎಡುಟ್ಟಗಾಯಿ ಅಲಗಾಯಿನ್ ಮತ್ತು ಚಂಗಟ್ಟಲಾಗವಮ್ ಉಯಾಕ್ಕಂಡ ಪಲ್ಲಾಯಿರವರು 750 ಕುಲಿಸ್ (ಇರಾಯಿಲಿನ್) ಜಮೀನನ್ನು, ವ್ಯಾಪಾರಿಯಾದ ಮಡಿಗೊಂಡನಿಂದ ಕೊಂಡ ನಂತರ, ಅಲ್ಲಿಯ ದೇವರಾದ ವಿಪ್ಪರು ಮಾಲೆಗೆ ಕೊಡುಗೆಯಾಗಿ ನೀಡಿದ ಬಗ್ಗೆ ದಾಖಲಿಸುತ್ತದೆ.[116]

ಸೋಮೇಶ್ವರನ ಕಾಲದ ತೆರಿಗೆಯ ಬಗ್ಗೆ ಹಾಗೂ ಸಮಾಜದ ವಿವಿಧ ವರ್ಗಗಳಿಗೆ ಯಾವ ರೀತಿಯ ತೆರಿಗೆಯನ್ನು ವಿಧಿಸುತ್ತಿದ್ದರೆಂದು ತಿಳಿಯಬೇಕಾದರೆ ವರ್ಗೀಕರಣ ಅವಶ್ಯಕ. ಹಲವಾರು

ಮೂಲಗಳಿಂದ ರಾಜ್ಯದ ಬೊಕ್ಕಸಕ್ಕೆ ಸಂದಾಯವಾಗುತ್ತಿದ್ದ ಆದಾಯದ ಮೂಲಗಳನ್ನು ಈ ರೀತಿ ವಿಭಾಗಿಸಬಹುದು.

1) ಭೂಕಂದಾಯ ಅಥವಾ ತೆರಿಗೆ
2) ಆಸ್ತಿ ತೆರಿಗೆ
3) ವೃತ್ತಿ ತೆರಿಗೆ
4) ವಾಣಿಜ್ಯ ತೆರಿಗೆ
5) ಕೈಗಾರಿಕೆಗಳ ಮೇಲಿನ ತೆರಿಗೆ
6) ಸಾಮಾಜಿಕ ಮತ್ತು ಜಾತಿಪರ ತೆರಿಗೆ
7) ವಂತಿಗೆ ಮತ್ತು ದಂಡದಿಂದ ಬಂದ ತೆರಿಗೆ

**1) ಭೂ ತೆರಿಗೆ**

ರಾಜ್ಯದ ಬೊಕ್ಕಸಕ್ಕೆ ಎಲ್ಲಾ ತೆರಿಗೆಗಳಿಗಿಂತ ಪ್ರಮುಖವಾದ ತೆರಿಗೆ ಭೂ ತೆರಿಗೆಯಾಗಿತ್ತು. 'ಸಿದ್ದಾಯ' ಯೆಂಬ ಪದವನ್ನು ಹೊಯ್ಸಳರ ಶಾಸನಗಳಲ್ಲಿ ಭೂ ತೆರಿಗೆಗೆ ಸಂಬಂಧಿಸಿದಂತೆ ಕಾಣ ಬಹುದಾಗಿದೆ. ಹಲವಾರು ಸಂಶೋಧಕರು 'ಸಿದ್ದಾಯ' ಎಂಬ ತೆರಿಗೆಯ ಬಗ್ಗೆ ವಿವಿಧ ರೀತಿಯ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ.[117] ಟಿ.ಸಿ.ಸರ್ಕಾರ್‌ರವರು ಸಿದ್ದಾಯವು ಕೃಷಿಯುತ ಭೂಮಿಯ ಆದಾಯವೆಂದಿದ್ದಾರೆ. ಡಾ.ಗುರುರಾಜಾಚಾರ್ ಹಿಂದೆಯೇ ನಿಗದಿಪಡಿಸಲ್ಪಟ್ಟ (ಸಿದ್ದ) ಆದಾಯ (ಆಯ) ಎಂದು ವ್ಯಾಖ್ಯಾನಿಸಿದ್ದಾರೆ. ಸಾಮಾನ್ಯವಾಗಿ ಇದು ಶಾಶ್ವತ ಸ್ವರೂಪದ್ದು (ನಿತ್ಯತರಾವಹ ಸಿದ್ದಾಯವನ) ಎಂದು ಹೇಳಿದ್ದಾರೆ.

ವೀರಸೋಮೇಶ್ವರನ ಕಾಲದಲ್ಲಿ ಮಾತ್ರವಲ್ಲದೇ ಹೊಯ್ಸಳ ಆಡಳಿತದ ಅಂತ್ಯದವರೆಗೂ ಕೂಡ 'ಭೂಕಂದಾಯ' ಅಂತಲೇ ಕರೆಯುತ್ತಿದ್ದರು. ಭೂ ತೆರಿಗೆಯನ್ನು ಇತರ ತೆರಿಗೆಗಳೊಂದಿಗೆ ಹೋಲಿಕೆ ಮಾಡದ್ದರ ಬಗ್ಗೆ ನಮಗೆ ಆಧಾರಗಳು ದೊರಕಿವೆ.[118] ಉದಾ. ಹಾಸನ ಜಿಲ್ಲೆಯಲ್ಲಿ ದೊರೆತಿರುವ ಶಾಸನದಲ್ಲಿ ಸಿದ್ದಾಯ (ಭೂ ತೆರಿಗೆ), ಸುಂಕ (ವಾಣಿಜ್ಯ ತೆರಿಗೆ), ಕಾನಾ (ಆಹಾರ ತೆರಿಗೆ) ಮುಂತಾದ ತೆರಿಗೆಗಳ ಬಗ್ಗೆ ಉಲ್ಲೇಖವಿದೆ.[119] ಅದೇ ರೀತಿ ಮತ್ತೊಂದು ಶಾಸನದಲ್ಲಿ 10 ವೃತ್ತಿ ತೆರಿಗೆಗಳ ಬಗ್ಗೆ ಉಲ್ಲೇಖವಿದೆ.[120] ಅವುಗಳೆಂದರೆ ಸಿದ್ದಾಯ (ಭೂತೆರಿಗೆ), ಸೀಸೆ (ದತ್ತಿ ತೆರಿಗೆ), ಆಲಿವ್ (ನಾಶ ತೆರಿಗೆ) ಮತ್ತು ಅನ್ಯಾಯ (ಅನ್ಯಾಯ ತೆರಿಗೆ).[121] ಇನ್ನೊಂದು ಶಾಸನದಲ್ಲಿ

ಹೆಬ್ಬಾಲೆ ಗ್ರಾಮದ ಒಟ್ಟು ಕಂದಾಯ 645 ಗದ್ಯಾಣವೆಂದು ತಿಳಿದುಬರುತ್ತವೆ. ಅವುಗಳಲ್ಲಿ ಸಿದ್ದಾಯ ತೆರಿಗೆ 232 ಗದ್ಯಾಣ, 3 ಪಣ ಇನ್ನೊಂದು ಶಾಸನದಲ್ಲಿ ರಾಜ್ಯಕ್ಕೆ ಕ್ರಮಬದ್ಧವಾಗಿ ತೆರಿಗೆಯು ಸಂದಾಯವಾಗುತ್ತಿರುವುದು ಕಂಡುಬರುತ್ತದೆ.[122]

## 2) ಆಸ್ತಿ ತೆರಿಗೆ

ಚರ ಮತ್ತು ಸ್ಥಿರ ಆಸ್ತಿಗಳ ಮೇಲೆ ಕೆಲವು ತೆರಿಗೆಗಳನ್ನು ವಿಧಿಸುವುದು ಆಸ್ತಿ ತೆರಿಗೆಯಲ್ಲಿ ಕಂಡುಬರುತ್ತದೆ. ಮನೆ, ಅಂಗಡಿ, ಗಾಡಿ ಮತ್ತು ಪ್ರಾಣಿಗಳ ಮೇಲಿನ ತೆರಿಗೆ ಹಾಗೂ ಮುಂತಾದ ತೆರಿಗೆಗಳು ಆಸ್ತಿ ತೆರಿಗೆಯಲ್ಲಿ ಕಂಡುಬರುತ್ತವೆ. ಕ್ರಿ.ಶ. 1246ರ ಯಳಂದೂರು (ಶಾ.ಸಂ.157) ವೀರ ಸೋಮೇಶ್ವರನ ಶಾಸನವು ಮನೆಗಳ ಮೇಲೆ 'ದೇವದಾನ' ಎನ್ನುವ ತೆರಿಗೆಯನ್ನು ವಿಧಿಸಿದ್ದನ್ನು ಉಲ್ಲೇಖಿಸುತ್ತದೆ. ಮನೆ ಕಂದಾಯವನ್ನು 'ಮನೆವನ ಅಥವಾ ಮನೆದರೆ'[123] ಎಂತಲ್ಲೂ ಅಂಗಡಿ ಮೇಲಿನ ತೆರಿಗೆಯನ್ನು 'ಅಂಗಡಿದರ'[124] ಗುಡಿ ಮೇಲಿನ ತೆರಿಗೆಯನ್ನು 'ಬಂಡದರಿ'[125] ಎಂತಲೂ ಕರೆಯುತ್ತಿದ್ದರು. ಕೆಲವು ಶಾಸನಗಳಲ್ಲಿ ಪ್ರಾಣಿಗಳ ಮೇಲಿನ ತೆರಿಗೆಯನ್ನು ಕಾಣಬಹುದು. ಅವುಗಳೆಂದರೆ, ಕುಟ್ಟ ಗುಲು, ಎಮ್ಮೆಗಳ ಮೇಲಿನ ತೆರಿಗೆ (ನಲ್ ಎಮ್ಮೆ), ಬಳ್ಳಿತಳಿಯ ಹೋರಿ ಮೇಲಿನ ತೆರಿಗೆ (ನಲತ್ತು)[126] ಹಸುಗಳ ಮೇಲಿನ ತೆರಿಗೆ (ನಲ್ಲವು)[127], ಆಡು (ಆಡುದರ)[128] ಹೀಗೆ ಮುಂತಾದ ಪ್ರಾಣಿ ತೆರಿಗೆಗಳು ಕಂಡುಬರುತ್ತವೆ.

## 3) ವೃತ್ತಿ ತೆರಿಗೆ

ತೆರಿಗೆ ನಾಡದಂತಹ ಯಾವುದೇ ವೃತ್ತಿಯೂ ಕಾಣಸಿಗಲಾರದು. ಆದರೆ ನಿಖರವಾಗಿ ಯಾವ ವೃತ್ತಿಗೆ ಎಷ್ಟು ತೆರಿಗೆಯನ್ನು ವಿಧಿಸುತ್ತಿದ್ದರೆಂದು ಸ್ಪಷ್ಟವಾಗಿ ತಿಳಿದುಬಂದಿಲ್ಲ. ಆದರೂ ಕೆಲವು ದಾಖಲೆಗಳು ಹಲವು ತೆರಿಗೆಗಳ ಬಗ್ಗೆ ತಿಳಿಸುತ್ತವೆ.

ಉದಾ: ಗೌಂಡಿ (ವಡ್ಡೆದರೆ), ಕುರಿಕಾಯುವ (ಸಾದಾದರೆ), ಬುಟ್ಟಿ ಎಣೆಯುವವ (ಮಡೆದರೆ), ಕುಂಬಾರ (ಕುಂಬಾರದೆರೆ),[129] ಸೈನಿಕ (ಬೀರವನ),[130] ಐದು ಕಲಾವಿದರು (ಪಂಚ ಕರುಕರನದೆರೆ),[131] ಒಕ್ಕಲಿಗರಿಗೆ (ಒಕ್ಕಲದೆರೆ),[132] ಉಪ್ಪಾರರು (ಉಪ್ಪಿಲಿಕದರ),[133] ಅಂಬಿಗರಿಗೆ (ಅಂಬಿಗದರೆ)[134]..... ಹೀಗೆ ಮುಂತಾದ ವೃತ್ತಿ ತೆರಿಗೆಗಳನ್ನು, ಆಯಾಯ ವೃತ್ತಿಗಳನ್ನಾಧರಿಸಿ ವೀರ ಸೋಮೇಶ್ವರನ ಕಾಲದಲ್ಲಿ ವಿಧಿಸುತ್ತಿದ್ದನ್ನು ಕಾಣಬಹುದಾಗಿದೆ.

### 4) ವಾಣಿಜ್ಯ ತೆರಿಗೆ

ವೀರಸೋಮೇಶ್ವರನು ತನ್ನ ತಾತ ಮುತ್ತಾತದಿರಂತೆ, ಹೊರ ಮತ್ತು ಒಳನಾಡಿನ ವ್ಯಾಪಾರಕ್ಕೆ ಪ್ರೋತ್ಸಾಹ ನೀಡಿದ್ದನು. ಈ ರೀತಿಯ ವ್ಯಾಪಾರದಿಂದ ರಾಜ್ಯದ ಬೊಕ್ಕಸಕ್ಕೆ ಸುಂಕ ಸಂದಾಯವಾಗುತ್ತಿತ್ತು. 'ಹೊಳವರು ಮತ್ತು ಹೊರವರು'[135] ಎಂಬ ಪದಗಳನ್ನು 'ಆಮದು ಮತ್ತು ರಫ್ತು' ಎಂಬುದಾಗಿ ಬಳಸಲಾಗುತ್ತಿತ್ತು. ಬೇರೆ ಬೇರೆ ಭಾಗಗಳಲ್ಲಿ ವಾಣಿಜ್ಯ ತೆರಿಗೆಗಳನ್ನು ವಸೂಲಿ ಮಾಡಲು ಸುಂಕದ ಠಾಣೆಗಳು ಇರುವುದು ಕಂಡುಬರುತ್ತದೆ.[136] ಉದಾ. ಹಾಸನ ಜಿಲ್ಲೆಯ ಒಂದು ಶಾಸನದಲ್ಲಿ ಬೆಲುಗಲಿ, ಗಂಡಿಸಿ ನುಗ್ಗೇಯ ಹಳ್ಳಿ ಮತ್ತು ಬನವರದ ಬಳಿ ಸುಂಕದ ಠಾಣೆಗಳು ಕಂಡುಬಂದಿವೆ. ಸುಂಕವನ್ನು ಬೇರೆ ಬೇರೆ ಪ್ರಕಾರಗಳಲ್ಲಿ ನೀಡಲಾಗುತ್ತಿದ್ದು ಮೊತ್ತವನ್ನು ಸಂಗ್ರಹಿಸಿ ಇಡಲಾಗುತ್ತಿತ್ತು.

### 5) ಕೈಗಾರಿಕೆಗಳ ಮೇಲಿನ ತೆರಿಗೆ

ಕೈಗಾರಿಕೆಗಳ ಮೇಲೂ ತೆರಿಗೆಗಳನ್ನು ವಿಧಿಸಲಾಗುತ್ತಿತ್ತೆಂದು ಶಾಸನಗಳಿಂದ ತಿಳಿದು ಬರುತ್ತದೆ. ಲಿಪಿಗಳಿಂದ ನಮಗೆ ಸಿಗುವ ಆಧಾರಗಳಿಂದ ವಿವಿಧ ರೀತಿಯ ತೆರಿಗೆಗಳಿಂದ ನೇಯ್ಗೆ (ಮಗ್ಗದೆರೆ),[137] ಸಕ್ಕರೆ ಮತ್ತು ಬೆಲ್ಲ ಉತ್ಪಾದನೆಗೆ (ಆಲೆದೆರೆ),[138] ಅದೇ ರೀತಿ ಹೊಯ್ಸಳರ ಬೇರೆ ರಾಜರ ಶಾಸನಗಳಲ್ಲಿ 'ವಗೆದರೆ'[139] ಯೆಂಬ ಕೈಗಾರಿಕೆಯ ಮೇಲಿನ ತೆರಿಗೆಯ ಉಲ್ಲೇಖವಿದ್ದು ಅದನ್ನು "ಇಟ್ಟಿಗೆ ಉತ್ಪಾದನಾ ತೆರಿಗೆ" ಎಂದು ಭಾವಿಸಲಾಗಿದೆ. ಅಂದು ಎಣ್ಣೆಗೆ ಕೈಗಾರಿಕೆಗಳು ಅಭಿವೃದ್ಧಿಗೊಂಡಿದ್ದು, ಅವುಗಳ ಮೇಲೆ ವಿಧಿಸುವ ತೆರಿಗೆಯನ್ನು 'ಗಾಣದೆರೆ' ಎಂದು ಕರೆಯಲಾಗುತ್ತಿತ್ತು.[140]

### 6) ಸಾಮಾಜಿಕ ಮತ್ತು ಜಾತಿ ಪರ ತೆರಿಗೆ

ಕೆಲವು ಸಾಮಾಜಿಕ ಮತ್ತು ಜಾತಿಪರ ತೆರಿಗೆಗಳನ್ನು ಕಾಣಬಹುದಾಗಿದೆ. ಶಾಸನಗಳಲ್ಲಿ ಮದುವೆಯ ತೆರಿಗೆಯ ಬಗ್ಗೆ ಉಲ್ಲೇಖವಿದೆ. ಈ ತೆರಿಗೆಯನ್ನು 'ಮಧುವನ[141] ಅಥವಾ ಮದುವೆದೆರೆ[142] ಎಂದು ಕರೆಯಲಾಗುತ್ತಿತ್ತು. ಮುಂಜಿ ಮಾಡುವ ಕಾರ್ಯಕ್ಕೆ 'ಮುಂಜಿ ತೆರಿಗೆ'[143] ಯನ್ನು ಮತ್ತು ಒಳ್ಳೆಯ ಕಾರ್ಯಕ್ಕೆ 'ಹೊಸುಗೆ'[144] ತೆರಿಗೆಯನ್ನು ವಿಧಿಸಲಾಗುತ್ತಿತ್ತೆಂದು ತಿಳಿದು ಬರುತ್ತದೆ. 'ಮಂಡೆಗದ್ಯಾಯನ'[145] ವನ್ನು ತಲೆಗಂದಾಯ ಎಂದು ತಿಳಿಯಲಾಗಿತ್ತು. ಇಂತಹ ರೀತಿಯ ತೆರಿಗೆಗಳನ್ನು ಸಾರ್ವಜನಿಕರು ಸೇರುವ ಸ್ಥಳಗಳಲ್ಲಿ ಹಾಗೂ ಮನರಂಜನಾ ಸ್ಥಳಗಳಲ್ಲಿ

ವಿಧಿಸಲಾಗುತ್ತಿತ್ತು. ಉದಾ. ನೃತ್ಯ, ಸಂಗೀತ ಕೇಳಲು ಒಬ್ಬರಿಗೆ ಇಂತಿಷ್ಟು ತೆರಿಗೆಯೆಂದು ವಿಧಿಸಲಾಗುತ್ತಿತ್ತು.

### 7) ವಂತಿಗೆ ಮತ್ತು ದಂಡದಿಂದ ಬಂದ ತೆರಿಗೆ

ರಾಜ್ಯಕ್ಕೆ ಈ ಮೂಲದಿಂದಲೂ ಕೂಡ ಆದಾಯ ಸಂದಾಯವಾಗುತ್ತಿತ್ತು. ಶಾಸನಗಳನ್ನು ಅಧ್ಯಯನಿಸಿದಾಗ 'ಕುಮಾರಗನಿಕೆ'[146] ಎಂಬ ತೆರಿಗೆಯ ಬಗ್ಗೆ ತಿಳಿದು ಬರುತ್ತದೆ. ಅದರ ಅರ್ಥ ಯುವರಾಜನಿಗೆ ಕೊಡುಗೆಯನ್ನು ಸಲ್ಲಿಸುವುದು ಎಂದು ತಿಳಿದುಬರುತ್ತದೆ.

ಆಡಳಿತಾಧಿಕಾರಿಗಳು ಮತ್ತು ಯುವರಾಜರುಗಳಿಮದ ಕರೆಬಂದಾಗ ಪ್ರಜೆಗಳು ಅನೇಕ ರೀತಿಯ ಕೊಡುಗೆಗಳಾದ 'ನಾಡ ಹೆಗ್ಗಡೆಗನಿಕೆ"[147] "ದರುಶನಗನಿಕೆ"[148] ಮತ್ತು "ಪಾಲಗನಿಗೆ"[149] ಎಂಬ ರೂಪದಲ್ಲಿ ವಂತಿಗೆಯನ್ನು ನೀಡುತ್ತಿದ್ದರು. ರಾಜರ ಕುದುರೆ ಮತ್ತು ಆನೆಗಳಿಗೆ ಪ್ರಜೆಗಳಿಂದ ಸರಬರಾಜು ಮಾಡುವ ಆಹಾರಗಳಿಗೆ "ಖಾನಾ"[150] ಎಂದು ಕರೆಯುತ್ತಿದ್ದು, ಇದು ಒಂದು ರೀತಿಯ ವಂತಿಗೆಯಾಗಿದ್ದು, ಇದನ್ನು ಜನಗಳಿಂದ ಅಪೇಕ್ಷಿಸಲಾಗುತ್ತಿತ್ತು. ಆದರೂ ಕೆಲವು ಶಾಸನಗಳಲ್ಲಿ ಈ ವಂತಿಗೆಯ ಬಗ್ಗೆ ಪ್ರಸ್ತಾಪವಿಲ್ಲಾ.[151]

ದಂಡದಿಂದ ಬಂದ ತೆರಿಗೆಯು ರಾಜ್ಯದ ಬೊಕ್ಕಸಕ್ಕೆ ಸೇರ್ಪಡೆಯಾಗುತ್ತಿತ್ತು. ಶಾಸನಗಳಿಂದ ನಮಗೆ 'ದಂಡ'[152] ಎಂಬುದರ ಬಗ್ಗೆ ಮಾಹಿತಿಯು ದೊರಕುತ್ತದೆ. ಕ್ರಿ.ಶ. 1250ರ ಸೋಮೇಶ್ವರನ ಕಾಲದ ಕೊಳ್ಳೇಗಾಲ ತಾಲ್ಲೂಕಿನ ಶಾಸನವೊಂದು ಅಯ್ಯಪಲ್ಯೆಯೆಂಬುವನು ಅಪರಾಧಿಯಾದ ಬಗ್ಗೆ ಮತ್ತು ಅವನಿಗೆ ದಂಡ ವಿಧಿಸಿದ ಬಗ್ಗೆ ತಿಳಿಸುತ್ತದೆ. ದಂಡದ ಹಣವನ್ನು ರಾಜನು ಪಡೆದುದ್ದರ ಬಗ್ಗೆ ಕಾಣಿಸುತ್ತದೆ. ಆದರೆ ಸಂಪೂರ್ಣ ಮಾಹಿತಿ ಲಭ್ಯವಿಲ್ಲ.[153] ರಾಜ್ಯವು ಒಬ್ಬರಿಗೆ ಅಥವಾ ಒಂದು ಸಂಸ್ಥೆಗೆ ವಿಧಿಸುವ ದಂಡದ ಬಗ್ಗೆ ಶಾಸನಗಳಲ್ಲಿ ತಿಳಿದು ಬರುತ್ತದೆ. ಆದರೂ 'ತಪ್ಪು ಕವಡಿ'[154] ಎಂಬ ದಂಡಗಳನ್ನು ಸ್ಥಳೀಯವಾಗಿ ಸಂಗ್ರಹಿಸುತ್ತಿದ್ದರು.

### ತೆರಿಗೆಯ ತತ್ವಗಳು

ವೀರ ಸೋಮೇಶ್ವನು ಹಲವಾರು ದೇವಾಲಯ ಹಾಗೂ ಕೆರೆ ಕಟ್ಟೆಗಳ ನಿರ್ಮಾಣಕ್ಕೆ ಹೇರಳವಾಗಿ ಹಣವ್ಯಯ ಮಾಡುತ್ತಿದ್ದನು. ಆ ಕಾಲದಲ್ಲಿ ಭೂಕಂದಾಯವೇ ರಾಜ್ಯದ ಪ್ರಮುಖ ಆದಾಯದ ಮೂಲವಾದುದ್ದರಿಂದ ಆ ಬಗ್ಗೆ ಹೆಚ್ಚು ನಿಗಾವಿರಿಸಿ ಸಂಗ್ರಹಿಸುತ್ತಿದ್ದರು.

ಭೂಕಂದಾಯವನ್ನು ವಸೂಲಿ ಮಾಡುವ ಮೊದಲು ಕಾಲಕಾಲಕ್ಕೆ ಭೂ ಹಿಡುವಳಿದಾರರು ಕಂದಾಯವನ್ನು ಎಷ್ಟು ಪಾವತಿಸಬೇಕೆಂಬುದರ ಬಗ್ಗೆ 'ಪಟಾಲೆ'[155] ಎಂಬುದರ ಮೂಲಕ ಸುತ್ತೋಲೆಯೊಂದನ್ನು ಮುಖ್ಯವಾಗಿ ಒಬ್ಬರಿಗೆ ಅಥವಾ ಒಂದು ಸಮೂಹಕ್ಕೆ ಕಳುಹಿಸುತ್ತಿದ್ದರು. ಭೂಕಂದಾಯವನ್ನು ನೀಡುವರು ಕೆಲವು ತೆರಿಗೆಯ ತತ್ವಗಳನ್ನು ಪಾಲಿಸಬೇಕಿತ್ತು.

**ಅಳತೆಯ ತತ್ವ**

ತನ್ನ ಪೂರ್ವಜರಂತೆಯೇ ವೀರ ಸೋಮೇಶ್ವರನು ಅಳತೆಯಲ್ಲಿ ತತ್ವವನ್ನು ಹೊಂದಿದ್ದನು. ಮೊಟ್ಟ ಮೊದಲ ತತ್ವವೆಂದರೆ 'ಅಳತೆ'ಯಾಗಿತ್ತು. ಭೂಮಿಯನ್ನು ಕೋಲಿನ ಸಹಾಯದಿಂದ ಅದಕ್ಕೆಂದೇ ನೇಯಿಸಲ್ಪಟ್ಟ ಅಧಿಕಾರಿಗಳು ಅಳತೆ ಮಾಡುತ್ತಿದ್ದರು.[156] ಕೆಲವು ಕೋಲಿನ ಪದ್ಧಳತೆಗಳು ದೊರತಿದ್ದು ಅವುಗಳ ಅಳತೆ ಬೇರೆಬೇರೆಯಾಗಿದೆ. ಕೋಲಿನ ಉದ್ದಳತೆ 6.25 ಯಾರ್ಡ್, 8.25 ಯಾರ್ತ್, 10 ಯಾರ್ಡ್, 36 ಯಾರ್ಡ್. ಈ ರೀತಿಯ ವ್ಯತ್ಯಾಸ ಅಳತೆಯಲ್ಲಿ ಕಂಡುಬರುವುದಿಲ್ಲ. ಒಂದು ಬಾರಿ ಅಳತೆ ಮಾಡಿದ ಭೂ ಅಳತೆ ಸರಿ ಹೊಂದಿದ್ದರೆ ಮತ್ತೆ ಅದೇ ಭೂಮಿಯನ್ನು ಅಳತೆ ಮಾಡಲಾಗುತ್ತಿತ್ತು. ಉದಾ. ಮಲ್ಲಿಕಾರ್ಜುನಪುರದ ಬ್ರಾಹ್ಮಣನೊಬ್ಬನ ಭೂ ಅಳತೆಯ ವಿಭಾಗದಲ್ಲಿ ವ್ಯತ್ಯಾಸ ಉಂಟಾದಾಗ ಅದನ್ನು ಪುನಃ ಅಳತೆ ಮಾಡಿ ಭೂಮಿಯನ್ನು ಸರಿಯಾಗಿ ವಿಭಾಗ ಮಾಡಲಾಯಿತು.[157] ಈ ರೀತಿಯಾಗಿ ಭೂಹಿಡುವಳಿದಾರರಿಗೆ (ರೈತರಿಗೆ) ಭೂಮಿಯನ್ನು ನೀಡುವ ಮೊದಲು ಗಡಿಯನ್ನು ನಿರ್ಧರಿಸಲಾಗುತ್ತಿತ್ತು. ಈ ರೀತಿಯ ಕಾರ್ಯಗಳಿಗೆ ಶುಲ್ಕವನ್ನು ವಿಧಿಸಲಾದುತ್ತಿದೆಂದು ದಾಖಲೆಗಳ ಮೂಲಕ ನಮಗೆ ತಿಳಿದು ಬರುತ್ತದೆ.[158]

ವೀರ ಸೋಮೇಶ್ವರನ ಕಾಲದ ಅಳತೆಯ ಎರಡನೆಯ ತತ್ವವೆಂದರೆ ತೆರಿಗೆ. ಇಲ್ಲಿ ಭೂಮಿಯಿಂದ ಬರುವ ಉತ್ಪಾದನೆಯನ್ನು ಮಾನ್ಯ ಮಾಡುತ್ತಿದ್ದರು. ಈ ಉದ್ದೇಶಕ್ಕಾಗಿ ಫಸಲು ಭೂಮಿಯನ್ನು ಎರಡು ವಿಧಗಳಾಗಿ ವಿಭಾಗಿಸಲಾಗುತ್ತಿತ್ತು. ಮೊದಲನೆಯ ವಿಭಾಗವಾಗಿ ಗದ್ದೆ (ತೇವಯುಕ್ತ), ಬೆದ್ದಲು (ಒಣಭೂಮಿ) ಮತ್ತು ತೋಟ[159] ಕಂಡುಬರುತ್ತದೆ. ಎರಡನೆಯ ವಿಭಾಗವಾಗಿ ಎಡೆಬಿಡದೇ ಬೆಳೆಯುವ ಭೂಮಿಯು ಕಂಡುಬರುತ್ತವೆ. ಪ್ರಥಮ (ಮೊದಲನೆ ವರ್ಗ) ದ್ವಿತೀಯ (ಎರಡನೆ ವರ್ಗ)[160] ತೃತೀಯ (ಮೂರನೆ ವರ್ಗ) ಮತ್ತು ಕೊರಾಟೆ (ನಾಲ್ಕನೆ ವರ್ಗ). ಯಾವಾಗಲೂ ಈ ರೀತಿಯ ಅಳತೆಯ ಸೌಲಭ್ಯ ಇರಲಿಲ್ಲ. ಏಕೆಂದರೆ ಕೆಲವೊಮ್ಮೆ ಕುರುಡು ವಿಧಾನವನ್ನು ಅನುಸರಿಸಿ ಭೂ ತೆರಿಗೆಯನ್ನು ವಿಧಿಸಲಾಗುತ್ತಿತ್ತು.[161] ಭೂಮಿಯಲ್ಲಿ ಒಂದು

ಯುನಿಟ್ ಜಾಗಕ್ಕೆ ಎಷ್ಟು ಬೀಜ ಬಿತ್ತಬಹುದೆಂಬುದರ ಆಧಾರದ ಮೇಲೆ ತೆರಿಗೆಯನ್ನು ವಿಧಿಸಲಾಗುತ್ತಿತ್ತು. ಶಾಸನದಲ್ಲಿ ಇದಕ್ಕೆ ಸಂಬಂಧಿಸಿದಂತೆ ನಮಗೆ ದೊರೆತಿರುವ ಕೆಲವು ಪದಗಳೆಂದರೆ ಕೊಲಗ[162], ಸಲಗೆ[163] ಮತ್ತು ಕನ್ನದುರ್ಗ[164] ಹೀಗೆ ಮುಂತಾದ ಪದಗಳು ಕಂಡುಬರುತ್ತವೆ.[165] ದಾಖಲೆಗಳಿಂದ ನಮಗೆ ತಿಳಿಯುವುದೇನೆಂದರೆ ಒಂದು ಸಲಗೆ ಬೀಜವನ್ನು 40 ಕುಂಭ ಪ್ರದೇಶದಲ್ಲಿ ಬಿತ್ತಬೇಕಾಗಿತ್ತು.

### ತೆರಿಗೆಯ ದರ

ಬೆಳೆ ಭೂಮಿಯ ತೆರಿಗೆ ದರವು ಕಾಲಕ್ಕೆ ಹಾಗೂ ಸ್ಥಳಕ್ಕೆ ತಕ್ಕಂತೆ ಬದಲಾಗುತ್ತದೆ. ಎಲ್ಲಿಯವರೆಗೆ ತತ್ವಗಳು ಸಂಬಂಧಪಟ್ಟಿರುತ್ತವೋ, ಅಲ್ಲಿಯವರೆಗೂ ಮನುವಿನ[166] ಪ್ರಕಾರ ಭೂ ತೆರಿಗೆಯು 1/10 ಅಥವಾ 1/8 ಅಥವಾ 1/6 ಆಗಿರುತ್ತದೆ. ಶುಕ್ರರಾಜನ[167] ಪ್ರಕಾರ ಗುಡ್ಡಗಾಡಿಗೆ 1/6 ಭಾಗವನ್ನು, ಒಳ್ಳೆಯ ಮಳೆಯಿಂದ ಉತ್ಪನ್ನವಾದ ಬೆಳೆ ಬೆಳೆಯುವ ಭೂಮಿಯಿಂದ 1/2 ಭಾಗವನ್ನು ಮತ್ತು ನದಿಗಳು ಹಾಗೂ ಕೆರೆಗಳಿಂದ ನೀರು ಸರಬರಾಜು ಆಗುವ ಭೂಮಿಯಿಂದ 1/3 ಭಾಗವನ್ನು ತೆರಿಗೆಯಾಗಿ ಪಡೆಯಬೇಕು ಎಂದಿದ್ದಾನೆ. ಇದಕ್ಕೆ ಸಂಬಂಧಿಸಿದಂತೆ ಅಂದಿನ ವಿಚಾರವಂತ ವಿಜ್ಞಾನೇಶ್ವರ[168] ಪ್ರಕಾರ 1/6 ಭಾಗವನ್ನು ರಾಜನು ಪ್ರಜೆಗಳಿಗೆ ನೀಡುವ ರಕ್ಷಣೆಗಾಗಿ ತೆಗೆದುಕೊಳ್ಳಬೇಕೆಂದು ಹೇಳಿದ್ದಾನೆ.

ವೀರಸೋಮೇಶ್ವರನ ಕಾಲದ ಶಾಸನಗಳನ್ನು ಅಧ್ಯಯನಿಸಿದಾಗ ನಮಗೆ ತೆರಿಗೆಯ ದರದ ಬಗ್ಗೆ "ಸಿದ್ದಾಯ" ಎಂಬ ಪದದಿಂದ ಕಾಣಸಿಗುತ್ತದೆ ಮತ್ತು ಇದು ಕೃಷಿ ಮಾಡಿದ ಭೂಮಿಯ ಮೇಲೆ ಬದಲಾಗುತ್ತಿತ್ತು. ಸಿದ್ದಾಯವನ್ನು ಬೇರೆ ಬೇರೆ ಪ್ರಕಾರದಲ್ಲಿ ಹಾಗೂ ಮೊತ್ತದ ಮೂಲಕ ಸಂಗ್ರಹಿಸಲಾಗುತ್ತಿತ್ತು. ದೇವಾಲಯಗಳಿಗೆ ದತ್ತಿಯಾಗಿ ನೀಡಿದ ಭೂಮಿಯನ್ನು 'ದೇವಾದಯ' ಕರಾರು ಎಂದು ಕರೆಯುತ್ತಿದ್ದರು.

ದೇವಾಲಯದ ಭೂಮಿ ಮತ್ತು ಬ್ರಾಹ್ಮಣರಿಗೆ ನೀಡಲ್ಪಟ್ಟ ಭೂಮಿಗೆ ತೆರಿಗೆಯಿಂದ ವಿನಾಯ್ತಿ ಇದ್ದರೂ 'ಸಿದ್ದಾಯ' ತೆರಿಗೆಯನ್ನು ನೀಡಲೇಬೇಕಿತ್ತು. ಬ್ರಹ್ಮಾದಯ ಗ್ರಾಮಗಳು ಹೆಚ್ಚಾಗಿದ್ದರಿಂದ ಕಂದಾಯವನ್ನು ಗ್ರಾಮಕ್ಕೆ ಒಟ್ಟಾರೆಯಾಗಿ ವಿಧಿಸಲಾಗುತ್ತಿತ್ತು. ಇದರ ಅರ್ಥ ಬ್ರಹ್ಮಾದಯ ಅಲ್ಲದ ಗ್ರಾಮಗಳು ಇಲ್ಲವೇ ಇಲ್ಲ ಎಂದು ಅರ್ಥವಲ್ಲ. ಅಂತಹ ಗ್ರಾಮಗಳು

ಇದ್ದರೂ ಸಹ ಹೆಚ್ಚಾಗಿ ಬ್ರಹ್ಮಾದಯ ಗ್ರಾಮಗಳು ಕಂಡುಬರುತ್ತವೆ. ಈ ಮಾಹಿತಿಯನ್ನು ನಾವು ದಾಖಲೆಗಳ ಮೂಲಕ ತಿಳಿಯಬಹುದಾಗಿದೆ.

## ಕಂದಾಯ ವ್ಯವಸ್ಥೆ

ಮಧ್ಯಯುಗೀನ ಕಾಲದಲ್ಲಿ ನಾಗರೀಕ ಆಡಳಿತವು ಸ್ಥಳೀಯರ ಕೈಯಲ್ಲೇ ಇತ್ತು. ಕೇಂದ್ರ ಸರಕಾರವು ಕೆಲವೊಮ್ಮೆ ಸ್ಥಳೀಯರ ಆಡಳಿತದಲ್ಲಿ ಅವ್ಯವಸ್ಥೆ ಉಂಟಾದಾಗ ಭಾಗವಹಿಸಿ ಸರಿ ಪಡಿಸುತ್ತಿತ್ತು. ಕೆಲವು ವಿಭಾಗಗಳು ಮಾತ್ರ ಸ್ಥಳೀಯರ ಸಂಪರ್ಕ ಹೊಂದಿದ್ದವು, ಅವುಗಳೆಂದರೆ ಖಜಾನೆ ಮತ್ತು ಲೆಕ್ಕಪತ್ರ ವಿಭಾಗ. ವೀರಸೋಮೇಶ್ವರನು ತನ್ನ ಪೂರ್ವಜರಂತೆ ಆಡಳಿತದಲ್ಲಿ ಅಧಿಕಾರ ವಿಕೇಂದ್ರೀಕರಣಕ್ಕೆ ಆದ್ಯತೆ ನೀಡಿರುವುದು ಕಂಡುಬರುತ್ತದೆ.[169]

ಹೊಯ್ಸಳರ ಶಾಸನಗಳಿಂದ ನಮಗೆ ದೊರಕಿರುವ ಮಾಹಿತಿಗಳ ಪ್ರಕಾರ ಖಜಾನೆ ಅಧಿಕಾರಿಯನ್ನು 'ಹಿರಿಯ ಭಂಡಾರಿ'[170] ಅಥವಾ ;ಹಿರಿಯ ಮಾಣಿಜ್ಯ ಭಂಡಾರಿ'[171] ಎಂದು ಕರೆಯಲಾಗುತ್ತಿತ್ತು. ಸರಕುಗಳನ್ನು ಭಂಡಾರಕ್ಕೆ ತೆಗೆದುಕೊಂಡು ಲೆಕ್ಕಪತ್ರಗಳನ್ನು ಇಡುವ ರೀತಿಯ ಜ್ಞಾನವು ಇವರಿಗೆ ತಿಳಿದಿರಬೇಕಿತ್ತು. ಖಜಾನೆ ಮುಖ್ಯಸ್ಥನಿಗೆ "ಶ್ರೀಕರಣ ಸರ್ವಾಧಿಕಾರಿ"[172] ಎಂದು ಕರೆಯುತ್ತಿದ್ದರು. ಇವರ ಅಸ್ತಿತ್ವವು ತುಂಬಾ ಮುಖ್ಯವಾಗಿತ್ತು. ಆದುದರಿಂದ ಇವರಿಗಾಗಿ ಪ್ರಜೆಗಳ ಮೇಲೆ "ಶ್ರೀಕರಣ"[173] ವೆಂಬ ತೆರಿಗೆಯನ್ನು ವಿಧಿಸುತ್ತಿದ್ದರು.

ಹೊಯ್ಸಳರ ಶಾಸನಗಳನ್ನು ಅಧ್ಯಾಯ ಮಾಡಿದಾಗ ತಾತ್ಕಾಲಿಕ (ಹಂಗಾಮಿ) ಗೌರ್ನರ್ ಗಳಿದ್ದು ಅವರಿಗೆ 'ದಂಡನಾಯಕ ಮತ್ತು ನಾಯಕ' ಎಂದು ಕರೆಯುತ್ತಿದ್ದರು. ಈ ಎಲ್ಲಾ ದಾಖಲೆಯ ಮೂಲಕ ನಮಗೆ ತಿಳಿಯುವುದೇನೆಂದರೆ ವೀರ ಸೋಮೇಶ್ವರನು ಲೆಕ್ಕಪತ್ರ ವಿಭಾಗಕ್ಕೆ ಎಷ್ಟು ಪ್ರಾಮುಖ್ಯತೆಯನ್ನು ನೀಡಿದ್ದರೆಂದು ತಿಳಿದು ಬರುತ್ತದೆ.

ನಾಡಗೌಡನು ಕಂದಾಯವನ್ನು ಸಂಗ್ರಹಿಸಿ, ಲೆಕ್ಕವನ್ನು ಶ್ರೀಕರ, ನಾಡಸೇನಾಬೋವ, ಗಣಕರು ಮತ್ತು ಲೆಕ್ಕ ಲೇಖಕರುಗಳ ಮೂಲಕ ಕಾಪಾಡುತ್ತಿದ್ದರು. ತೆರಿಗೆಯಿಂದ ಬಂದಂತಹ ಆದಾಯವನ್ನು ಯಾವುದಾದರೂ ಕಾರ್ಯಕ್ಕೆ ಉಪಯೋಗಿಸಬೇಕಿದ್ದರೆ ಉನ್ನತ ಅಧಿಕಾರಿಗಳಿಂದ ಬಿಡುಗಡೆಗೆ ಅನುಮತಿ ಪಡೆದು, ಉಪಯೋಗಿಸಿ ನಾಡ ಅಧಿಕಾರಿಗಳು ಬರೆದಿಡಬೇಕಿತ್ತು.

ದಾಖಲೆಗಳನ್ನು ವೀಕ್ಷಿಸಿದಾಗ ಮೇಜನಾಡಗೌಡನು ತನಗೆ ಬೇಕಾಗಿರುವ ಹಣವನ್ನು ದಂಡ ನಾಯಕ, ಬಿತ್ತಿಮಯರ ಸಮ್ಮುಖದಲ್ಲಿ ಬಿಡುಗಡೆ ಮಾಡಿಸಿರುವುದು ತಿಳಿದು ಬರುತ್ತದೆ.

ಒಂದು ನಾಡು ಅಥವಾ ಜಿಲ್ಲೆಯ ಹಲವಾರು ಗ್ರಾಮಗಳನ್ನು ಹೊಂದಿತ್ತು. ಗ್ರಾಮಗಳು ಸಮಾಜ ಜೀವನದ ಕೇಂದ್ರಗಳಾಗಿದವುದರ ಜೊತೆಗೆ ದೇಶದ ಆರ್ಥಿಕತೆಯ ಭಾಗವಾಗಿದ್ದವು. ಗ್ರಾಮದ ಆಡಳಿತವು ಗ್ರಾಮದ ಮುಖ್ಯಸ್ಥರ ಮೇಲ್ವಿಚಾರಣೆ ಮತ್ತು ನಿರ್ದೇಶನದಂತೆ ನಡೆಯುತ್ತಿತ್ತು. ಆತನನ್ನು "ಗೌಡ" ಎಂದು ಕರೆಯುತ್ತಿದ್ದರು ಮತ್ತು ಇದು ವಂಶ ಪಾರಂಪರ್ಯವಾಗಿತ್ತು. ಗೌಡರಿಗೆ, 'ಗೌಡನೊಂದಿಗೆ'ಯೆಂಬ ಬಾಡಿಗೆ ರಹಿತ ಭೂಮಿಯನ್ನು ಕರಾರಿಗಾಗಿ ನೀಡುತ್ತಿದ್ದರು. ಆತನ ಮುಖ್ಯ ಕಾರ್ಯ ಕಂದಾಯ ವಸೂಲಿಯಾಗಿತ್ತು.

ಕಿತ್ತದಾಯಿ ದಂಡನಾಯಕ ಎಂಬುವನು 'ವಿಠ್ಠರುದ್ರ ಪೆರುಮಾಲ್' ಎಂಬ ದೇವಾಲಯಕ್ಕಾಗಿ 30 ಗ್ರಾಮಗಳ ಕಂದಾಯವನ್ನು ಉಂಬಳಿಯಾಗಿ ನೀಡಿದನೆಂದು ಶಾಸನಗಳು ತಿಳಿಸುತ್ತವೆ. ಗೌಡನ ಸಹಾಯಕನಾದ 'ಸೇನಾಭೋವ' ಎಂಬುವನು ಗ್ರಾಮದ ಕಂದಾಯ ಅಧಿಕಾರಿಯಾಗಿದ್ದನು. ಅವನು ಸರಿಯಾದ ದಾಖಲೆಗಳನ್ನು ಇಟ್ಟು ಗ್ರಾಮದಿಂದ ಗ್ರಾಮಕ್ಕೆ ವರ್ಗವಾದ ಬಗ್ಗೆ ದಾಖಲೆಗಳನ್ನು ಹಾಗೂ ಸರಕಾರಕ್ಕೆ ಸಂಬಂಧಿಸಿದ ದಾಖಲೆಗಳನ್ನು ನೀಡಬೇಕಾಗಿತ್ತು.

ಬ್ರಾಹ್ಮಣರು ಮತ್ತು ದೇವಾಲಯಗಳಿಗೆ ಉಂಬಳಿಯಾಗಿ ನೀಡಿದಂತಹ ಭೂಮಿಯನ್ನು ನೋಡಿಕೊಳ್ಳಲು ವಿಶೇಷ ಅಧಿಕಾರಿಗಳನ್ನು ನೇಮಿಸಲಾಗುತ್ತಿತ್ತು. ನಿವೃತ್ತಿ ಹೊಂದಿದ ಗೌರ್ನರ್‌ಗಳು ರಾಜ್ಯ ಅಧಿಕಾರಿಗಳಾಗುತ್ತಿದ್ದರು ಮತ್ತು ಆಗುವ ಗೌರ್ನರ್‌ಗಳು ವಂಶಪಾರಂಪರ್ಯವಾಗಿ ಬರುತ್ತಿದ್ದರು. ಗೌರ್ನರ್ ಆಗಬೇಕಾದರೆ ಸೈನ್ಯದಲ್ಲಿ ಸೇವೆಯನ್ನು ಸಲ್ಲಿಸುವುದರ ಜೊತೆಗೆ ಕಂದಾಯ ವಸೂಲಿ ಕಾರ್ಯವನ್ನು ನಿರ್ವಹಿಸಬೇಕಾಗಿತ್ತು. ಅವರಿಗೆ ಸಂಬಳಕ್ಕೆ ಬದಲಾಗಿ ಭೂಮಿಯನ್ನು ನೀಡ ಬೇಕಾಗಿತ್ತು.

ಉದಾ ಕುಪ್ಪೆಯ ನಾಡಿನಲ್ಲಿದ್ದ ಕೊಟ್ಟೆಯ ಕುಪ್ಪೆಗೆ ಸಂಬಂಧಿಸಿದಂತೆ 10 ಹ್ಯಾಮಲೆಟ್ ಗಳನ್ನು ಮೆದೆಯ ನಾಯಕನಿಗೆ ಕೊಡಲಾಗಿತ್ತು. ಅವನು ಕುದುರೆಗಳನ್ನು ನೋಡಿಕೊಳ್ಳುವುದರ ಜೊತೆಗೆ ನಿಗದಿತ ಮೊತ್ತದ ಕಂದಾಯವನ್ನು ನೀಡಬೇಕಿತ್ತು. ಅವನಿಗೆ ನೀಡಿದ ಭೂಮಿಯನ್ನು

ಅವನ ವಂಶಸ್ಥರು ಆತನ ಮರಣದ ನಂತರ ಅನುಭವಿಸುವುದರ ಜೊತೆಗೆ ಗೌರ್ನರ್ ಪದವಿ ಹೊಂದುತ್ತಿದ್ದರು.

ಇನ್ನೊಂದು ಕಡೆ ನಾಗಮಂಗಲ ತಾಲ್ಲೂಕಿನಲ್ಲಿ ದೊರೆತಿರುವ ದಾಖಲೆಗಳ ಪ್ರಕಾರ ರಾಜ್ಯಾಧಿಕಾರಿ ಅಂದರೆ ದಂಡನಾಯಕ 1/7 ಭಾಗವನ್ನು ಭೂಕಂದಾಯದಲ್ಲಿ ಆತನ ಸಂಸಾರ ನಿರ್ವಹಣೆಗೆ ಉಪಯೋಗಿಸಿಕೊಳ್ಳಬಹುದಿತ್ತು.[174]

ಹಂಗಾಮಿ ಗೌರ್ನರ್‌ಗಳ ಕೈಕೆಳಗೆ 'ಒಳ್ಳೆಯ ಗೌಡ ಅಧಿಕಾರಿಗಳು' ಅಥವಾ ಜಿಲ್ಲಾಧಿ ಕಾರಿಗಳು ಕಾರ್ಯ ನಿರ್ವಹಿಸುತ್ತಿದ್ದರು. ಮಧ್ಯಯುಗೀನ ಭಾರತದ 10ನೇ ಶತಮಾನದಲ್ಲಿ "ನಾಡು" ಎಂಬುವುವು ಇದ್ದು ಅವೇ ಆಡಳಿತ ನಿರ್ವಹಿಸುತ್ತಿದ್ದು ಆಡಳಿತದ ಒಂದು ಭಾಗವಾಗಿದ್ದವು.[175] ಹೊಯ್ಸಳರ ಕಾಲದಲ್ಲಿ 'ನಾಡು' ಆಡಳಿತವನ್ನು ನಿರ್ವಹಿಸುತ್ತಿದ್ದವನಿಗೆ 'ನಾಡಗೌಡ,[176] ನಾಡ ಹೆಗ್ಗಡೆ,[177] ನಾಡಪ್ರಭು[178] ಮುಂತಾದ ಹೆಸರುಗಳಿಂದ ಕರೆಯಲಾಗುತ್ತಿತ್ತು. ಇವರ ಸಹಾಯಕ್ಕೆ ಭಂಡಾರಿ,[179] ಸುಂಕ ಹೆಗ್ಗಡೆ[180] ಮತ್ತು ಪನ್ನಾ ಹೆಗಡೆ,[181] ಶ್ರೀಕರಣ ಹೆಗ್ಗಡೆ[182] ಇದ್ದರು. ಇವರ ಜೊತೆಗೆ ಗಣಕರು[183], ಲೇಖಕರು[184] ಅಥವಾ ಗುಮಾಸ್ತರುಗಳು ಇದ್ದರು. ಇದರಿಂದ ನಮಗೆ ತಿಳಿಯುವುದೇನೆಂದರೆ ಒಳ್ಳೆಯ ಕಂದಾಯ ಅಧಿಕಾರಿಗಳು ಬೇರೆ ಬೇರೆ ಕಂದಾಯ ಮೂಲಗಳಲ್ಲಿ ಕೆಲಸ ಮಾಡುತ್ತಿದ್ದರೆಂದು ತಿಳಿದುಬರುತ್ತದೆ. ಇದಲ್ಲದೇ ನಾಡುವಿನ ಲೆಕ್ಕಾಧಿಕಾರಿಗಳನ್ನು "ನಾಡಸೇನಾಬೋವ"[185] ಎಂದು ಕರೆಯುತ್ತಿದ್ದರು.

## ಭೂಒಡೆತನ

ಹೊಯ್ಸಳರ ಶಾಸನಗಳನ್ನು ಅಧ್ಯಯನಿಸಿದಾಗ ಭೂ ಒಡೆಯರಿಗೆ ಕಾನೂನುಬದ್ಧ ಹಕ್ಕಿತ್ತು. ಆಸ್ತಿ ಬೋಗ ತೇಜಾ ಸ್ವಾಮ್ಯಹಕ್ಕಿಗೆ ಸಂಬಂಧಿಸಿದಂತೆ[186] ಹೊಯ್ಸಳರು ಸೋಮೇಶ್ವರನ ಕಾಲಕ್ಕೆ ನೀಡಿರುವಂತಹ '8' ವಿಧದ ಆಸ್ತಿಪಾಸ್ತಿಗಳ ಮೇಲಿನ ಹಕ್ಕು ಇದಾಗಿತ್ತು.

ಅವುಗಳೆಂದರೆ:

1) ನಿಧಿ
2) ನಿಕ್ಷೇಪ (ಠೇವಣಿಸಲ್ಪಟ್ಟ ಆಸ್ತಿ)

3) ಜಲ (ನೀರು)

4) ಪಸನ (ಖನಿಜ)

5) ಅಕ್ಷಿಣಿ (ನಿಜವಾದ ಹಕ್ಕು)

6) ಅಗಾಮಿ (ಅಪೇಕ್ಷಿತ ಹಕ್ಕು)

7) ಸಿದ್ದು (ವ್ಯವಸಾಯ ಮಾಡುವ ಭೂಮಿ)

8) ಸದ್ಯ (ಭೂಮಿಯ ಇಳುವರಿ)

ಇದರ ಜೊತೆಗೆ ಶಾಸನಗಳಿಂದ ದೊರೆತಿರುವ ಮಾಹಿತಿ ಪ್ರಕಾರ ಭೂಮಿಗೆ ಸಂಬಂಧಿಸಿದ feature ಇವೆ. ಅವುಗಳೆಂದರೆ, ಅದಿ (ಒತ್ತೆಯಿಡು), ಕ್ರಯ (ಮಾರಾಟ), ದಾನ (ಕೊಡುಗೆ)[187], ಬಟ್ಟೆ (ಅಡವಿಡು), ಪರಿವರ್ತನ (ಬದಲಾಯಿಸು) ಮತ್ತು ಓಹಾಲ (ಒತ್ತೆ ಇಡು)[188] ಅದಿ ಜೊತೆಯಲ್ಲಿ ಒಟ್ಟೆ ಮತ್ತು ಓಹಾಲ ಇರುವುದು.

**ರಾಜ್ಯದ ಒಡೆತನ**

ಭೂಮಿಗಳನ್ನು ಸರ್ವೆ ಮಾಡುವಾಗ ಭೂಮಿಯನ್ನು ಕೊಟ್ಟಂತಹ ಮತ್ತು ಹಿಂತಿರುಗಿಸಿದ ಭೂಮಿಗಳ ಮೇಲೆ ರಾಜ್ಯಕ್ಕೆ ಹಕ್ಕಿತ್ತು. ರಾಜ್ಯ ನೌಕರರಿಗೆ ಸಂಬಳಕ್ಕೆ ಬದಲಾಗಿ ಭೂಮಿಯನ್ನು ಕೊಡುತ್ತಿದ್ದರು.[189] ಇದರಿಂದ ತಿಳಿಯುವುದೇನೆಂದರೆ ಸೋಮೇಶ್ವರನ ಕಾಲದಲ್ಲಿ ರಾಜ್ಯ ಒಡೆತನವು ಇರಲಿಲ್ಲವೆಂದು ತಿಳಿದುಬರುತ್ತದೆ. ಸಾರ್ವಜನಿಕರ ಆಸ್ತಿಯನ್ನು ರಾಜ್ಯವು ಅಂಗೀಕರಿಸಿತ್ತು. ರೈತರ ಮಾಲೀಕತ್ವವು ಅಸ್ತಿತ್ವದಲ್ಲಿತ್ತು.[190]

**ಭೂ ತೆರಿಗೆಯ ವೃದ್ಧಿಯ ಬಗ್ಗೆ**

ರಾಜ್ಯಕ್ಕೆ ಭೂ ತೆರಿಗೆಯನ್ನು ಹೆಚ್ಚಿಸುವಂತಹ ಅಧಿಕಾರವಿತ್ತು. ಆದರೆ ವೀರಸೋಮೇಶ್ವರನು ರಾಜ್ಯದ ಭೂತೆರಿಗೆಯನ್ನು ಅಪರೂಪಕ್ಕೆ ಮಾತ್ರ ಹೆಚ್ಚಿಸುತ್ತಿದ್ದನು. ಇದಕ್ಕೆ ಬದಲಾಗಿ ಅಂದರೆ ಭೂ ತೆರಿಗೆಯನ್ನು ಹೆಚ್ಚಿಸುವ ಬದಲಾಗಿ ಅವರು ರೈತರಿಗೆ ಕೃಷಿ ಕ್ಷೇತ್ರದಲ್ಲಿ ಬದಲಾವಣೆಯನ್ನು ಮಾಡಲು ಉತ್ತೇಜಿಸಿ ಅವರಿಗೆ ವಾಣಿಜ್ಯ ಬೆಳೆಗಳನ್ನು ಬೆಳೆಯುವಂತೆ ಹೇಳುತ್ತಿದ್ದರು ಮತ್ತು ಅದಕ್ಕೆಂದೇ ಉತ್ತಮ ನೀರಾವರಿ ವ್ಯವಸ್ಥೆಯನ್ನು ಕಲ್ಪಿಸಿಕೊಡುತ್ತಿದ್ದರು. ರೈತರಿಗೆ ಮೊದಲು ಬರಿಯ

ನೊಂದಾವಣೆ ಶುಲ್ಕವನ್ನು ಮಾತ್ರ ಕೊಡುವಂತೆ ನಂತರ ಭೂಮಿಯ ಸಂವೃದ್ಧಿ ಹೊಂದಿದ ಮೇಲೆ ಉಳಿದ ಹಣವನ್ನು ಕ್ರಮಬದ್ಧವಾಗಿ ಪಾವತಿ ಮಾಡುವಂತೆ ಅವರಿಗೆ ಅವಕಾಶ ಕೊಡುತ್ತಿದ್ದರು.191

## ಸಂಗ್ರಹಣೆಯ ವಿಧಾನಗಳು

ಭೂತೆರಿಗೆಯ ಬೇರೆ ಬೇರೆ ಪ್ರಕಾರದಲ್ಲಿ ಮೊತ್ತದ ಮೂಲಕ ಸಂಗ್ರಹವಾಗುತ್ತಿತ್ತು. (ಸಿದ್ದಾಯ, ಹೊಲಗಡ, ಸುವರ್ಣಯ ಭಟ್ಟಾಯಗಳಿಂದ)[192]. ಇವುಗಳನ್ನು ವರ್ಷಕ್ಕೆ ಒಮ್ಮೆ ಸಂಗ್ರಹಿಸಲಾಗುತ್ತಿತ್ತು.[193] ಭೂತೆರಿಗೆಯನ್ನು ಅನೇಕ ಸಲ ಚಿನ್ನ (ಸ್ವರ್ಣ) ಅಥವಾ ನಾಣ್ಯಗಳು, ಗದ್ಯಾಣ, ಪಣ, ಹಾಗ,[194] ಮತ್ತು ಹೊನ್ನುಗಳ[195] ಮೂಲಕ ಕೊಡಬೇಕಾಗುತ್ತಿತ್ತು. ಭೂತೆರಿಗೆಯನ್ನು ಪುಷ್ಯಮಾಸದಲ್ಲಿ ಕೊಡಲಾಗುತ್ತಿತ್ತು. (ಡಿಸೆಂಬರ್ ಜೂನ್ ತಿಂಗಳಲ್ಲಿ) ಎಂದು ದಾಖಲೆಗಳ ಮೂಲಕ ತಿಳಿಯುತ್ತದೆ.[196] ಇದನ್ನು '3' ಕಂತಿನಲ್ಲೂ ಕಟ್ಟಬಹುದಾಗಿತ್ತು. (ಮುಕ್ಕದಯ) ಇದು ತೆರಿಗೆದಾರರಿಗೆ ಅನುಕೂಲಕರವಾಗಿತ್ತು.[197]

## ಬ್ರಹ್ಮಾದಯ ಭೋಗ್ಯದ ಭೂಕರಾರು

ಕೆಲವು ಹಳ್ಳಿಗಳನ್ನು ಬ್ರಾಹ್ಮಣರಿಗೆ ಕೊಡಲಾಗುತ್ತಿತ್ತು. ಆ ಹಳ್ಳಿಗಳಲ್ಲಿ ಬ್ರಾಹ್ಮಣ ಕುಟುಂಬಗಳು ಒಳ್ಳೆಯ ಕಾರ್ಯಗಳಿಗೆ ನೆರವಾಗುತ್ತಾ ಪುರಾಣ, ಪುಣ್ಯಕಥೆಗಳನ್ನು ಜನರಿಗೆ ತಿಳಿಸುತ್ತಾ, ಶಾಸ್ತ್ರಗಳನ್ನು ಹೇಳುತ್ತಾ ಇದ್ದರೆಂದು ತಿಳಿದುಬರುತ್ತದೆ.[198]

ಬ್ರಾಹ್ಮಣರಿಗೆ ದತ್ತಿಯಾಗಿ ನೀಡಿ ಅವರು ವಾಸಿಸುತ್ತಿದ್ದಂತಹ ಜಾಗವನ್ನು ಬ್ರಹ್ಮಾದಯ ಗ್ರಾಮ ಅಥವಾ ಗ್ರಾಹರ ಗ್ರಾಮ ಎಂದು ಕರೆಯುತ್ತಿದ್ದರು.[199] ಒಂದೊಂದು ಗ್ರಾಹಕ ಗ್ರಾಮಕ್ಕೂ ಒಬ್ಬೊಬ್ಬ ಮುಖ್ಯಸ್ಥನಿದ್ದು ಅಲ್ಲಿನ ಆಡಳಿತ ನೋಡಿಕೊಳ್ಳುತ್ತಿದ್ದರು. ಆತನನ್ನು 'ಉರೋದಯ' ಎಂದು ಕರೆಯುತ್ತಿದ್ದರು.[200] ಮಾಸ ಹೆಗ್ಗಡೆ ಎಂಬುವರು ಕೇವಲ ಒಂದು ತಿಂಗಳು ಕಾರ್ಯ ನಿರ್ವಹಿಸಿದರೆ, ಉರೋದಯರು ಜೀವನ ಪರ್ಯಂತ ಕಾರ್ಯ ನಿರ್ವಹಿಸುತ್ತಿದ್ದರು.[201]

## ಸ್ಥಾನಪತಿ

ದೇವಾಲಯಗಳಿಗೆ ಬಂದಂತ ಕಂದಾಯವನ್ನು ಸಂಗ್ರಹಿಸುವವರಿಗೆ 'ಸ್ಥಾನಿಕರು ಅಥವಾ ಸ್ಥಾನಪತಿಗಳು ಅಥವಾ ದೇವಾಲಯದ ಟ್ರಸ್ಟ್‌ಗಳು' ಎನ್ನುತ್ತಿದ್ದರು. ಇವರುಗಳನ್ನು ರಾಜನೇ ನೇಮಿಸುತ್ತಿದ್ದನು.[202]

ಕ್ರಿ.ಶ. 1244ರ ಸೋಮೇಶ್ವರನ ಶಾಸನದಲ್ಲಿ ನಮಗೆ ದೊರಕಿರುವ ಪ್ರಕಾರ ಹೆಗ್ಗಡೆ ಪೆದ್ದಣ್ಣನ ಸಮ್ಮುಖದಲ್ಲಿ ಆತನ ಕೈಕೆಳಗೆ ಕೆಲಸ ಮಾಡುವ ಸೋಮಯ್ಯ ದಂಡನಾಯಕನ ಜೊತೆ ದೇವಾಲಯದ ಸ್ಥಾನಿಕರು ಮತ್ತು ದೇವಾಲಯದ ಭೂಮಿಯನ್ನು ವ್ಯವಸಾಯ ಮಾಡುವವರು ಭೂ ಕಂದಾಯದ ಬಗ್ಗೆ ಹಲವಾರು ವರ್ಷಗಳ ಕಾಲ ಒಪ್ಪಂದ ಮಾಡಿಕೊಂಡ ಬಗ್ಗೆ ಪ್ರಸ್ತಾಪವಿದೆ.[203]

ಇನ್ನೊಂದು ಶಾಸನದಲ್ಲಿ ನಮಗೆ ಸಿಗುವುದೇನೆಂದರೆ ವನಿಜ್ಜ ಮಠವು ಐದು ದೇವಾಲಯಗಳ ಅಧಿಕಾರವನ್ನು ಹೊಂದಿದ್ದು ಮತ್ತು ಅದಕ್ಕೆ ಮಹದೇಶ್ವರ ಬೆಟ್ಟದಲ್ಲಿರುವ ವಿರಕ್ತ ಮಠದಿಂದ ಬರುವ 1/5 ಭಾಗದ ಆದಾಯವನ್ನು "ಉರಿಗದ್ದಿಗೆ" ಎಂಬುದರ ಮೂಲಕ ಪಡೆಯುತ್ತಿದ್ದರು. 'ಕಂದರಂಬ ಮತ್ತು ನಿರರಂಬ'ಯೆಂಬ ತೆರಿಗೆಯನ್ನು ಶಾಶ್ವತವಾಗಿ ರಾಮನಹಳ್ಳಿ ಮತ್ತು ಬಸವನ ಹಳ್ಳಿಯಿಂದ ಸಂಗ್ರಹಿಸಲಾಗುತ್ತಿತ್ತು.

ಈ ಎಲ್ಲದರಿಂದ ತಿಳಿಯುವುದೇನೆಂದರೆ ಸ್ಥಾನಿಕ ಮತ್ತು ಸ್ಥಾನಪತಿ ಕಂದಾಯದ ಕೆಲಸವಲ್ಲದೇ ದೇವಾಲಯದ ನಿರ್ವಹಣೆ ಮತ್ತು ಅದಕ್ಕೆ ಸಂಬಂಧಿಸಿದ ಸೇವೆಯನ್ನು ಮಾಡಬೇಕಾಗಿತ್ತೆಂದು ತಿಳಿಯುತ್ತದೆ.[204]

## ವೆಚ್ಚ

ವೀರಸೋಮೇಶ್ವರನು ಬೊಕ್ಕಸವನ್ನು ಸಂರಕ್ಷಿಸುವುದರಲ್ಲಿ ಮತ್ತು ವರಮಾನವನ್ನು ಜನೋಪಯೋಗಕ್ಕಾಗಿಯೂ, ಸ್ವಂತದ ಉಪಯೋಗಕ್ಕಾಗಿಯೂ ಬಳಸುವುದರಲ್ಲಿ ಸಾಂಪ್ರದಾಯಿಕ ವಿಧಾನವನ್ನು ಅನುಸರಿಸಿದನು. ತನ್ನ ಪೂರ್ವಜರಂತೆ ಬೊಕ್ಕಸವನ್ನು ಸಂರಕ್ಷಿಸಿ, ಅದನ್ನು ಸರಿಯಾದ ರೀತಿ ಬಳಕೆ ಮಾಡುತ್ತಿದ್ದನು. ಆಡಳಿತಕ್ಕೆ ಸಂಬಂಧಿಸಿದಂತೆ ಸರಕಾರಕ್ಕೆ ನಗದು ವೆಚ್ಚ ಮಾಡುತ್ತಿದ್ದುದು ಕಡಿಮೆ. ಏಕೆಂದರೆ ರಾಜ್ಯದ ಅಧಿಕಾರಿಗಳಿಗೆ ವೇತನವನ್ನು ಸರ್ವಮಾನ್ಯ ರೂಪದಲ್ಲಿ ಭೂಮಿಯನ್ನು ಮಂಜೂರು ಮಾಡಿ ಪಾವತಿಸಲಾಗುತ್ತಿತ್ತು. ಅವರು ಅದನ್ನು ಯಾವುದೇ ತೆರಿಗೆಯ ಭಾರವಿಲ್ಲದೇ ಅನುಭವಿಸುತ್ತಿದ್ದರು. ಕೆಲವು ಸರಕಾರಿ ನೌಕರರು ಇನಾಂ ಭೂಮಿಗಳನ್ನು ಪಡೆಯುತ್ತಿದ್ದರು.

ವೀರಸೋಮೇಶ್ವರನು ರಾಜ ಬೊಕ್ಕಸದಿಂದ ಸೈನ್ಯದ ಪಾಲನೆಗಾಗಿ ವೆಚ್ಚ ಮಾಡಿದ್ದು ತುಂಬಾ ಕಡಿಮೆ. ವೀರಸೋಮೇಶ್ವರನು ತನ್ನ ಹಿಂದಿನವರಂತೆಯೇ ಹೆಚ್ಚಿನ ಹಣವನ್ನು ಸಾರ್ವಜನಿಕ ದತ್ತಿಗಳು, ದಾನಧರ್ಮಗಳು, ಆಸ್ಥಾನದಲ್ಲಿ ವಿದ್ವಜ್ಜರ ಪೋಷಣೆ ಇವುಗಳಿಗಾಗಿ ವಿನಿಯೋಗಿಸು ತ್ತಿದ್ದನು. ಕೆರೆ, ಕಟ್ಟೆಗಳ ನಿರ್ಮಾಣ ಕಾರ್ಯವನ್ನು ವಿಫುಲವಾಗಿ ಕೈಗೊಂಡಿದ್ದರಿಂದ ಹೆಚ್ಚು ಹಣ ವಿನಿಯೋಗವಾಗುತ್ತಿತ್ತು. ರಾಜನ ಅಂತಃಪುರ ಅಥವಾ ರಾಣಿಯರ ಅರಮನೆಗಳು ರಾಜ್ಯದ ವರಮಾನದ ಬಹುಪಾಲನ್ನು ಕಬಳಿಸಿ ಬಿಡುತ್ತಿದ್ದರು. ಅದ್ದೂರಿ, ವೈಭವ ಪ್ರದರ್ಶನ, ಆಡಂಬರದ ಆ ಕಾಲದಲ್ಲಿ ಇಂತಹ ವೆಚ್ಚಗಳು ದುಬಾರಿಯಾಗಿದ್ದರೂ, ಜನಪಯೋಗ ಕಾರ್ಯಗಳು ನಿರಂತರ ವಾಗಿ ನಡೆಯುತ್ತಿದ್ದವು.

### ಟಿಪ್ಪಣಿಗಳು ಮತ್ತು ಉಲ್ಲೇಖಗಳು


1) A.C. Burnell, elements of South Indian Paleography p. 117

2) MAR, 1937, No.32, AD1140: EC, II, SB 385, AD 1190, etc.

3) EC, II, SB 132 (56) AD 1123

4) EC, VI, Kd22, AD1090

5) EC, XII, TP54, AD1228: MAR1943, No.29. AD1174, p.25:EC, VI, TP 83, AD 1230

6) EC, VI, Kd 2, AD 1110, EC, VII, HI 108, AD 1208

7) MAR, 1937, No.17, P.135

8) EC, VII, Sh.5, AD 1218: EC, II, SB 400, AD 1200

9) MAR, 1937, No.41, AD 1277, P.189

10) EC, IX, Kn 71, A 1259: EC, XII, CK 18, AD 1149

11) MAR 1940, No.33, p.156

12&13) C, II, SB 354 (144), AD1135: EC, V, AK 141, - AD 1159

14) EC, VI, TK 83, C A D 1230

15) Dharma, I, 2.71, p.66

16) EC, V, Hn 102, AD 1123

17) EI. XIV., p.227

18) EC, V, B 1124, AD 1133

19) EC, V, 7, 27, AD 1253

20) EC, V, Hn 162, AD 1180

21) EC, III, Ng 274 AD 1228

22) EC, III, Ng 256 AD 1241

23) MAR. 1920, No.77, AD 1313, p.34-35

24) Alva. Cha.812, p.180. "Tanvva totava Madi Manava Guddali Madi, agedu kaledeneyya brantina berodedu, Samsarada henteya bagidu bittidenayya brahma bijava. Akanda Mandalavemba bavi pavanave ratala sushumne naladindave udakava tiddi, basavagalaivaru hasagedisi harenadu Samate sairaneyemba beliyanikki, avagalu; itotadolage jagaraviddui Sasiya Salahide kana, Gogeshwara Dharma II, 12-24, p.216 – "Keyyante, keyyarumeyante, (Keyyal) padambadevante Bittaandante sasiyante, Poadeyante, Paldeneyante, Koyladante, Sudinante Kalakkaavarpante, Okkanadante, rasiyante".

25) B.A.Saletore, Ancient Karnataka, Vol. I. P. – 474-75

26) Ibid, p.476, Dharma, II, 14-104, p.232 – "gobbavadim belasa perkuvante".

27) Dharma I, 74, p.430 – "nelam nirgranthamadode bittuvange ragam".

28) B.A. Saletore, Ancient Karnataka, p.475: Dharma I, 7-75. p.135- bhumiyanuttu kasamum kaledu bitti

29) As seeds of Mudga (Phraseous Mungo), p.128: Masha (Phraseolus Radiatus), p.133

30) Dharma II, 14-160, p.249. Sasiyam kandu niram biduvante Ha. Ka. Of Raghavanka, 3.67, p.40

31) Dharma-I, 2-155, p.76 – pulu muttida sasiyante: Ibid, 2, 71, p-60, Kabbina Totavam nari pokkante.

32) EC, V, B1 140, AD 1200, holagahigam

33) MAR, 1912, No.57, p.42

34) EC, IV (RE), Cn2, AD1116: eC, IV< HS 137, A.D. 1162

35) Dharma, I, 3-146, p.75

36) B.K.Gururaja Rao, Op.Cit.p.304

37) Soma Cha, p.148. 4a EC V, B 1158

38) EC, XV, HN 112, AD 1282

39) EC, III, TN 97, AD 1276

40) Buchanan's Journey, Vol. I, p.92

41) MAR, 1932, No.16

42) Ibid, Chapt.XII

43) EC, VI, Kd, 96, AD 1411, EC, II, SB 384 (144), - AD 1135: MAR, 1912, No.83, AD 1173, p.43, EC IV, Y159, AD 1264: The author of Sukti Sudharnava devotes one chapter for garden crops, pp.276-292

44) Dharma, I, 2, 71, p.59: Ha.Ka., p.40

45) EC, IX, Db31, AD 1267: Ibid, VI, Kd 36, - AD 1203

46) Sukti Sudharnava of Mallikarjuna, pp 70-71, Nemipurana 71, p.40: Soma Charite 114, p.83: Ibid 74, p.72, Ha. Ragale, Part 3, p.39: Dharma I, 1-151, p.30: Ibid, 4-27, p.169: Ibid, 9-69, p.428.

47) Lila, 5, 63, p.104

48) Dharma, I, 3.93, p.115

49) Nemipurana, 71, p.40

50) Sukti Sudharnava of Mallikarjuna p.260, SII, IX, Part 1, No.329, AD 1209: EC V B 1175, AD 1186

51) Ha. Rangale, pp.1-9: Ba. Rangale, p.2.9.14, Dharma I, 2-24, P.51, Pavina Santeya Pokku

52) Dharma, II, 1232, p.122: Siddacha., p.75

53) Ra.Cha.of Chikkananjesha, 7, p.229

54) Nimbi; Ragale, p.74

55) Bar Rangale p.58

56) Dharma II, 3.35, p.102: Sidda Cha, p.134

57) Ba, Rangale, p.59

58) Dharma I, 7-95, 320

59) Sukti Sudharnava, p.291

60) Ibid, p.29: Ba, Va, 73, p.35

61) P.C.Jain, Socio-economic Explorations of Medieval India, p.129

62) EC, V, BI 177, AD 1167

63) EC, V, AK30, AD 1134

64) EC, VI (RE), 63 (XIV Sr. 223) AD 1174

65) EC, IX, Bn6, AD 1253

66) AS, p.288 & Ibid, p.195

67) Ibid, p.157

68) Dharma, II, 14-10, p.211

69) EC, V, B186, AD 1117, Ibid, BI 137, AD 1183

70) EC, IX, Bn 133, AD 1307

71) EC, III (RE), Nj. 1376 (MAR, 1941-26)

72) EC, V, BI 175, AD 1186

73) EC, III, (RE), NJ1 35, AD 1278: MAR-1936, No.47, p.120

74) EC, XI, Dg 105

75) AS, p.288

76) Encyclopaedia Britanica, Vol.XII, p.683

77) K.A.N.Sastri, History of South India, p.41

78) Raltamatam, Chapt.I, Stanza 45, p.7

79) EC, V, Hn 153, AD 1170: See also EC, XV, -AK 241, AD 1189

80) MAR, 1937, No.40, AD 1142

81) EC, V, BI, 140, AD 1200

82) EC, IV, Kp 68, AD 1116: EC, II, KP 56, AD 1132: MAR 1945, No.9, p.42: EC, VIIISb 140, AD 1198: EC, II (RE), No.573, p.359: MAR, 1940, No.33, p.156: EC, IV, KP 74, AD 1140

83) EC, VI, Kd 22, AD 1090

84) EC, IV (RE), Ch 2, AD 1116

85) EC, II, 384 (144), AD 1135: MAR 1940, No.33, p.56: RC, II, KP 56, AD 1132: EC, IV, Ng 103, AD 1120

86) MAR 1937, NO.18, AD 1289

87) EC VII, Ci64, AD 1214: ECVI, Kd 100, AD-1240: MAR 1937, No.18, AD 1289
88) EC, XV, AK No.236, AD 1161
89) EC, IX, Bn 133, AD 1307
90) R.R.Diwakar, Karnataka through the ages, -p.43
91) Ibid., p.43
92) TESM, p.1-2
93) S.I.I. IX, i-192-1115
94) Dharmamrita-8-165
95) EC 3 – ML.65 – 1200, SIE-1917 – No.16-126, EC-TK-80-1278
96) Economic Conditions p.452
97) MAR 1916-p.51
98) EC 11- Dg 105-1218
99) J.I.S.I. No.1-1094
100) Sasana Sahitya Sanchaya p.152-1024
101) EC 8 – SK 118 – 1054
102) K.I.I. 25 – 1186
103) S.I.I. IX, i.297 – 1177
104) EC 12 – gb 34 – 1134
105) EC 7 – Sk 191
106) B.K.I.I. i.94 – 1059
107) The R.K.S. –p.367
108) EC, VIII, Ng 274 AD 1228
109) The Economic conditions of South India p. 710
110) Arthasastra of Kautilya translated by Dr.R.Shamasastry, 6th Edition, p.287
111) Sacred Books of the East, Vol. XXV, Laws of Manu- SBE (Manu) Chapt. VIII, Verse-307, p.307
112) EC. V. BI 89, AD 1280
113) EC, V AK67: EC, V Ag 21, AD 1274
114) E.C.V. Ag55, AD 1250: EC, IX< Ma 81.

Kandaya is generally ment revenue. In the subsequent period till today the term kandaya meant land revenue

115) E.C.V.K.93, AD 1237

116) E.C.V.K.94, AD 1238

117) According to D.C.Sirkar, Siddaya is the revenue from agricultural produce (Indian Epigraphical Glossary p.311)

Whereas S. Gururajachar denies the denies the opinion of D.C. Sircar and is of the opinion that it is a settled revenue of permanent nature and was levied on lands, houses and shops. See some aspects of Economic and Social Life in Karnataka – by the same author, p.143.

However when we consider the evidences given below both these opinions does not hold good. The lands meant for construction of houses and shops were taxed under siddaya before the construction of the same. But once when the buildings come up on the land meant for the same, they were taxed as maneder and angadidere for which we have evidences and is discussed under the headline property taxes subsequently.

118) EC V, Hn 71, A.D. 1173

119) EC, XII, CK2, AD 1261

120) EC, XV, BI, 298, AD 1279: MAR, 1909, Para 25 p.22

121) EC, IV, HS 90, AD 1200: EC, ITI, TN 98, AO 1300

122) EC, IV, Ch 84, AD 1280: EC, V, (RE) 238 (III, TN 27) AD 1290

123) EC, XII, TP 8, AD 1316: EC, V (RE) p.p.80, AD 1193, MAR, 1932, No.16, p.171, etc.

124) EC, IV, Ng 38, AD 1284

125) EC. IV, Ng 137, AD 1162

126) EC, IV, Ng 38 AD 1284

127) MAR, 1940, No.3, AD 1215: EC, V, BI, 74, A.D. 1254

128) MAR, 1942, NO.6, AD 1270: EC, III Sr. 104, A.D. 1200: EC, VI, (RE), pp.220: MAR, 1937, No.52

129) EC, IV, H.S. 137, AD 1162: SII, No.323, A.D. 1197

130) MAR< 1932, No.16, P.171: KI CVL: IV, p.13

131) EC, XV, Hn 94, AD, 1238: SII, Vol.IX, No.232, AD 1197: EC, XVI, CK, 71, Pancha Karukarandere 132 indicated the important five professions of black smith, gold smith, carpenter, mason and brazier.

132) EC, VIII, Sb 514, AD 1197: KI Vol. IV, p.13

133) EC, XVI, CK 71

134) EC, VII, HI8, AD 1228

135) EC, IV, HS 137, AD 1162: MAR 1940, No.27, p.15

136) EC, V, Ch 221, AD 1241

137) ED, XV, BI, 252, AD 1298: MAR 1911; p.50: EC, IV, Ng 38, AD 1284: EC, XV, HN 112, AD 1282: EC VI, Kd 49, AD 1291

138) EC, VI, (RE), p.p.220, (III Sr 104), AD 1200: EC, IV, Ng 38, AD 1284, EC, VI, Kd 49, AD 1291

139) EC, XV, Hn 94, A.D. 1238, ECIV, Ng.38, A.D. 1284: EC, VI, Kd 49, A.D. 1291

140) EC. VII, HI 7, AD 1204; EG, VIII, Sb 514, 515 Md 31, AD 1171, AD 1197: EC, IV, HS 137, AD 1162

141) EC V (RE), My 212 (MAR 1938- No.42) G.A.D. 1175

142) MAR 1932; No.16, p.171: EC, V Gn 203 AD 1223; EC, XVI, CK 71 – basigadere is also at a x on marriage

143) EC, V, Cn 203, AD 1223

144) EC, V, (RE) 238, (III TN 27), AD 1290

145) EC, IV, Ch 84, AD 1280

146) EC, V, Hn 139, AD 1200; Ibid, B 174, AD 1254 kumara gadyana 1 para 8

147) EC, V, 4n 139, AD 1200

148) EC, IX, Kn 72, AD 1277

149) Ibid Kn 76, AD 1299

150) EC, V, Cn 242, AD 1252, EC, VI Kd 49, AD 1291

151) EC, IV, Ng 38, AD 1284

152) EC, IX, CP 7, A.D. 1314, EC, VI, TK 55, AD 1291

153) EC, IV K.95 AD 1250

154) EC XVI, CK 68

155) EC, V, Cn 200, AD 1139, EC, II, SB 407, AD 1250

156) EC, XI, HS 87, AD 1313; EC, XVI, CK 68, ar as alugal see also EC V (RE) 238, (III TN 27) AD 1290

157) EC, V, Cn 170, AD 1231

158) EC, IV< Ng 39, AD 1271

159) EC, (RE), TN, 238 (III TN 27), AD 1290

160) EC, XI, HK 136; EC XI, HK 56; EC, XII, TP2, AD 1263

During Akbar's reign we find the lands being classified into 4 divisions, i.e. polaj (first category) which was regularly cultivated, parvati (second category) almost regularly cultivated but left follow for one or two yearsl chachar (third category), which was left uncultivated for three or more years; and Banjar (fourth category) which was left follow for 5 years or more (A.L.Srivastava – The Mughal Empire p.205)

161) EC, II, SB 400, AD 1200

162) EC, IV, Ng 48, AD 1270, EC III, TN 97, AD 1276

163) EC, II, SB 902, AD 1136; EC, II SB 141 (51) AD 1139

164) EC, VI, Kd 96, AD 1141, muvatta muru genu bar chividiva gale yala kamma nalavattakkam bija salageyondavlekkadi MAR 1928, No.10, AD 1189, p.30, EC, XV AK 205, AD 1189; Salage arakkarmu kamba innuranalavattu.

165) SBE (Manu), chapter VII, verse 130, p.236-237

166) B.P.Majumdar, Socio-Economic History or North India p.229

167) Mitakshara, I, verse 335

168) E.C.V.B.1140, AD 1200, holagahigm

169) MAR, 1912, No.57, p.42

170) Soma Cha – Suggiya, Kotaradolu malehandante, p.28, Sukti, Sudharnava, p.254-260: Ha ka of Ragavanka, p.111

171) E.C.V. Cn 170 – diva karatavikara badhe

172) Dharma, I.3 – 146, p.175

173) EC, IV (RE) Cnz, AD 1116: EC, IV, HS 137 – AD 1162

174) B.K.Gururaja Rao, Op. Cito, p.364

175) Soma Cha, p.148, Ha Rag part 2, p.37: - ECV, BI 158

176) Rattamatam, Chapt, IX, Stanzas 25-32, p.90-91

177) EC, XV, HN 112, AD 1282

178) EC, ITI, TN 97, AD 1276

179) Bukhanans journey, Vol. I.P.92

180) MAR 1932, No.16

181) Ibid, Chapt, XII, Stanza 40, p.112: Ibid, Chapt. IX, stanza 46-47, p.93-94, See also EC, III, TN 97, AD 1276: Ba Ra p.81: E.C, VIII, S 75, AD 1296

182) EC, VI, Kd, 96, AD 1141, EC, II, SB 384 (144), AD 1135

183) Dharma, 1,2,7,1, p.59: Ha, Ka, p.40

184) Sukti Sudharnaa of Mallikarjuna, pp.70-71, Nemipurana 71, p.40: Soma charite 114, p.83: Ibid, 74, p.72, Ha Rogale, part 3, p.39: Dharma I, 1-151, p.30: Ibid, 4-27, p.169: Ibid, 9-69, p.428

185) EC, III, TN100, AD 1281: Ibid, IV Gu 69, AD 1321: EC, V, AK 12, AD 1297: Ibid, BI 74, AD 1254: Ibid, B1, 342, AD 1265

186) EC, VI, TK 55, AD 1291: EC, VI, TK 43, AD 1210: MAR 1296, No.16

187) EC, IV, Ng 39, AD 1271

188) EC, IV, Ng 38, AD 1284

189) EC, IX, Bn 53, AD 1304

190) MAR 1923, No.173, AD 1116-1117, p.31-34

191) EC, IV, Ng 38, AD 1284: EC, XV, HN 20- AD 1276

192) EC, V, B1 140, AD 1200: See also EC, V, Cn 242:EC, V, B1, 89

193) EC, V, B181, AD 1280

194) EC, V, B174, AD 1254

195) EC, VIII, Sh 69, AD 1320: EC, XV, HN 59, AD – 310 etc

196) EC, V, AK 113, AD 1318: Ibid, AK 120, AD 1297

197) Tapan Raychaudari and Irfan Habib – The cambridage Economic History of India Vol. P.113

198) EC, XV, B 1298, AD 1279: MAR 1909, Para 85. p.22

199) Ibid, EC, V, Hn 134, AD 1115: SII, Vol.IX, Part I, No.333, AD 1215, ASIR, 1952-53: No.216, AD 1204: ASIE, 1934-35, No.7, p.147

200) EC, IV, I, 38, AD 1336: Ibid, Y 139, - AD 1328: EC XII, TK 2, AD 1263

201) EC, IV, Y18, AD 1290

202) EC, VI, Mg 9, CAD 1054

203) EC, IX, Bp 78, AD 1163

# ಅಧ್ಯಾಯ ೫
# ಸಾಮಾಜಿಕ ಜೀವನ

## ಸಮಾಜದ ಸ್ವರೂಪ

ಮೂಲತಃ ಕರ್ನಾಟಕದ ಜನತೆಯು ಹಿಂದೂಗಳಾಗಿದ್ದರು. ಈ ಕಾಲದ ಸಮಾಜವು ಎರಡು ಜಾತಿಗಳಾಗಿ ಸಂಘಟಿಸಲ್ಪಟ್ಟ ಸಾಂಪ್ರದಾಯಿಕ ಸಮಾಜವಾಗಿದ್ದಿತು. ಹಿಂದೂಗಳ ಆದರ್ಶವು ವರ್ಣಾಶ್ರಮ ಧರ್ಮವನ್ನು ಮುಂದುವರೆಸಿಕೊಂಡು ಹೋಗುವುದಾಗಿತ್ತು. ಸಮಾಜವನ್ನು ಹಲವಾರು ವಿಶಿಷ್ಟ ಜಾತಿ ಹಾಗೂ ವರ್ಗಗಳ ವರ್ಗೀಕರಣದ ಆಧಾರದ ಮೇಲೆ ಸಂಘಟನೆ ಮಾಡಲಾಗುತ್ತಿತ್ತು. ಕೆಲವು ಶಾಸನಗಳು ನಾಲ್ಕು ವರ್ಣಗಳಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಹಾಗೂ ಶೂದ್ರಗಳ ಉಲ್ಲೇಖವನ್ನು ನೀಡುತ್ತವೆ.[1] ಈ ನಾಲ್ಕು ವರ್ಗಗಳ ಪಾಲನೆಯು ರಾಜನ ಆದ್ಯ ಕರ್ತವ್ಯವಾಗಿತ್ತು.[2] ಈ ವಿಂಗಡನೆಗಳು ಯಾವುದೇ ರೀತಿಯಲ್ಲಿ ಅಂತಿಮ ಹಾಗೂ ನಿರ್ಬಂಧಕ್ಕೆ ಒಳಗಾಗಿರಲಿಲ್ಲ. ಹೊಸ ಪಂಥಗಳು, ಪಂಗಡಗಳು ಹಾಗೂ ಸನ್ನಿವೇಶಗಳು ಹೊಸ ಬದಲಾವಣೆಗಳು ಹಾಗೂ ಮಾರ್ಪಾಡುಗಳನ್ನುಂಟು ಮಾಡಿದವು. ಸಮಾಜವು ಸಹಜವಾಗಿ ಸಾಂಪ್ರದಾಯಿಕವಾಗಿ ತೋರಿ ಬಂದರೂ ತನ್ನ ಪುರಾತನ ವೈಶಿಷ್ಟ್ಯತೆಗಳಿಗೆ ಶರಣು ಹೊಡೆಯದೆ ಹೊಸ ಬದಲಾವಣೆಗಳನ್ನು ಮಾಡಿಕೊಳ್ಳುತ್ತಾ ಸಾಗಿತ್ತು.

## ಸಾಮಾಜಿಕ ವಿಂಗಡನೆಗಳು ಹಾಗೂ ಗುಂಪುಗಳು

ಪ್ರಾರಂಭದಲ್ಲಿ ಸಮಾಜವನ್ನು ಹುಟ್ಟಿನ ಆಧಾರದ ಮೇಲಲ್ಲದೇ ವೃತ್ತಿಯ ಆಧಾರದ ಮೇಲೆ ನಾಲ್ಕು ವರ್ಣಗಳಾಗಿ ವರ್ಗೀಕರಿಸಲಾಗುತ್ತಿತ್ತು. ಋಗ್ವೇದದ ಪುರುಷ ಸೂಕ್ತವು ನಾಲ್ಕು ವರ್ಣಗಳ ಉಗಮದ ಬಗ್ಗೆ ಉಲ್ಲೇಖವನ್ನು ನೀಡುತ್ತದೆ. ಮೊದಲ ಮೂರು ವರ್ಣಗಳು ಪರಿವರ್ತನೀಯವಾಗಿದ್ದವು. ಮೊದಲ ವರ್ಗಗಳಲ್ಲಿನ ಗುಂಪುಗಳಲ್ಲಿ ವಿವಾಹವನ್ನು ನಿಷೇಧಿಸಲು ಯಾವುದೇ ನಿಯಮವಿರಲಿಲ್ಲ. ಬ್ರಾಹ್ಮಣರ ಯುಗದಲ್ಲಿ ಈ ವರ್ಗೀಕರಣವು ಬಹಳ ಕ್ಲಿಷ್ಟವಾಗಿತ್ತು ಹಾಗೂ ವ್ಯಕ್ತಿಯ ವರ್ಣವು ವೃತ್ತಿಯ ಆಧಾರದ ಮೇಲೆ ಆಧಾರಿತವಾಗಿರಲಿಲ್ಲ. ಆದರೆ ಅದು ಅವನ ಹುಟ್ಟಿನ ಆಧಾರದ ಮೇಲಾಗಿತ್ತು.

ಹಿಂದೂ ಮತದಲ್ಲಿ ಧರ್ಮವು ಸಾಮಾಜಕ್ಕೆ ನಿಕಟವಾಗಿ ಸಂಬಂಧಿಸಿದುದಾಗಿದೆ. ಅರಸ ಮತ್ತು ಪ್ರಜೆಗಳು ಜೀವನದ ಈ ಸಾಮಾಜಿಕ ಧಾರ್ಮಿಕ ಅಂಶದ ಅರಿವುಳ್ಳವರಾಗಿದ್ದರು. ಪ್ರಾಚೀನ

ಸಮಾಜವು ಗುಣಕರ್ಮಗಳನ್ನು ಧರಿಸಿ ನಾಲ್ಕು ವರ್ಗ ಅಥವಾ 'ವರ್ಣ'ಗಳಿಂದ ಕೂಡಿದುದಾಗಿತ್ತು. ಹೀಗೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರೆಂಬ ಸಮಾಜದ ನಾಲ್ಕು ವರ್ಗಗಳಿಗೆ ಅವು ನಿರ್ವಹಿಸಬೇಕಾದ ಕರ್ತವ್ಯಗಳು ಹಾಗೂ ಸಮುದಾಯದಲ್ಲಿ ಆಯಾ ಸ್ಥಾನಮಾನಗಳು ಇದ್ದವು. ವೀರಸೋಮೇಶ್ವರನು ತನ್ನ ಪೂರ್ವಿಕರು ಹಾಕಿಕೊಟ್ಟ ನಿದರ್ಶನಗಳಿಗೆ ಅನುಗುಣವಾಗಿ ಪ್ರಾಚೀನ ಆಚಾರ ವಿಚಾರಗಳನ್ನು ಆಧರಿಸಿ ವಿವಿಧ ಜಾತಿಗಳ ಕರ್ತವ್ಯಗಳನ್ನು ರಕ್ಷಿಸಿದನೆಂದು ಹೇಳಲಾಗಿದೆ.

## ಸಾಮಾಜಿಕ ಶ್ರೇಣಿ

### (1) ಬ್ರಾಹ್ಮಣರು

ಹೊಯ್ಸಳರ ಕಾಲದ ಸಮಾಜವು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರೆಂಬ ನಾಲ್ಕು ಪ್ರಮುಖ ಜಾತಿಗಳಿಂದ ಹಾಗೂ ತಾವು ಮಾಡುವ ಕೆಲಸದ ಸ್ವರೂಪದ ಮೇಲೆ ಆಧಾರಿತವಾದ ಇತರ ಉಪಜಾತಿಗಳಿಂದ ರಚಿತವಾಗಿತ್ತು. ಬ್ರಾಹ್ಮಣರು ಸಮಾಜದಲ್ಲಿ ಬಹಳ ಪ್ರಮುಖ ಹಾಗೂ ಪ್ರಭಾವೀ ವರ್ಗವಾಗಿ ಬೆಳೆದಿದ್ದರು. ಅವರು ಮುಖ್ಯವಾಗಿ ರಾಜಾಶ್ರಯ ಹಾಗೂ ಸಮಾಜದ ಔದಾರ್ಯದ ಆಧಾರದ ಜೀವನ ಮಾಡುತ್ತಿದ್ದರು. ಸಮಾಜದಲ್ಲಿನ ಪುರುಷೋತ್ತಮರು, ರಾಜಕುಮಾರ ನಿಂದ ಹಿಡಿದು ರೈತನವರೆಗೂ ಭೂಮಿ, ಮನೆ ಹಾಗೂ ಸಂಪತ್ತಿನ ದಾನದ ಉಪಯೋಗವನ್ನು ಬ್ರಾಹ್ಮಣರು ಪಡೆಯುತ್ತಿದ್ದರು. ಬ್ರಾಹ್ಮಣರು ಗೌರವ ಹಾಗೂ ಘನತೆಯನ್ನು ಹೊಂದಿದ್ದರು. ಜ್ಞಾನ ಹಾಗೂ ಧಾರ್ಮಿಕ ಜ್ಞಾನ ಸಂಪದದ ಕುಶಲಪಾಲಕರಾಗಿದ್ದ ಇವರು ನಾಡಿನ ಶೈಕ್ಷಣಿಕ ಹಾಗೂ ಧಾರ್ಮಿಕ ಜೀವನದ ಮೇಲೆ ಬಹಳ ಪ್ರಮುಖವಾದ ಹಾಗೂ ಅದ್ವಿತೀಯವಾದ ಪಾತ್ರವನ್ನು ವಹಿಸಿದ್ದರು. ಇದಕ್ಕೆ ಪ್ರತಿಯಾಗಿ ಸಮಾಜವು ಅವರನ್ನು ಸ್ವತಂತ್ರವಾಗಿ ಬಿಟ್ಟು ಅವರು ಜ್ಞಾನ, ನೀತಿ, ಚಾರಿತ್ರ್ಯ ಹಾಗೂ ಧರ್ಮದ ಏಳಿಗೆಗೆ ಟೊಂಕವನ್ನು ಕಟ್ಟುವಂತೆ ನೋಡಿಕೊಂಡಿತು. ಈ ಕಾಲದ ಹಲವಾರು ಶಾಸನಗಳು ಅವರ ಉದ್ದಿಮೆ ಪಾಂಡಿತ್ಯ ಹಾಗೂ ಚಾರಿತ್ರ್ಯದ ಬಗ್ಗೆ ಉಲ್ಲೇಖವನ್ನು ನೀಡುತ್ತವೆ. ಅವರಲ್ಲಿನ ಅನೇಕರು ಜ್ಞಾನದ ಒಂದಲ್ಲ ಮತ್ತೊಂದು ಶಾಖೆಗಳಲ್ಲಿ ವಿಶೇಷ ಪರಿಣತಿ ಯನ್ನು ಹೊಂದಿದ್ದರು. ಆದರೆ ಅವರ ವೃತ್ತಿ ಕೇವಲ ಕಲಿಕೆಗಾಗಿ ಮಾತ್ರ ಸೀಮಿತವಾಗಿರಲಿಲ್ಲ. ನಾಗರೀಕ ಇಲಾಖೆಗಳಲ್ಲಿ ಹಾಗೂ ಸೇನೆಯಲ್ಲಿನ ರಾಜ್ಯದ ಸೇವೆಯಲ್ಲಿ ಈ ವರ್ಗದವರಿಗೆ ಹಾಗೂ ಇತರ ವರ್ಗದವರಿಗೂ ಮುಕ್ತ ಅವಕಾಶವಿತ್ತು. ಬ್ರಾಹ್ಮಣರು ಯುದ್ಧದಲ್ಲಿ ಖ್ಯಾತಿಯನ್ನು ಹೊಂದಿದ್ದ ಹಲವಾರು ಉದಾಹರಣೆಗಳನ್ನು ನಾವು ನೋಡುತ್ತೇವೆ. ಸಮಾಜ

ರಚನೆಯಲ್ಲಿ ಇವರು ಹೊಂದಿದ್ದ ಪ್ರಮುಖ ಸ್ಥಾನವು ಅವರು ಇತರೆ ಸಾಮಾಜಿಕ ಹಾಗೂ ಧಾರ್ಮಿಕ ಗುಂಪುಗಳೊಡನೆ ವರ್ಗದ್ವೇಷ ವನ್ನು ಹುಟ್ಟುಹಾಕಲಿಲ್ಲ.

## 2) ಆಡಳಿತ ವರ್ಗ

ಆಡಳಿತ ವರ್ಗವನ್ನು ಕ್ಷತ್ರಿಯ ವರ್ಗವೆಂದು ಪರಿಗಣಿಸಲಾಗಿತ್ತು. ಈ ಕಾಲದಲ್ಲಿ ಕರ್ನಾಟಕ ವನ್ನಾಳಿದ ಹಲವಾರು ಸಂತತಿಗಳು ತಮ್ಮನ್ನು ಕ್ಷತ್ರಿಯರೆಂದು ಕರೆದುಕೊಂಡರು. ವರ್ತಕರು ತಮ್ಮನ್ನು ವೈಶ್ಯರೆಂದು ಕರೆದುಕೊಂಡರು. ಕೃಷಿಯ ವೃತ್ತಿಯಾಗಿದ್ದವರು ತಮ್ಮನ್ನು ವೈಶ್ಯರೆಂದು ಹೆಸರಿಸಿಕೊಳ್ಳಲಿಲ್ಲ. ಕೆಲವು ಕೆಳ ದರ್ಜೆಯ ವೃತ್ತಿಗಳನ್ನು ಅನುಸರಿಸುತ್ತಿದ್ದವರನ್ನು ಶೂದ್ರರೆಂದು ಕರೆಯಲಾಗುತ್ತಿತ್ತು. 'ಶೂದ್ರ' ಎಂಬ ಪದವನ್ನು ಬಹಳ ಕ್ಷಣಿಕವಾಗಿ ಎಣಿಸಲಾಗಿತ್ತು. ಪ್ರಮುಖ ನಾಲ್ಕು ವರ್ಗಗಳ ಹೆಸರುಗಳು ಸಾಂಪ್ರದಾಯಿಕವಾಗಿ ಬಳಕೆಯಲ್ಲಿದ್ದರೂ ಅವುಗಳ ಹೆಚ್ಚಿನ ಮಹತ್ವವನ್ನು ಹೊಂದಿರಲಿಲ್ಲ. ಅವಶ್ಯಕತೆಯು ಎದುರಾದಾಗ ಬ್ರಾಹ್ಮಣರು ಹೋರಾಡಲು ಸಿದ್ದರಾಗುತ್ತಿದ್ದರು. ಕೆಲವು ಬ್ರಾಹ್ಮಣ ದಂಡನಾಯಕರು ಯುದ್ಧ ಹಾಗೂ ಕಲಿಕೆಯರೆಡರಲ್ಲೂ ಪ್ರಮುಖರೆನಿಸಿದ್ದರು.

## 3) ಸಮಾಜದ ಇತರೆ ಗುಂಪುಗಳು

ಹೊಯ್ಸಳರ ಕಾಲದಲ್ಲಿ ವೃತ್ತಿಗಳ ಆಧಾರದ ಮೇಲೆ ಬೆಳವಣಿಗೆಯನ್ನು ಹೊಂದಿದ್ದ ಅನೇಕ ಗುಂಪುಗಳಿದ್ದವು. ವಸ್ತ್ರಗಳನ್ನು ತೊಳೆಯುತ್ತಿದ್ದ ವೃತ್ತಿಯವರನ್ನು ಅಗಸರು ಅಥವಾ ಮಡಿವಾಳರೆಂದು ಕರೆಯಲಾಗುತ್ತಿತ್ತು. ಬಹುಶಃ ಅವರು ತಮ್ಮದೇ ಆದ ಪ್ರತ್ಯೇಕ ಸಂಘಗಳನ್ನು[3] ಹೊಂದಿದ್ದರು. ಒಂದು ಶಾಸನವು ಹೇಳುವಂತೆ ಈ ಗುಂಪು ವಿನಾಯಕ ದೇವರಿಗೆ ದಾನವನ್ನು ನೀಡಿತು. ಕ್ಷೌರ ಹಾಗೂ ಕೇಶ ಶೃಂಗಾರ ಮಾಡುತ್ತಿದ್ದವರನ್ನು ನಾವಿದರೆಂದು ಕರೆಯಲಾಗುತ್ತಿತ್ತು. ಅಗ್ರಹಾರದ ಬ್ರಾಹ್ಮಣರು ಈ ನಾವಿದರನ್ನು ತಮ್ಮ ಕೈ ಉಗುರನ್ನು ತೆಗೆಯಲು ನೇಮಕ ಮಾಡಿ ಕೊಳ್ಳುತ್ತಿದ್ದರು.[4] ಇವರಲ್ಲಿ ಓರ್ವನು ಕುರ್ತಕೋಟೆಯಲ್ಲಿ ದೇವಾಲಯವೊಂದನ್ನು ಕಟ್ಟಿದ್ದುಹಾಗೂ ಆತನ ಸಹೋದರ ಸಿಂಗನು ಅನೇಕ ಕದನಗಳಲ್ಲಿ ನಾಯಕನಾಗಿದ್ದನ್ನು ಒಂದು ಶಾಸನವು ಪ್ರಸಂಶಿಸಿದೆ. ಇದೇ ಶಾಸನವು 500 ಕ್ಷೌರಿಕರ ಸಂಘಗಳ ಅಸ್ತಿತ್ವದ ಬಗ್ಗೆ ಉಲ್ಲೇಖವನ್ನು ಮಾಡುತ್ತದೆ. ಇವುಗಳಿಗೆ ತೆರಿಗೆಯನ್ನು ವಿಧಿಸಲಾಗುತ್ತಿತ್ತು. ಇವರು ಇತರೆ ವೃತ್ತಿಗಳನ್ನು ಮಾಡುತ್ತಿದ್ದಾಗಿ ಕಂಡು ಬರುತ್ತದೆ. ಉಡುಪನ್ನು ತಯಾರಿಸುತ್ತಿದ್ದವರನ್ನು ನೇಯುವರು ಅಥವಾ

ಜೇಡರೆಂದು ಕರೆಯಲಾಗುತ್ತಿತ್ತು. ಈ ಹೆಸರು ಇನ್ನು ದಕ್ಷಿಣ ಭಾರತದಲ್ಲಿ ಚಾಲ್ತಿಯಲ್ಲಿರುವುದನ್ನು ಕಾಣಬಹುದು. ಬಟ್ಟೆಯನ್ನು ಕತ್ತರಿಸಿ ಉಡುಪುಗಳನ್ನು ತಯಾರಿಸುತ್ತಿದ್ದವರನ್ನು 'ಚಿಪ್ಪಿಗರು ಅಥವಾ ಸಿಂಪಿಗರು'5 ಎಂದು ಕರೆಯಲಾಗುತ್ತಿತ್ತು. ಕೈಯಿಂದ, ಎಣ್ಣೆ ಗಿರಣಿಯಿಂದ ಅಥವಾ ಎತ್ತಿನ ಮುಖಾಂತರ ಎಣ್ಣೆ ತೆಗೆಯುತ್ತಿದ್ದವರನ್ನು ತೈಲಿಗರು ಅಥವಾ ತೆಲ್ಲಿಗರೆಂದು ಕರೆಯಲಾಗುತ್ತಿತ್ತು. ಗಾಣಿಗರು ಅಥವಾ ತೆಲ್ಲಿಗನಕಾರರ ಸಂಘಗಳ ಅಸ್ತಿತ್ವದ ಬಗ್ಗೆ ಶಾಸನವು ಉಲ್ಲೇಖವನ್ನು ನೀಡುತ್ತದೆ.6 ಈ ಸಂಘವು ನಖಾರೇಶ್ವರ ದೇವಾಲಯವನ್ನು ಕಟ್ಟಿಸಿತೆಂದು ತಿಳಿದುಬಂದಿದೆ. ಧಾರವಾಡ ಜಿಲ್ಲೆಯ ಬೆನಚಮಟ್ಟಿಯ ಒಂದು ಶಾಸನವು ಹೇಳುವಂತೆ ಎರೆಂಬರಗೆಯ,7 ಬಳಿಯ ತೆಲಿಂಗೇಶ್ವರ ದೇವಾಲಯಕ್ಕೆ 50 ಮಂದಿ ಗಾಣಿಗರು ಹಲವು ಕೊಡುಗೆಗಳನ್ನು ನೀಡಿದ ಬಗ್ಗೆ ದಾಖಲೆಯನ್ನು ನೀಡುತ್ತದೆ. ಮಡಿಕೆ, ಕುಡಿಕೆಗಳನ್ನು ತಯಾರಿಸುತ್ತಿದ್ದವರನ್ನು ಕುಂಬಾರ ಅಥವಾ ಕುಂಬಾರಕರೆಂದು ಕರೆಯಲಾಗುತ್ತಿತ್ತು. ಈ ಸಮುದಾಯದ ವ್ಯಕ್ತಿಯೋರ್ವನು ಕುಂಬಾರೇಶ್ವರ ದೇವಾಲಯವೊಂದನ್ನು ಕಟ್ಟಿಸಿದನು.8 ಈ ಸಮುದಾಯದ ಸದಸ್ಯರು ಜೈನಾಲಯಕ್ಕೆ ಕೊಡುಗೆ ನೀಡಿದ ಬಗ್ಗೆ ಕ್ರಿ.ಶ.1124ರ ಒಂದು ಶಾಸನವು ಪುಷ್ಟಿ ನೀಡುತ್ತದೆ. ಬಳೆಯನ್ನು ಮಾರುತ್ತಿದ್ದವರನ್ನು ಬಳೆಗಾರರೆಂದು ಕರೆಯಲಾಗುತ್ತಿತ್ತು. ಬಟ್ಟಿ ಎಣೆಯವರನ್ನು ಮೇದರೆಂದು ಕರೆಯಲಾಗುತ್ತಿತ್ತು. ಹೀಗೆ ಹಲವಾರು ಇತರೆ ವರ್ಗಗಳು ಹೊಯ್ಸಳರ ಕಾಲದಲ್ಲಿ ಇರುವುದನ್ನು ಕಾಣಬಹುದಾಗಿದೆ.9

## ವೀರಸೋಮೇಶ್ವರನ ಕಾಲದಲ್ಲಿ ಸ್ತ್ರೀಯರು ಹಾಗೂ ಅವರ ಸಾಮಾಜಿಕ ಸ್ಥಾನಮಾನ

ವೇದಗಳ ಕಾಲದಲ್ಲಿ ಮಹಿಳೆಯರಿಗೆ ಇದ್ದಂತಹ ಸ್ಥಾನಮಾನಗಳೇ ವೀರಸೋಮೇಶ್ವರನ ಕಾಲದಲ್ಲೂ ಮುಂದುವರೆದಿರುವುದನ್ನು ಕಾಣಬಹುದು. ಸಮಾಜದಲ್ಲಿ ಮಹಿಳೆಯು ಗೌರವಸ್ಥೆ ಯಾಗಿದ್ದಳು. ಆದರೆ ಆ ಕಾಲದ ಪುರುಷರಂತೆ ಮಹಿಳೆಯರೂ ಸಮಾನವಾದ ಉತ್ತಮ ಶಿಕ್ಷಣ ವ್ಯವಸ್ಥೆಯನ್ನು ಹೊಂದಿರಲಿಲ್ಲ. ಋಗ್ವೇದ ಮಂತ್ರದ ಋಷಿಗಳಲ್ಲಿ ಅನೇಕ ಮಂದಿ ಸ್ತ್ರೀ ಋಷಿಗಳೂ ಇದ್ದರು. ಋಗ್ವೇದದ ನಂತರ ಇತಿಹಾಸವು ಮಹಿಳೆಯರು ತಾವು ಅನುಭವಿಸಿದ್ದ ಗೌರವಯುತ ಸ್ಥಾನಮಾನಗಳಿಂದ ಕ್ರಮೇಣವಗಿ ಪತನಗೊಳ್ಳುವುದನ್ನು ಚಿತ್ರಿಸುತ್ತದೆ. ಕ್ರಿಶ್ಚಿಯನ್ ಶತಕದ ಆರಂಭದ ಹೊತ್ತಿಗೆ ಮಹಿಳೆಯು ಜನಿವಾರ ವೃತ್ತಕ್ಕೆ ಅನರ್ಹ ಮತ್ತು ಅಶಕ್ಯಗಳೆಂದು ಪರಿಗಣಿಸಲ್ಪಟ್ಟಿದ್ದಳು ಮತ್ತು ವೇದಗಳನ್ನು ಅಭ್ಯಸಿಸಲೂ ಅನರ್ಹಳೆಂದು ಭಾವಿಸಲಾಯಿತು. ಅವಳು ಕೇವಲ ಕುಟುಂಬದ ಒಂದು ಆಭರಣದಂತೆ ಉಳಿದಿದ್ದಿತು. ಹಿಂದೆ ಅನುಭವಿಸಿದ್ದ ಎಲ್ಲಾ ವಿಶೇಷ ಹಕ್ಕುಗಳಿಂದ ವಂಚಿತಳಾದ ವ್ಯಕ್ತಿಯಾದಳು.

ಸೋಮೇಶ್ವರನ ಕಾಲದಲ್ಲಿ ಹೆಂಡತಿ ಮತ್ತು ಸೊಸೆ ಇವರಿಬ್ಬರು ಕುಟುಂಬದಲ್ಲಿ ಗೌರವಯುತವಾದ ಮತ್ತು ಪ್ರಮುಖವಾದ ಸ್ಥಾನವನ್ನು ಹೊಂದಿದ್ದರು. ಅವರಿಗೆ ಗೌರವವಿದ್ದ ಕುಟುಂಬದಲ್ಲಿ ಹೆಣ್ಣಿನ ಜನನವು ಹಿತಕರವಾಗಿರಲಿಲ್ಲ. ಅವಳೊಂದು ಆಭರಣ ಹಾಗೂ ಬೇರೆಯವರ ಸೊತ್ತೆಂದು ಪರಿಗಣಿಸಲಾಗಿತ್ತು. ಇದಕ್ಕೆ ಭಿನ್ನವಾಗಿ ಮಗನು ಮನೆಯಲ್ಲೇ ಇದ್ದು ಅವನ ಪೋಷಕರನ್ನು ಅವರ ಇಳಿ ವಯಸ್ಸಿನಲ್ಲಿ ಸಾಕುವ ಜವಾಬ್ದಾರಿಯನ್ನು ಹೊರುತ್ತಿದ್ದನು. ಹೆಣ್ಣು ಮಗುವು ಮನೆಯಲ್ಲಿ ಒದಗುವ ಎಲ್ಲಾ ಸಮಸ್ಯೆಗಳಿಗೂ ಮೂಲ ಕಾರಣವೆಂಬ ತಪ್ಪು ಕಲ್ಪನೆ ಸಾಮಾನ್ಯವಾಗಿತ್ತು. ಆದರೆ ಇದಕ್ಕೆ ಅಪವಾದವಾಗಿ ಗಂಡು ಮಗುವು ಮನೆಯ ಆಶಾಕಿರಣವಾಗಿತ್ತು. ಪೋಷಕರಿಗೆ ತಮ್ಮ ಮಗಳ ಮದುವೆಯ ನಂತರ ಅವಳು ವಿಧವೆಯಾಗುವುದು ಭಯವನ್ನು ಹುಟ್ಟಿಸುತ್ತಿತ್ತು. ಇದರ ಪರಿಣಾಮವಾಗಿ ಸತಿ ಪದ್ಧತಿಯನ್ನು ಅನುಸರಿಸಲಾಗುತ್ತಿತ್ತು. ಪೋಷಕರು ತೀರಿಕೊಂಡು ನಂತರ ಅವರಿಗೆ ಸಂಬಂಧಿಸಿದಂತೆ ಎಲ್ಲಾ ವಿಧಿ ವಿಧಾನಗಳನ್ನು ಗಂಡು ಮಗನೇ ನೆರವೇರಿಸಬೇಕಾಗಿತ್ತು. ಇದಕ್ಕೆ ನಿದರ್ಶನದಂತೆ ನಮಗೆ ಒಂದು ಶಾಸನವು ಮಾಹಿತಿ ನೀಡುತ್ತದೆ. ಒಬ್ಬ ನಿರ್ದಿಷ್ಟ ವ್ಯಕ್ತಿಯು ನಾಗಸ್ವಾಮಿ ಎಂಬುವನನ್ನು ತನ್ನ ಮಗನನ್ನಾಗಿ ದತ್ತು ಸ್ವೀಕರಿಸಿದನು. ನಂತರ ಬೆಳೆಸಿ ಮದುವೆ ಮಾಡಿದ ತದನಂತರ ಅವನನ್ನು ತನ್ನ ಸಾವಿಗಿಂತ ಮೊದಲು ಗಂಗಾನದಿ ಯಲ್ಲಿ ಪಿಂಡಹಾಕುವ ಆಚರಣೆಯನ್ನು ನೆರವೇರಿಸಿಕೊಡುವಂತೆ ಕೇಳಿಕೊಂಡನು.[10] ತನ್ನ ಪೋಷಕರು ಅನುಸರಿಸಿದ್ದ ದಾನ ಧರ್ಮಗಳನ್ನು ಮಗನೂ ಮುಂದುವರೆಸಿಕೊಂಡು ಹೋಗಬೇಕಾಗಿತ್ತು. ಹಲವಾರು ಶಾಸನಗಳಿಂದ ತಿಳಿಯುವುದೇನೆಂದರೆ ಪೋಷಕರು ಹರಕೆಯನ್ನು ಹೊತ್ತು ತಮಗೆ ಒಂದು ಗಂಡುಮಗುವನ್ನು ದಯಪಾಲಿಸು ಎಂದು ದೇವರನ್ನು ಪ್ರಾರ್ಥಿಸುವುದನ್ನು ನೋಡುತ್ತೇವೆ. ಪುಂಸವನ ಅಥವಾ ಮಗುವಿನ ಜನನಪೂರ್ವ ಆಚರಣೆಯನ್ನು ಗಂಡು ಮಗು ಹುಟ್ಟಲೆಂದೇ ಮಾಡಲಾಗುತ್ತಿತ್ತು.

ವೇದಗಳ ಕಾಲದಲ್ಲಿ ಮಹಿಳೆಯರು ಪುರುಷರಂತೆ ಉತ್ತಮವಾದ ಶಿಕ್ಷಣವನ್ನು ಹೊಂದಿದ್ದರು. ಶಾಸ್ತ್ರಗಳನ್ನು ಅಭ್ಯಸಿಸುವ ಹಕ್ಕನ್ನು ಹೊಂದಿದ್ದರು. ಆದರೆ ನಂತರ ಅವರು ಶಿಕ್ಷಣ ವನ್ನು ಗಳಿಸಲು ಅನರ್ಹರೆಂದು ಪರಿಗಣಿಸಲಾಯಿತು ಮತ್ತು ಕೇವಲ ಅವರು ಪರಾವಲಂಬಿಗಳಾಗಿ ಉಳಿಯಬೇಕೆಂದು ಸ್ಮೃತಿಗಳು ನಿರ್ಧರಿಸಿದವು. ಮನುವಿನ ಪ್ರಕಾರ ಅವಳು ಬಾಲ್ಯದಲ್ಲಿ ಪೋಷಕರ ಆಸರೆಯಲ್ಲಿರಬೇಕು. ನಂತರ ತನ್ನ ಗಂಡನ ಆಸರೆಯಲ್ಲಿರಬೇಕು ಮತ್ತು ಅವಳು ವಿಧವೆಯಾದ ಪಕ್ಷದಲ್ಲಿ ತನ್ನ ಮಕ್ಕಳ ಜೊತೆ ಇರಬೇಕು. ಮನೆಯ ಕೆಲಸವನ್ನು ಯಾವುದೇ ಹಂತದಲ್ಲೂ ಅವಳು

ಸ್ವತಂತ್ರ್ಯವಾಗಿ ಮಾಡುವಂತಿಲ್ಲ. ಈ ನಿರ್ಬಂಧಗಳು ಭಾರತೀಯ ಸಮಾಜದಲ್ಲಿ ಬಲವಾಗಿ ಬೇರೂರಿವೆ. ಆದ ಕಾರಣ ಮಹಿಳೆಯರು ಒಂದಲ್ಲ ಒಂದು ರೀತಿಯಲ್ಲಿ ಒಬ್ಬರಲ್ಲ ಇನ್ನೊಬ್ಬರ ಮೇಲೆ ಅವಲಂಬಿತಳಾಗಿದ್ದಾಳೆ. ಈ ರೀತಿಯಾಗಿ ಸಾಮಾನ್ಯವಾಗಿ ಅವಳು ನಿರಕ್ಷಕಿಯಾದಳು. ಅವಳು ಉತ್ತಮ ಗೃಹಿಣಿಯಾಗುವುದು ಸಮಾಜದ ತೃಪ್ತಿಯಾಗಿತ್ತು. ಗೃಹಿಣಿಯು ಶಿಕ್ಷಣವನ್ನು ಹೊಂದಿರಬೇಕೆಂದು ಯಾವುದೇ ನಿರ್ಬಂಧವಿರಲಿಲ್ಲ. ಸಾಮಾನ್ಯವಾಗಿ ಕೆಳವರ್ಗದ ಮಹಿಳೆಯರು ಅಂಧರಾಗಿಯೂ, ಅಶಿಕ್ಷಿತರಾಗಿಯೂ ಹಾಗೂ ಅವಿದ್ಯಾವಂತರಾಗಿಯೂ ಉಳಿದರು. ಆದರೆ ಮೇಲ್ವರ್ಗದ, ಅಧಿಕಾರ ವರ್ಗದ ಮತ್ತು ಆಡಳಿತ ವರ್ಗದ ಕುಟುಂಬದ ಮಹಿಳೆಯರು ಶಿಕ್ಷಣವನ್ನು ಹೊಂದಿದ್ದರು. ಅವರ ಶಿಕ್ಷಣವು ಮುಖ್ಯವಾಗಿ ಸಾಮಾನ್ಯ ಶಿಕ್ಷಣದ ಜೊತೆಗೆ ಲಲಿತಕಲೆ. ಇವುಗಳಲ್ಲಿ ಸಂಗೀತ ಮತ್ತು ನೃತ್ಯ ಮುಖ್ಯವಾಗಿದ್ದವು. ಇವರಲ್ಲಿ ಕೆಲವರು ತಮ್ಮ ತಮ್ಮ ಕಲಿಕೆಯ ಕ್ಷೇತ್ರದಲ್ಲಿ ಪ್ರತಿಪಾದಕರಾಗಿದ್ದರು. ರಾಜಮನೆತನದ ಮಹಿಳೆಯರು ರಾಜಕೀಯ, ಧಾರ್ಮಿಕ ಕುಟುಂಬಗಳಲ್ಲಿ ಆಡಳಿತದ ಕೆಲಸವನ್ನು ನಿರ್ವಹಿಸುತ್ತಿದ್ದರು. ಪೆರಿಯ ಕೇತಲಾದೇವಿಯು 'ಅಭಿನವ ಸರಸ್ವತಿ' ಮತ್ತು 'ಸಂಗೀತ ವಿದ್ಯಾಧರಿ'[11] ಎಂಬ ಬಿರುದುಗಳನ್ನು ಹೊಂದಿದ್ದಳು. ದಂಡನಾಯಕ ನಾದ ರವಿದೇವನ ಹೆಂಡತಿಯಾದ ರೆಬ್ಬಲಾದೇವಿಯು ಪ್ರತಿಭಾ ಸರಸ್ವತಿ ಎಂಬ ಬಿರುದನ್ನು ಹೊಂದಿ ಮತ್ತು ಅಂಧಕಾರದ ಕಳಂಕವನ್ನು ಹೊಡೆದೋಡಿಸಿದವಳು ಎಂದು ಪ್ರಶಂಸಿಸಲಾಗಿದೆ. ಜ್ಞಾನದ ಅಧಿದೇವತೆಯಾದ ಸರಸ್ವತಿಯ ಕೈಯಲ್ಲಿರುವ ವೀಣೆಗೆ ಅವಳನ್ನು ಹೋಲಿಸಲಾಗಿದೆ.[12] ಸಾಮಂತ ನಾದ ಗಂಗ ಪೆರ್ಮಾಡಿಯ ಹೆಂಡತಿಯಾದ ಬಚಲಾದೇವಿಯು ತನ್ನ ಕುಶಲತೆಯನ್ನು ನೃತ್ಯದಲ್ಲಿ ಪ್ರದರ್ಶಿಸಿದ್ದಳು.[13] ಸಾಮಾನ್ಯ ವರ್ಗದ ಮಹಿಳೆಯರಲ್ಲಿ ದೇವದಾಸಿಯರು ಹಾಡುವುದರಲ್ಲಿ ಮತ್ತು ನರ್ತನದಲ್ಲಿ ಪರಿಣಿತಿಯನ್ನು ಹೊಂದಿದ್ದರು. ಅವರು ಮೋಹಕ ಗೀತೆಗಳನ್ನು ಸಪ್ತಸ್ವರಗಳ ಕೃತಿ ಯೊಂದಿಗೆ ಹಾಡುತ್ತಿದ್ದರು. ಇನ್ನಿತರ ಮಹಿಳೆಯರು ಹೆಚ್ಚಾಗಿ ಯಾವುದೇ ಶಿಕ್ಷಣವಿಲ್ಲದೆ ಉಳಿದರು.

**ವಿವಾಹ**

ವೇದಗಳ ಕಾಲದಲ್ಲಿ ಬಾಲ್ಯ ವಿವಾಹ ಪದ್ಧತಿಯು ರೂಢಿಯಲ್ಲಿರಲಿಲ್ಲ. ಮದುವೆಯ ವಯಸ್ಸನ್ನು ತಲುಪಿದ ಯುವಕ ಮತ್ತು ಯುವತಿಯರನ್ನು ಮದುವೆ ಮಾಡಲಾಗುತ್ತಿತ್ತು. ಕೇವಲ ಕ್ರಿಶ್ಚಿಯನ್ ಶತಕದ ಆರಂಭದ ನಂತರವಲ್ಲದೆ ಯಜ್ಞವಾರ್ಯ ಮತ್ತು ಇನ್ನಿತರ ಸ್ಮೃತಿಗಳ ಬರಹಗಾರರು ಪ್ರೌಢಾವಸ್ಥೆಗೆ ಮೊದಲೇ ಮದುವೆಯಾಗುವುದನ್ನು ಪ್ರಸ್ತಾಪಿಸಿದ್ದರು. ಒಳ್ಳೆಯ ಗಂಡು ದೊರಕದಿದ್ದರೂ ಈ ಪದ್ಧತಿಯನ್ನು ಅನುಸರಿಸಬೇಕೆಂದು ಅವರಲ್ಲಿ ಕೆಲವರು ಹೇಳಿದರು.

ಆಲ್ಬೆರೊನಿ ಹೇಳುವಂತೆ ಹಿಂದೂಗಳು ಬಹಳ ಚಿಕ್ಕ ವಯಸ್ಸಿನಲ್ಲಿ ಮದುವೆಯನ್ನು ಮಾಡುತ್ತಿದ್ದರು. ಬ್ರಾಹ್ಮಣ ವಧುವಿನ ಸಾಮಾನ್ಯ ವಯಸ್ಸು 12 ವರ್ಷಗಳಾಗಿದ್ದವು.[14] ಈ ಸಾಕ್ಷಿಯು ಬಲವಾದ ಆಧಾರವನ್ನು ಹೊಂದಿರುವುದನ್ನು ನಾವು ಕಾಣುತ್ತೇವೆ. ವಿಷ್ಣುವರ್ಧನನು ಬಿಟ್ಟಿಯಣ್ಣನನ್ನು ಪೋಷಿಸಿ, ಬೆಳೆಸಿ, ಆತನಿಗೆ ಆತನ ಮಂತ್ರಿಯ ಮಗಳ ಜೊತೆ 15ನೇ ವಯಸ್ಸಿಗೆ ಮದುವೆ ಮಾಡಿರುವುದನ್ನು ಶಾಸನಗಳು ಸಮರ್ಥಿಸುತ್ತವೆ. ಸಾಮಾನ್ಯವಾಗಿ ಹುಡುಗರು 15–20 ವರ್ಷದವ ರಾಗಿದ್ದಾಗ, ಮತ್ತು ಹುಡುಗಿಯರು 12–16 ವರ್ಷದವರಾಗಿದ್ದಾಗ ಮದುವೆ ಮಾಡಲಾಗುತ್ತಿತ್ತು. ಈ ಅವಧಿಯಲ್ಲಿ ಅಂತರ್ ಜಾತಿಯ ವಿವಾಹಪದ್ಧತಿ ರೂಢಿಯಲ್ಲಿರಲಿಲ್ಲ. ಆಲ್ಬೆರೊನಿಯ ಪ್ರಕಾರ ಪ್ರತಿಯೊಬ್ಬ ಪುರುಷನೂ ತನ್ನ ಜಾತಿಯ ಮಹಿಳೆ ಅಥವಾ ತನ್ನ ಜಾತಿಗಿಂತ ಕೆಳಮಟ್ಟದ ಜಾತಿಗಳ ಮಹಿಳೆಯನ್ನು ಮದುವೆಯಾಗಬಲ್ಲವನಾಗಿದ್ದ, ಆದರೆ ತನ್ನ ಜಾತಿಗಿಂತ ಮೇಲ್ಮಟ್ಟದ ಮಹಿಳೆಯನ್ನು ವಿವಾಹವಾಗಲೂ ಯಾರಿಗೂ ಅವಕಾಶವಿರಲಿಲ್ಲ. ಬ್ರಾಹ್ಮಣರು ಇತರೆ ಮೂರು ವರ್ಗಗಳಲ್ಲಿ ವಿವಾಹವಾಗುತ್ತಿರಲಿಲ್ಲ. ಅಂತೆಯೇ ಅನುಕ್ರಮವಾಗಿ ಇತರೆ ಜಾತಿಯವರು ಬ್ರಾಹ್ಮಣರನ್ನು ವಿವಾಹವಾಗುತ್ತಿರಲಿಲ್ಲ.[15] ವಿವಾಹ ಕಾನೂನಿನ ಪ್ರಕಾರ ಸಂಬಂಧಿಕನಿಗಿಂತ ಅಪರಿಚಿತನನ್ನು ವಿವಾಹವಾಗುವುದು ಉತ್ತಮವೆಂದು ಪರಿಗಣಿಸಲಾಗಿತ್ತು. ದೂರದ ಸಂಬಂಧವು ವಿವಾಹದ ದೃಷ್ಟಿಯಿಂದ ಉತ್ತಮವಾಗಿತ್ತೆಂದು ನಂಬಲಾಗಿತ್ತು. ಒಂದೇ ಪೀಳಿಗೆಗೆ ಮತ್ತು ತಲೆಮಾರಿಗೆ ಸಂಬಂಧಿಸಿದ ಮಹಿಳೆಯರನ್ನು ವಿವಾಹವಾಗುವುದನ್ನು ಸಂಪೂರ್ಣ ವಾಗಿ ನಿಷೇಧಿಸಲಾಗಿತ್ತು. ರಾಜಮನೆತನದವರ ಮದುವೆಯ ಸಂದರ್ಭಗಳಲ್ಲಿ ಧರ್ಮವು ಯಾವುದೇ ರೀತಿಯ ಅಡ್ಡಿಯನ್ನುಂಟು ಮಾಡುತ್ತಿರಲಿಲ್ಲ. ಶೈವರು, ಜೈನರು ಮತ್ತು ವೈಷ್ಣವರಲ್ಲಿ ಧಾರ್ಮಿಕ ಭಿನ್ನತೆಗಳು ಅವರ ಪರಸ್ಪರ ವಿವಾಹ ಸಂದರ್ಭಗಳಲ್ಲಿ ಯಾವುದೇ ತೊಡಕನ್ನು ಉಂಟು ಮಾಡುತ್ತಿಲ್ಲ. ಇದಕ್ಕೆ ಅತ್ಯುತ್ತಮ ಉದಾಹರಣೆ ಅಂದರೆ ವೀರಸೋಮೇಶ್ವರನ ಹಿಂದೆ ಆಳಿದ ವಿಷ್ಣುವರ್ಧನ. ಈತನು ಮೂಲತಃ ವೈಷ್ಣವನಾಗಿದ್ದು ಈತನ ಹೆಂಡತಿಯಾದ ಶಾಂತಲೆಯು ಶೈವ ಳಾಗಿದ್ದಳು. ಈ ಪದ್ಧತಿಯು ಜನಸಾಮಾನ್ಯರಲ್ಲೂ ರೂಢಿಯಲ್ಲಿತ್ತೆಂದು ಕಾಣಸಿಗುತ್ತದೆ.

ಶಾಪಗ್ರಸ್ಥ ಪದ್ಧತಿಯಾದ 'ವರದಕ್ಷಿಣೆ'ಯು ಆಗಿನ ಕಾಲದಲ್ಲಿ ಇರಲಿಲ್ಲ. ಈ ಕಾಲದಲ್ಲಿ ಅಸ್ತಿತ್ವದಲ್ಲಿದ್ದ ಪದ್ಧತಿಯೆಂದರೆ ವರನ ಪೋಷಕರು ಸೂಕ್ತ ವಧುವಿಗಾಗಿ ಹುಡುಕಾಟವನ್ನು ನಡೆಸುತ್ತಿದ್ದರು. ಆನಂತರ ವಧುದಕ್ಷಿಣೆ ಅಥವಾ ಕನ್ಯಾಶುಲ್ಕವನ್ನು ಅವರೇ ಕೊಡುತ್ತಿದ್ದರು. ಇದು ಹೆಣ್ಣುಮಕ್ಕಳ ಮಾರಾಟಕ್ಕೆ ನಾಂದಿ ಎಂದು ಟೀಕಿಸಲಾಗಿದೆ. ವಧುವಿನ ಮನೆಯವರು ಹಣವನ್ನು

ಸ್ವೀಕರಿಸುವ ಪದ್ಧತಿಯು ಕರ್ನಾಟಕದಿಂದ ಇನ್ನೂ ಕಣ್ಮರೆಯಾಗಿಲ್ಲ. ವಿವಾಹದ ನಂತರ ವರನಿಗೆ ಉಡುಗೊರೆಗಳನ್ನು ಕೊಡುವುದರ ಮೂಲಕ ಗೌರವಿಸಲಾಗುತ್ತಿತ್ತು. ಮುಮ್ಮುರಿ ರಾಜನು ಕದಂಬ ರಾಜಕುಮಾರ ಬಿಟ್ಟಯ್ಯದೇವನಿಗೆ ಅವನ ಮದುವೆಯ ನಂತರ 5 ಲಕ್ಷ ಚಿನ್ನದ ನಾಣ್ಯಗಳನ್ನು ಕೊಟ್ಟನು. ಚಟ್ಟಯ್ಯದೇವನ ಮಗ ಜಯಕೇಶಿಯು ತನ್ನ ಅಳಿಯನಾದ ಚೆರ್ಮಾಡಿದೇವನಿಗೆ ಅಪರಿಮಿತ ಉಡುಗೊರೆಗಳನ್ನು ನೀಡಿದನು.[16] ಇನ್ನೊಂದು ಶಾಸನವು ಹೇಳುವಂತೆ ದೇವಶೆಟ್ಟಿ ಮತ್ತು ಗೌರಮ್ಮ ಇವರೀರ್ವರು ಮದುವೆಯಾದಾಗ ಪ್ರತ್ಯೇಕ ಉಡುಗೊರೆಗಳನ್ನು ಇವರಿಗೆ ಕೊಡಲಾಯಿತು.[17]

## ಬಹುಪತ್ನಿತ್ವ

ಮನುವಿನ ಪ್ರಕಾರ ಬಹುಪತ್ನಿತ್ವವು ಸಾಧ್ಯವಿತ್ತು. ಒಂದೇ ಜಾತಿಯ ಹೆಣ್ಣಿನೊಂದಿಗೆ ಮದುವೆಯಾಗುವುದರ ಜೊತೆಗೆ ಆ ಜಾತಿಯ ಕೆಳಜಾತಿಯ ಹುಡುಗಿಯೊಂದಿಗೆ ವಿವಾಹವಾಗ ಬಹುದಿತ್ತು. ಈ ರೀತಿಯಾಗಿ ಒಬ್ಬ ಬ್ರಾಹ್ಮಣನು ತನ್ನ ಜಾತಿಯ ಕನ್ಯೆಯೊಂದಿಗೆ ವಿವಾಹವಾಗು ವುದರ ಜೊತೆಗೆ ಇನ್ನೂ ಮೂರು ಕನ್ಯೆಯರನ್ನು ತನಗಿಂತ ಕೆಳಜಾತಿಯಲ್ಲಿ ಮದುವೆಯಾಗ ಬಹುದಿತ್ತು. ಕ್ಷತ್ರಿಯನೊಬ್ಬನು ಇಬ್ಬರನ್ನು ವಿವಾಹವಾಗಬಹುದಿತ್ತು ಮತ್ತು ವೈಶ್ಯನು ಶೂದ್ರ ಜಾತಿಯ ಒಬ್ಬಳನ್ನು ಮಾತ್ರ ವಿವಾಹವಾಗಬಹುದಿತ್ತು. ಆದರೆ ಶೂದ್ರನು ಒಂದಕ್ಕಿಂತ ಮಿಗಿಲಾಗಿ ವಿವಾಹವಾಗುವಂತಿರಲಿಲ್ಲ. ಈ ರೀತಿಯಾದ ವಿವಾಹವನ್ನು ಅನುಲೋಮ ವಿವಾಹ ಎಂದು ಕರೆಯ ಲಾಗಿದೆ. ಆದರೆ ಒಬ್ಬ ಹೆಂಡತಿಗಿಂತ ಹೆಚ್ಚು ಹೆಂಡತಿಯರನ್ನು ವಿವಾಹವಾಗಲು ಅವಕಾಶವನ್ನು ಎಲ್ಲರೂ ಸದುಪಯೋಗಪಡಿಸಿಕೊಳ್ಳಲಾಗಲಿಲ್ಲ. ಎಲ್ಲವೂ ವ್ಯಕ್ತಿಯ ಆರ್ಥಿಕ ಸುಭದ್ರತೆಯ ಆಧಾರದ ಮೇಲೆ ಅವಲಂಬಿಸಿತ್ತು. ಈ ರೀತಿಯಾಗಿ ಬಹುಪತ್ನಿತ್ವವು ತನ್ನ ಅಸ್ತಿತ್ವದಿಂದ ಕಣ್ಮರೆ ಯಾಯಿತು. ಮೊದಲ ಹೆಂಡತಿಯಿಂದ ಗಂಡು ಸಂತತಿಯು ದೊರಕದಿದ್ದಾಗ ಒಂದಕ್ಕಿಂತ ಹೆಚ್ಚಾಗಿ ಮದುವೆಯಾಗುವ ಅಭ್ಯಾಸವು ಸಾಮಾನ್ಯ ಜನರಲ್ಲಿತ್ತು. ಅರಸರು ಮತ್ತು ರಾಜಕುಮಾರರು ಒಂದಕ್ಕಿಂತ ಹೆಚ್ಚು ಹೆಂಡತಿಯರನ್ನು ಹೊಂದುವ ಅಭ್ಯಾಸವನ್ನು ಮುಂದುವರಿಸಿಕೊಂಡು ಬಂದಿರುವುದನ್ನು ಕಾಣಬಹುದು. ಹಿರಿಯವಳನನ್ನು ರಾಜ ಸಹಧರ್ಮಿಣಿ ಅಥವಾ ಧರ್ಮಪತ್ನಿ ಎಂದು ಕರೆಯುತ್ತಿದ್ದರು. 'ಸವತಿಗಂಡ-ವಾರಣಿ', 'ಸವತಿಮಾದಭಂಜನೆ', ಎಂಬ ಪದಗಳು ರಾಣಿಯರಲ್ಲಿ ಮನೆಮಾಡಿದ್ದ ಅಸೂಯೆಗೆ ಹಿಡಿದ ಕನ್ನಡಿಯಾಗಿವೆ. ವೀರಸೋಮೇಶ್ವರನು ಒಂದಕ್ಕಿಂತ ಹೆಚ್ಚು ರಾಣಿಯರನ್ನು ಹೊಂದಿದ್ದನು. ಕೆಲವು ಸಮಯದಲ್ಲಿ ಒಬ್ಬನೇ ವ್ಯಕ್ತಿಯು

ಸಹೋದರಿಯರನ್ನು ವಿವಾಹವಾಗಿರುವುದನ್ನು ಕಾಣಬಹುದು. ಪಾಳಿಯಣ್ಣನೆನ್ನುವನೊಬ್ಬನು ಕಾಳಿಯಬ್ಬೆ ಮತ್ತು ಮಲ್ಲಿಯಬ್ಬೆ ಎಂಬ ಇಬ್ಬರು ಸಹೋದರಿಯರನ್ನು ವಿವಾಹವಾದನು.[18] ಬೆಂಟೆಯ ತಿಪ್ಪನಾಯಕನಿಗೆ ಈರ್ವರು ಹೆಂಡತಿಯರಿದ್ದರು.[19] ಸಾಮಂತನಾದ ಇಡೇವರದೇವನು ಮೂವರು ಹೆಂಡತಿಯರನ್ನು ಹೊಂದಿದ್ದನು.[20]

ಮದುವೆಯ ತೆರಿಗೆಯು ರೂಢಿಯಲ್ಲಿತ್ತು. ಅದನ್ನು 'ಬಾಸಿಗದೆರೆ' ಅಥವಾ 'ಮಧುವನ' ಎಂದು ಕರೆಯುತ್ತಿದ್ದರು.[21] ಈ ಪದ್ಧತಿಯು ಸ್ಥಳೀಯರು ಅಥವಾ ಹಳ್ಳಿಗರಿಂದ ಏರ್ಪಡಲ್ಪಟ್ಟಿತ್ತು. ಈ ರೀತಿಯಾಗಿ ಸಂಗ್ರಹವಾದ ತೆರಿಗೆಯ ಹಣವನ್ನು ಕೆರೆಯನ್ನೋ ಅಥವಾ ದೇಗುಲವನ್ನೋ ನಿರ್ಮಿಸಲು ಉಪಯೋಗಿಸಲಾಗುತ್ತಿತ್ತು. ಆ ಕಾಲದ ಕೆಲವು ಶಾಸನಗಳಲ್ಲಿ ಈ ರೀತಿಯ ವಿವಾಹ ತೆರಿಗೆಗಳ ಬಗ್ಗೆ ಉಲ್ಲೇಖವಿದೆ. ಬಡಜನರಿಗೆ ಮತ್ತು ಬಡಬ್ರಾಹ್ಮಣರಿಗೆ ಮದುವೆಯ ಉದ್ದೇಶಕ್ಕಾಗಿ ಹಣಸಹಾಯ ಮಾಡುವುದು ಹೆಚ್ಚು ಗೌರವಯುತವಾದ ಕಾರ್ಯವೆಂದು ಜನರು ನಂಬಿದ್ದರು.[22]

## ವಿವಾಹ ಜೀವನ

ಹಿಂದೂ ಜನಾಂಗದಲ್ಲಿ ವಿವಾಹವು ಒಂದು ಪವಿತ್ರ ಕಾರ್ಯವಾಗಿದೆ. ಇದು ಗಂಡು ಮತ್ತು ಹೆಣ್ಣಿನ ಮಧ್ಯೆ ನಡೆಯುವ ಕೇವಲ ಒಪ್ಪಂದವಲ್ಲ. ಇದು ಒಂದು ಪವಿತ್ರ ಬಂಧನ. ಮದುವೆಯ ಶಾಸ್ತ್ರಗಳಲ್ಲಿ ಸಪ್ತಪದಿಯ ಶಾಸ್ತ್ರವು ಬಹಳ ಪ್ರಮುಖವಾದ ಆಚರಣೆಯಾಗಿದೆ. ಸಪ್ತಪದಿಯ ಶಾಸ್ತ್ರವು ಮುಗಿಯದೆ ಮದುವೆಯು ಪೂರ್ಣಗೊಳ್ಳಲು ಸಾಧ್ಯವಿಲ್ಲ. ವಧುವಿಗೆ ವರನು ತನ್ನ ಹೃದಯಾಂತರಾಳದ ಸಾಮ್ರಾಜ್ಞೆಯನ್ನಾಗಿರಿಸುವ ವಚನವನ್ನು ನೀಡುತ್ತಾನೆ ಮತ್ತು ಅದೇ ರೀತಿಯಲ್ಲಿ ಅವಳ ಮನಸ್ಸು ತನ್ನ ಮನಸ್ಸನ್ನು ಅನುಸರಿಸಬೇಕೆಂದು ಹಂಬಲಿಸುತ್ತಾನೆ. ಯಜ್ಞವಲ್ಕನ ಪ್ರಕಾರ ಇದು ವರ ಮತ್ತು ವಧುವಿನ ಮಾನಸಿಕ ಬಂಧನವನ್ನು ಸೂಚಿಸುತ್ತದೆ. ಸತಿಪತಿಯ ಮಧ್ಯೆ ಪ್ರೀತಿ ಮತ್ತು ಏಕತೆಯ ಆದರ್ಶವನ್ನು ಸ್ಮೃತಿಕಾರರು ಎತ್ತಿ ಹಿಡಿದಿದ್ದಾರೆ. ಮದುವೆಯ ಬಗ್ಗೆ ಆಲ್ಬೆರೊನಿಯು ಈ ಕೆಳಕಂಡಂತೆ ಹೇಳಿದ್ದಾನೆ. "ಒಂದು ಕ್ರಮವಾದ ಮದುವೆಯ ಜೀವನವಿಲ್ಲದೆ ಯಾವುದೇ ರಾಷ್ಟ್ರದ ಉಳಿವು ಸಾಧ್ಯವಿಲ್ಲ. ಏಕೆಂದರೆ ಇದು ಮನಸ್ಸು ಕಲ್ಪಿಸುವ ಅತಿ ಮೋಹವನ್ನು ತಡೆಗಟ್ಟುತ್ತದೆ ಮತ್ತು ಪ್ರಾಣಿಯನ್ನು ಪ್ರಚೋದಿಸುವ ಎಲ್ಲ ಕಾರಣಗಳನ್ನು ಇದು ಹೊಡೆದೋಡಿಸುತ್ತದೆ. ಪ್ರಾಣಿಗಳ ಜೀವನವನ್ನು ಅವುಗಳ ಜೋಡಿಗಳ ಆಧಾರದ ಮೇಲೆ ಅವು ಯಾವ ರೀತಿ ಜೋಡಿಯ ಒಂದು ಪ್ರಾಣಿಯು ಇನ್ನೊಂದಕ್ಕೆ ಸಹಾಯ ಮಾಡುತ್ತದೆ ಮತ್ತು ಅದೇ ರೀತಿಯಲ್ಲಿ

ಯಾವ ರೀತಿ ಒಂದರ ಕಾಮವು ಮತ್ತೊಂದರಿಂದ ದೂರವಿರುತ್ತದೆ ಎಂಬುದನ್ನು ಪರಿಗಣಿಸಿದಾಗ ವಿವಾಹವು ಅತ್ಯವಶ್ಯಕ ಎಂಬುದನ್ನು ಒಪ್ಪಿಕೊಳ್ಳದೇ ಬೇರೆ ಮಾರ್ಗವಿಲ್ಲ.[23] ಆದರೆ ಅವ್ಯವಸ್ಥಿತವಾದ ವಿವಾಹ ಜೀವನ ಅಥವಾ ವೇಶ್ಯೆಯರ ಸಹವಾಸವು ಪುರುಷನ ಪಾಲಿಗೆ ನಾಚಿಕೆ ತರುವ ಕೆಲಸವಾಗಿದೆ. ಇದು ಪ್ರಾಣಿಗಳ ವಿಕಾಸದ ಮಟ್ಟಕ್ಕೂ ನಿಲುಕದು ಮತ್ತು ಎಲ್ಲಾ ರೀತಿಯಲ್ಲೂ ಕೆಳಮಟ್ಟದಲ್ಲಿದೆ." ಮದುವೆಯ ಬಂಧನವು ಉಲ್ಲಂಘನೀಯ ಹಾಗೂ ಪತಿಪತ್ನಿಯರನ್ನು ಸಾವಿನಲ್ಲಿ ಮಾತ್ರ ಬೇರ್ಪಡಿಸಲು ಸಾಧ್ಯವಾಗಿತ್ತು.

ವಿವಾಹ ಜೀವನದ ಧ್ಯೇಯವೇನೆಂದರೆ ಪತಿಪತ್ನಿಯರ ಸಂಪೂರ್ಣ ಸೌಹಾರ್ದ ಜೀವನವನ್ನು ದಯಪಾಲಿಸುವುದು ಮತ್ತು ಮಕ್ಕಳನ್ನು ಹಡೆಯುವ ಮತ್ತು ಅವರಿಗೆ ಸರಿಯಾದ ಶಿಕ್ಷಣವನ್ನು ಕೊಡಿಸುವ ಕಾರ್ಯವನ್ನು ದಂಪತಿಗಳಿಗೆ ವಹಿಸುವುದರ ಮುಖೇನ ಸಮಾಜದ ಉಳಿವು ಮತ್ತು ಮುನ್ನಡೆಯನ್ನು ಸಾಧಿಸುವುದಾಗಿತ್ತು. ಗಂಡು ಮಕ್ಕಳು ತಮ್ಮ ಸ್ವರ್ಗಸ್ಥರಾದ ಪೂರ್ವಜರಿಗೆ ಮಾಹೆ ಯಾನ ತಿಥಿ ಮೊದಲಾದ ಕಾರ್ಯಗಳನ್ನು ಮಾಡಬೇಕಾಗಿತ್ತು. ಗಂಡ ಮತ್ತು ಹೆಂಡತಿಯರಿಬ್ಬರು ಪರಸ್ಪರ ಪ್ರಾಣ ಸ್ನೇಹಿತರಂತೆ ಇರಬೇಕಾಗಿತ್ತು. ಅವರ ಆಸೆಯನ್ನು ಈಡೇರಿಸಿಕೊಳ್ಳುವುದು ಎಲ್ಲಾ ಸಂಬಂಧದ ತಿರುಳಾಗಿತ್ತು. ಇದೊಂದು ಯಥಾರ್ಥವಾದ ಭಂಡಾರವಾಗಿತ್ತು ಮತ್ತು ಇಡೀ ಜೀವನವು ಇದನ್ನು ಆಧರಿಸಿತ್ತು.

ಈ ಕಾಲದ ಶಾಸನಗಳು ಮದುವೆಯ ಜೀವನದ ಈ ಆದರ್ಶವನ್ನು ಹೇಳುತ್ತವೆ. ಗಂಡ ಮತ್ತು ಹೆಂಡತಿಯರ ಕರ್ತವ್ಯಗಳನ್ನು ಒತ್ತಿ ಹೇಳಲಾಗಿದೆ. ಗಂಡನು ಹೆಂಡತಿಯನ್ನು ಪೋಷಿಸುವ ಪವಿತ್ರ ಕರ್ತವ್ಯವನ್ನು ಮಾಡಬೇಕು. ಸತಿಯಾದವಳು ಪತಿವ್ರತೆಯ ಜೀವನವನ್ನು ಸಾಗಿಸಬೇಕು. ತಾನು ಹುಟ್ಟಿದ ಮತ್ತು ಇರುವ ಎರಡು ಮನೆಗಳಿಗೂ ಅಪಕೀರ್ತಿ ಬರದಂತೆ ಬಾಳಬೇಕು. ತಮ್ಮ ಗಂಡಂದಿರಿಗಿಂತ ಮೊದಲು ತೀರಿಕೊಂಡ ಮಹಿಳೆಯರ ನೆನಪಿನಲ್ಲಿ ಅವರ ಉದಾತ್ತ ಗುಣಗಳನ್ನು ಸಾರುವ ಸ್ಮಾರಕ ಕಲ್ಲುಗಳನ್ನು ನೆಡಲಾಯಿತು. ವಿವೇಕದಲ್ಲಿ ಶಾಂತಲೆಯನ್ನು ಬೃಹಸ್ಪತಿ ಎಂದು ಹೊಗಳಲಾಗಿದೆ.[24] ಗಂಗಾ ಸೇನಾಪತಿಯ ಪತ್ನಿಯಾದ ಲಕ್ಷ್ಮೀದೇವಿಯನ್ನು ಅವಳ ಕರ್ತವ್ಯ ಪ್ರಜ್ಞೆಗಾಗಿ ಹೊಗಳಲಾಗಿದೆ.[25]

## ವಿಚ್ಛೇದನ

ಪತಿ ಪತ್ನಿಯರಿಗೆ ವಿವಾಹ ವಿಚ್ಛೇದನವು ಇಲ್ಲದ ಕಾರಣ, ಸಾವೊಂದೇ ವಿವಾಹ ಬಂಧನ ವನ್ನು ಬೇರ್ಪಡಿಸಬಹುದಾಗಿತ್ತು. ಮೊದಲ ಹೆಂಡತಿಯ ಜೀವಿತ ಅವಧಿಯಲ್ಲಿ ಗಂಡನು ಪುನಃ ವಿವಾಹಕ್ಕೆ ಅವಕಾಶವಿತ್ತಾದರೂ ಈಗಿನ ವಿಚ್ಛೇದನದಂತೆ ಹೆಂಡತಿಗೆ ಯಾವುದೇ ರೀತಿಯ ಪರಿಹಾರ ವಿರಲಿಲ್ಲ. ಈ ರೀತಿ ತೊರೆಯಲ್ಪಟ್ಟ ಹೆಂಡತಿಗೆ ಯಾವುದೇ ನಿರ್ದಿಷ್ಟ ಭವಿಷ್ಯವಿಲ್ಲದೇ ಅವಳು ಅಬಲೆಯಾಗುತ್ತಿದ್ದಳು. ಅವಳ ಜೀವನಕ್ಕಾಗಿ ಅಂದಿನ ಸಮಾಜವು ಯಾವುದೇ ರೀತಿಯ ತಿದ್ದುಪಡಿ ಯನ್ನು ಮಾಡಲಿಲ್ಲ. ಅವಳ ಗಂಡನ ಅಲ್ಪ ಅನುಕಂಪ ಮತ್ತು ಮನೆಯವರ ಅತ್ಯಲ್ಪ ಅನುಕಂಪಕ್ಕೆ ತುತ್ತಾಗಿ ಒಬ್ಬಂಟಿಯಾಗಿ ಉಳಿದಳು.

## ವಿಧವೆಯರು

ವೀರಸೋಮೇಶ್ವರನ ಕಾಲದಲ್ಲೇ ಏಕೆ, ಇಡೀ ದಕ್ಷಿಣ ಭಾರತದಲ್ಲೂ ಸಹ ಸತಿಪದ್ಧತಿ ಅಥವಾ ಸಹಗಮನ ಪದ್ಧತಿಯು ಅಷ್ಟೇನೂ ಪ್ರಸಿದ್ಧಿಯನ್ನು ಹೊಂದಿರಲಿಲ್ಲ. ಈ ಪದ್ಧತಿಯ ಆಯ್ಕೆ ಯನ್ನು ಸ್ವತಂತ್ರವಾಗಿ ವಿಧವೆಗೆ ಬಿಡಲಾಗುತ್ತಿತ್ತು. ಈ ಪದ್ಧತಿಯು ಹೆಚ್ಚು ಕಡಿಮೆ ಐಚ್ಛಿಕವಾಗಿತ್ತು. ಸತಿಸಹಗಮನ ಪದ್ಧತಿಯನ್ನು ಅನುಸರಿಸದ ವ್ಯಕ್ತಿಗಳು ಈ ಪದ್ಧತಿಯನ್ನು ಅನುಸರಿಸಿದರ ಬಗ್ಗೆ ಕೆಲವೇ ಕೆಲವು ದಾಖಲೆಗಳು ನಮಗೆ ದೊರೆಯುತ್ತವೆ. ಇದು ಕುಸ್ತಿಯ ವರ್ಗಗಳಿಂದ ಅನುಸರಿಸಲ್ಪಟ್ಟಿತು. ತಮ್ಮ ಪೋಷಕರ ಕೋರಿಕೆಯ ನಡುವೆಯೂ ವಿಧವೆಯರು ತಮ್ಮ ಗಂಡಂದಿರ ಚಿತೆಗೆ ಹಾರುವ ಕೆಲವು ನಿದರ್ಶನಗಳನ್ನು ನೋಡುತ್ತೇವೆ. ದೇಕಬ್ಬೆಯೆಂಬ ಮಹಿಳೆಯೊಬ್ಬಳು ಅವಳ ಪೋಷಕರು ಅವಳನ್ನು ತನ್ನ ಗಂಡನ ಚಿತೆಗೆ ಹಾರದಂತೆ ಎಷ್ಟೇ ಬೇಡಿಕೊಂಡರೂ ಅವಳು ಕೇಳಲಿಲ್ಲ.[26] ಈ ಕಾಲದಲ್ಲಿ ವಿಧವಾ ವಿವಾಹವು ರೂಢಿಯಲ್ಲಿರಲಿಲ್ಲ. ಆದರೆ ಇದು ಹಿಂದೂ ಸಮಾಜದ ಕೆಳವರ್ಗಗಳಲ್ಲಿ ನಿರ್ಬಂಧಕ್ಕೊಳಪಟ್ಟಿರಲಿಲ್ಲ. ಒಂದಲ್ಲ ಒಂದು ಹೆಸರಿನಿಂದ ಮುಂದುವರೆಯುತ್ತಾ ಬಂದಿದೆ.

12ನೇ ಶತಮಾನದ ವೇಳೆಗೆ ಬಹಳ ಕೆಟ್ಟ ಪದ್ಧತಿಯಾದ ವಿಧವೆಯರ ತಲೆಬೋಳಿಸುವುದು ಮೊದಲ ಬಾರಿಗೆ ಬ್ರಾಹ್ಮಣರಲ್ಲಿ ಕಂಡುಬಂದಿತು. ಅನಂತರ ಇನ್ನಿತರ ವರ್ಗಗಳಲ್ಲಿ ಕಾಣಿಸಿತು. ಬ್ರಾಹ್ಮಣರಲ್ಲೂ ಶ್ರೀ ವೈಷ್ಣವರ ಬಂಧುವರ್ಗವು ಈ ಪದ್ಧತಿಯ ವಿರೋಧಿಯಾಗಿತ್ತು. ಆಧುನಿಕ ಚಿಂತನೆಗಳು ಮತ್ತು ಆಧುನಿಕ ಪರಿಸರದ ಪ್ರಭಾವದಿಂದಾಗಿ ಈ ಆಚರಣೆಯು ನಶಿಸುತ್ತಿದೆ.

## ಆಸ್ತಿಯ ಉತ್ತರಾಧಿಕಾರತ್ವ

ಸ್ತ್ರೀದಾನ ಹಕ್ಕುಗಳ ವ್ಯಾಪ್ತಿಯು ಹೆಚ್ಚು ವಿಸ್ತಾರಗೊಂಡವು. ಆರನೇ ವಿಕ್ರಮಾದಿತ್ಯನ ಆಸ್ಥಾನದಲ್ಲಿ ಮುಖ್ಯ ನ್ಯಾಯಾಧೀಶನಾಗಿದ್ದ ವಿಜ್ಞಾನೇಶ್ವರನು 'ಮಿತಾಕ್ಷರ'ದಲ್ಲಿ ವಿಧವೆಯರ ಉತ್ತರಾಧಿಕಾರದ ಹಕ್ಕನ್ನು ಪ್ರತಿಪಾದಿಸಿದನು. 12ನೇ ಶತಮಾನದ ಕೊಲ್ಲಾಪುರದ ಒಂದು ದಾಖಲೆಯು ಒಬ್ಬ ಹೆಣ್ಣುಮಗಳು ಭೂ ಆಸ್ತಿಯನ್ನು ಮಾರಿದುದರ ಬಗ್ಗೆ ಉಲ್ಲೇಖಿಸುತ್ತದೆ.[27] ಹೆಣ್ಣು ಮಕ್ಕಳು ಮತ್ತು ಗಂಡು ಮಕ್ಕಳಿಬ್ಬರ ನಡುವೆ ಆಸ್ತಿಯನ್ನು ಹಂಚುವ ಕಾನೂನು ಆಚರಣೆಗೆ ಬಂದಿತು. 1188ರ ಒಂದು ಶಾಸನವು ಮಾಚಿ ಎಂಬ ವ್ಯಕ್ತಿಯು ತನ್ನ ಆಸ್ತಿಯನ್ನು ತನ್ನ ಗಂಡು ಮಕ್ಕಳು ಮತ್ತು ಹೆಣ್ಣು ಮಕ್ಕಳ ನಡುವೆ ಹಂಚಿದುದರ ಉಲ್ಲೇಖನವನ್ನು ಮಾಡುತ್ತದೆ. ಈ ಗಂಡು ಮಕ್ಕಳು ಮತ್ತು ಹೆಣ್ಣು ಮಕ್ಕಳ ಮಧ್ಯೆ ಏರ್ಪಟ್ಟ ವಿವಾದವನ್ನು ಬಗೆಹರಿಸುದುದರ ಬಗ್ಗೆಯೂ ಈ ದಾಖಲೆಯು ಮಾಹಿತಿಯನ್ನು ನೀಡುತ್ತದೆ.[28] ಈ ಕಾಲದ ತಂಜಾವೂರಿನ ಒಂದು ಶಿಲಾಶಾಸನವು ಹೇಳುವಂತೆ ಕಾನೂನುಬದ್ಧವಾಗಿ ವಿವಾಹವಾದ ಹೆಂಡತಿಯು ಗಂಡನಿಗೆ ಸಂಬಂಧಿಸಿದ ಭೂಮಿ, ಜಾನುವಾರು, ಸೇವಕರು, ಆಭರಣಗಳು ಮತ್ತು ಇತರೆ ಬೆಲೆಬಾಳುವ ವಸ್ತುಗಳೂ ಸೇರಿ ಸಮಸ್ತ ಆಸ್ತಿಯ ಉತ್ತರಾಧಿಕಾರಿಣಿಯಾಗುತ್ತಿದ್ದಳು.[29] ಹದಿಮೂರನೇ ಶತಮಾನದ ಅಂತ್ಯಭಾಗದ ವೇಳೆಗೆ ವಿಧವೆಯ ಹಕ್ಕುಗಳು ಆಚರಣೆಗೆ ಬಂದವು.[30] ಗಂಡು ಮಕ್ಕಳಿಲ್ಲದ ಪಕ್ಷದಲ್ಲಿ ಹೆಣ್ಣು ಮಕ್ಕಳೇ ಉತ್ತರಾಧಿಕಾರಿಗಳಾಗುತ್ತಿದ್ದರು.[31] ಇನ್ನೊಂದು ಶಾಸನವು ಹೇಳುವಂತೆ ಯಾವುದೇ ಗಂಡು ಸಂತತಿ ಇಲ್ಲದ ಪಕ್ಷದಲ್ಲಿ ಆಸ್ತಿಯು ಹೆಣ್ಣಿಗೆ ಹೋಗುತ್ತದೆ ಅಥವಾ ಅವಳ ಮಕ್ಕಳಿಗೆ ಹೋಗುತ್ತದೆ ಎಂದು ತಿಳಿಸಿದೆ.[32]

## ಮಹಿಳೆ ಮತ್ತು ಧರ್ಮ

ಧಾರ್ಮಿಕ ಹಕ್ಕುಗಳು ಮತ್ತು ವಿಶೇಷ ಹಕ್ಕುಗಳು ಬಹಳ ಶ್ರೇಷ್ಟವೆಂದು ಪರಿಗಣಿಸಲ್ಪಟ್ಟಿದ್ದವು. ವೀರಸೋಮೇಶ್ವರನ ಕಾಲದಲ್ಲಿ ಮಹಿಳೆಯ ಪಾತ್ರವು ಈ ಕ್ಷೇತ್ರದಲ್ಲಿ ಅತ್ಯಲ್ಪವೇನಾಗಿರಲಿಲ್ಲ. ಈ ಕಾಲದ ಆರಂಭದ ಭಾಗಕ್ಕೆ ಸೇರಿದ ಬೃಹತ್ ಸಂಖ್ಯೆಯ ಶಾಸನಗಳು ಏಳು ಜೈನ ಮಹಿಳೆಯರು ಕಂತಿಗಳಾಗಿ ಅಥವಾ ಋಷಿಗಳಾಗಿ, ಸನ್ಯಾಸದ ಆಚರಣೆಯಿಂದ ತಮ್ಮ ವಿಷ ವರ್ತುಲದ ಜೀವನಕ್ಕೆ ತಿಲಾಂಜಲಿಯನ್ನಿತ್ತ ಬಗ್ಗೆ ಮಾಹಿತಿಯನ್ನು ನೀಡುತ್ತದೆ. ಜೈನ ಶ್ರವಿಕರು ಮತ್ತು ಸನ್ಯಾಸಿಣಿಯರು ಸಲ್ಲೇಖನ ವ್ರತವನ್ನು ಆಚರಿಸುತ್ತಿದ್ದರು.[33] ಜೈನ ಧರ್ಮದ ಕೆಲವು ಅನುಯಾಯಿಗಳು ಧರ್ಮದ ಉನ್ನತಿಗಾಗಿ ಶ್ರಮಿಸುತ್ತಿದ್ದರು ಮತ್ತು ಸನ್ಯಾಸದ ಆಚರಣೆಯೊಂದಿಗೆ

ತಮ್ಮ ಜೀವನವನ್ನು ತ್ಯಾಗ ಮಾಡುತ್ತಿದ್ದರು. ಧಾರ್ಮಿಕ ಆಶ್ರಯದಾತರಲ್ಲಿ ಮಹಿಳೆಯರ ಬೃಹತ್ ಸಂಖ್ಯೆಯನ್ನು ನಾವು ನೋಡುತ್ತೇವೆ. ಪೋಚಕಬ್ಬೆಯ ಜೈನ ಧರ್ಮಕ್ಕೂ ತನ್ನ ಎಲ್ಲ ಆಸ್ತಿಯನ್ನು ವೆಚ್ಚ ಮಾಡಿದಳು ಹಾಗೂ ಅನೇಕ ಚೈತಾಲಯಗಳನ್ನು ಕಟ್ಟಿಸಿದುದು ತಿಳಿದು ಬರುತ್ತದೆ.[34] ಚಗಲಾದೇವಿಯು ಜೈನಳಾದರೂ ಬೆಳ್ಳಿಗಾವೆಯಲ್ಲಿ ಚಗೇಶ್ವರ ಶಿವದೇವಾಲಯವನ್ನು ಕಟ್ಟಿಸಿದಳು ಮತ್ತು ಬ್ರಾಹ್ಮಣರಿಗೆ ಹಲವಾರು ಉಡುಗೊರೆಗಳನ್ನು ನೀಡಿದ್ದುದು ತಿಳಿದುಬರುತ್ತದೆ.[35] ದಂಡ ನಾಯಕ ಬೊಪ್ಪದೇವನ ತಾಯಿಯಾದ ಚಕ್ಕಮ್ಮದೇವಿಯು ಒಂದು ಹರಕೆಯನ್ನು ಹೊತ್ತಳು. ಇದರಂತೆ ಜಕ್ಕಿಕಟ್ಟೆ ಎಂಬ ಕೆರೆಯೊಂದನ್ನು ಕಟ್ಟಿಸಿದಳು.36 ಬಚಲಾದೇವಿಯು ದಕ್ಷಿಣಾರ್ಧ ಭಾಗದ ಬಸದಿಯನ್ನು ನಿರ್ಮಿಸಿದಳು.[37]

ಹಿಂದೂ ಧರ್ಮದ ಅನುಯಾಯಿಗಳಲ್ಲಿ ಯಾವ ಸನ್ಯಾಸಣಿಯರು ಇರಲಿಲ್ಲ. ಆದರೆ ಅವರು ತಮ್ಮ ಧಾರ್ಮಿಕ ಚಟುವಟಿಕೆಗಳಲ್ಲಿ ಹಿಂದೆ ಬೀಳಲಿಲ್ಲ. ಅವರು ಸಾಧ್ಯವಾದ ಎಲ್ಲಾ ರೀತಿಯಲ್ಲೂ ಧರ್ಮವನ್ನು ಪ್ರೋತ್ಸಾಹಿಸಿದರು. ಈ ಕಾಲದ ಅನೇಕ ಶಾಸನಗಳು ದೇಗುಲಗಳಿಗೆ ಹಲವಾರು ಕಾಣಿಕೆಗಳು ಮತ್ತು ದಾನವನ್ನು ಮಾಡಿದುದರ ಹಲವಾರು ನಿದರ್ಶನಗಳನ್ನು ಹೇಳುತ್ತೇವೆ.[38] ಕುಂದರಬ್ಬರನೆಯು ದೇಗುಲಕ್ಕೆ ಮತ್ತು ಅದಕ್ಕೆ ಸೇರಿಕೊಂಡಿದ್ದ ಶಿಕ್ಷಣ ಸಂಸ್ಥೆಗೆ ಭೂಕಾಣಿಕೆಯನ್ನು ನೀಡಿದ್ದುದು ತಿಳಿದುಬಂದಿದೆ. ದಂಡನಾಯಕ ಏಚಮಯ್ಯನ ತಾಯಿಯು ಗಂಗೇಶ್ವರ ದೇವಸ್ಥಾನಕ್ಕೆ ಭೂಮಿಯ ದಾನವನ್ನು ಮಾಡಿದಳು.[39] ಜಕ್ಕವ್ವಳು ಶಿವದೇವಾಲಯವನ್ನು ನಿರ್ಮಿಸಿದಳು ಮತ್ತು ಅದಕ್ಕೆ ಭೂದಾನವನ್ನು ಮಾಡಿದ್ದುದು ತಿಳಿದು ಬಂದಿದೆ.[40]

ಕ್ರಿ.ಶ. 1254ರಲ್ಲಿ ಶ್ರೀರಂಗಪಟ್ಟಣದ ಅರಕರೆ ಬಳಿ ದೊರೆತಿರುವ ವೀರಸೋಮೇಶ್ವರನ ಕಾಲದ ಶಾಸನವೊಂದು ಆತನ ಆಳ್ವಿಕೆಯ 21ನೇ ವರ್ಷದಲ್ಲಿ ಹುಟ್ಟಿಕೊಂಡಿತೆಂದು ತಿಳಿದುಬಂದಿದೆ. ಆ ಶಾಸನದಲ್ಲಿ ಸರ್ವನಮಸ್ಯದ ಪಟ್ಟದ ಮಹಾಗ್ರಹಾರ ಸರ್ವಜ್ಞ ಶ್ರೀ ವೀರನಾರಸಿಂಹಪುರವೆನಿಸಿದ ಇಂದಿನ ಅರಕೆರೆಯಲ್ಲಿ ಕುಮಾಂಡೂರಾಚನ ಹೆಂಡತಿ ಐಯ್ಸಿದ್ಯೆಕೆ ಆ ಗ್ರಾಮದಲ್ಲಿ ತನ್ನ ಪಾಲಿಗೆ ಬಂದ ಭೂಮಿಯ ವೃತ್ತಿಯಲ್ಲಿ ಕಾಲುಭಾಗವನ್ನು ಕೇಶವದೇವರಿಗೆ ತಿರುನಾಮದ ಕಾಣಿಕೆ ಯಾಗಿತ್ತಳು. ತಿರುನಾಮ ಕಾಣಿಕೆ ಎಂಬುದು ಶೈವ ದೇವಾಲಯಗಳಿಗೆ ಕೊಡಲಾದ ಸೇರಿದ ಭೂಮಿಗೆ ಅನ್ವಯವಾಗುವ ಹೆಸರು. ಆದರೆ ಇಲ್ಲಿನ ಕೇಶವ ದೇವರು ವೈಷ್ಣವ ದೇವರು. ಇದನ್ನು ಗಮನಿಸಿದರೆ ತಿರುನಾಮಕಾಣಿಕೆಯೆಂಬುದು ಬಹಳ ಸಾಮಾನ್ಯವಾದ ಅರ್ಥದಲ್ಲಿ ದೇವಾಲಯಗಳಿಗೆ

ನೀಡಿದ ಭೂಮಿ ಎನ್ನಬೇಕಾಗುತ್ತದೆ. ಶಾಸನದಲ್ಲಿ ಇದನ್ನು 'ಪ್ರೀತಿದಾನ' ಎನ್ನಲಾಗಿದೆ. ದಾನಿ ಒಬ್ಬ ಸ್ತ್ರೀಯಾಗಿದ್ದು ಆಕೆ ದಾನ ನೀಡಿದ್ದಳೆಂಬುದನ್ನು ಗಮನಿಸಿದರೆ ಸ್ತ್ರೀಯರು ಪ್ರತ್ಯೇಕವಾಗಿ ಭೂಮಿಯನ್ನು ಒಡೆತನ ಹೊಂದಿದ್ದರು ಹಾಗೂ ದಾನ ನೀಡುತ್ತಿದ್ದರೆಂದು ತಿಳಿದುಬರುತ್ತದೆ.[41]

## ಮಹಿಳೆ ಮತ್ತು ಸಾರ್ವಜನಿಕ ಆಡಳಿತ

ಈ ಕಾಲದಲ್ಲಿ ಸ್ತ್ರೀಯರಿಗೆ ಸಾಕಷ್ಟು ಸ್ವಾತಂತ್ರ್ಯವಿತ್ತು. ಮೇಲ್ವರ್ಗದ ಸ್ತ್ರೀಯರು, ದೇಗುಲಗಳು ಮತ್ತು ಇನ್ನಿತರ ಧಾರ್ಮಿಕ ಸಂಸ್ಥೆಗಳನ್ನು ಕಟ್ಟಿದರು ಮತ್ತು ಅವುಗಳಿಗೆ ಉದಾರವಾದ ಧನಸಹಾಯವನ್ನು ಮಾಡಿದರು. ಅವರು ಶಿಕ್ಷಣ ಸಂಸ್ಥೆಗಳಿಗೂ ದತ್ತಿಯನ್ನು ನೀಡಿದರು. ರಾಜಧಾನಿಯ ಹಲವಾರು ಶಾಖೆಗಳ ಮೇಲ್ವಿಚಾರಕರಾಗಿ ಇವರು ಕಾರ್ಯವನ್ನು ನಿರ್ವಹಿಸುತ್ತಿದ್ದರು. ಕೆಳವರ್ಗದ ಮಹಿಳೆಯರೂ ದೇಗುಲಗಳಿಗೆ ಪ್ರೋತ್ಸಾಹಿಸುವುದರಲ್ಲಿ ಹಿಂದೆ ಬೀಳಲಿಲ್ಲ. ದುಗ್ಗೆಗೌಡಿ ಎಂಬುವಳು ಬಹಳ ಉದಾರಿಯಾಗಿದ್ದು ಅವಳ ಬಳಿ ಯಾರೇ ಹೋದರೂ ಬರಿಗೈಯಲ್ಲಿ ಬರುತ್ತಿರಲಿಲ್ಲ ಎಂದು ಹೇಳಲಾಗಿದೆ.[42] ರಾಜಮನೆತನದ ಮಹಿಳೆಯರು ಧಾರ್ಮಿಕ ಮತ್ತು ರಾಜಕೀಯ ವಿಷಯಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವ ಅಧಿಕಾರವನ್ನು ಒದಗಿಸಲಾಗಿತ್ತು. ಮಹಿಳಾ ಆಡಳಿತಾಧಿಕಾರಿಯಾಗಿ ಖ್ಯಾತಿ ಹೊಂದಿದ್ದವಳೆಂದರೆ ಚಾಲುಕ್ಯ ಜಯಸಿಂಹನ ಸಹೋದರಿಯಾದ ಅಕ್ಕದೇವಿ. ರಾಣಿಯು ದರ್ಬಾರಿನಲ್ಲಿ ಯಾವಾಗಲೂ ರಾಜನ ಪಕ್ಕದಲ್ಲಿಯೇ ಇರುತ್ತಿದ್ದಳು. ಅವಳಿಗೆ ತನ್ನದೇ ಆದ ಪಹರೆಗಳಿರುತ್ತಿದ್ದವು. ಅವುಗಳಲ್ಲಿ ಮಂತ್ರಿಗಳು ಮತ್ತು ಸಲಹೆಗಾರರು ಇರುತ್ತಿದ್ದರು. ಪಟ್ಟದರಸಿಯು ಅವಳ ರಾಜಮುದ್ರೆಯಾಗಿ ಬಿಳಿಯ ಶಂಖ, ಬಿಳಿಯ ಛತ್ರಿ, ಚಿನ್ನದ ದಂಡ ಮತ್ತು ಚಾಮರಗಳನ್ನು ಹೊಂದಿದ್ದಳೆಂದು ತಿಳಿದುಬರುತ್ತದೆ. ಸ್ತ್ರೀ ಆಡಳಿತಕ್ಕೆ ಮತ್ತೊಂದು ಸುಪ್ರಸಿದ್ಧ ಉದಾಹರಣೆಯೆಂದರೆ ಕಾಕತೀಯ ರಾಣಿಯಾದ ರುದ್ರಾಂಬ. ಈಕೆಯು ಮಹಾಮಂಡಲೇಶ್ವರ ರುದ್ರದೇವ ಮಹಾರಾಯನ ಹೆಸರಿನಲ್ಲಿ ಕ್ರಿ.ಶ. 1260ರಿಂದ ಗುಂಟೂರು ಜಿಲ್ಲೆಯಲ್ಲಿ ಆಳ್ವಿಕೆ ನಡೆಸಿದ್ದಳು. ಇದು ನಮಗೆ ಮಾರ್ಕೋಪೋಲೋನ ಭೇಟಿಯ ವರದಿಯಿಂದ ತಿಳಿದುಬರುತ್ತದೆ.[43] ಸಮಾಜದ ಇತರೆ ವರ್ಗಗಳಿಗೆ ಸೇರಿದ ಮಹಿಳೆಯರು ಧಾರ್ಮಿಕ ಸಂಸ್ಥೆಗಳ ಆಡಳಿತವನ್ನು ನೀಡುವಂತೆ ಕುಂಚಶೆಟ್ಟಿ ಎಂಬ ಶ್ರೀಪುರಿ ವರ್ತಕನು ದಾಮೋದರ ಅಗ್ರಹಾರದ (ಇದನ್ನು ನಾಗರಹಳ್ಳಿ ಎಂದು ಸಹ ಕರೆಯುತ್ತಾರೆ) ಬ್ರಾಹ್ಮಣರಿಂದ ಪಡೆದಿದ್ದ ಭೂಮಿಯನ್ನು ಕುಂಚೇಶ್ವರ ದೇವರ ದೇವಸ್ಥಾನಕ್ಕೆ ಬಳುವಳಿಯಾಗಿ ನೀಡಿದನು. ಅವನ ಮಗಳಾದ ಘನಕುಮಾರಿ ಚಂದ್ರವ್ವೆಯನ್ನು ಈ ದೇವಾಲಯದ ಒಡತಿಯನ್ನಾಗಿ ಮಾಡಿದನು. ಇವಳ ನೇಮಕವನ್ನು ಅಲ್ಲಿನ ಪ್ರಮುಖ

ವ್ಯಕ್ತಿಗಳು ಒಪ್ಪಿದ ನಂತರ ಇವಳು ತನ್ನ ಸ್ಥಾನವನ್ನು ಕ್ರಿ.ಶ. 1258ರವರೆಗೂ ಹೊಂದಿದ್ದಳೆಂದು ತಿಳಿದುಬರುತ್ತದೆ.[44] ಈ ರೀತಿಯಾಗಿ ಕನ್ನಡನಾಡಿನ ವನಿತೆಯರು ಹೆಚ್ಚು ಪ್ರಮಾಣದ ಸ್ವಾತಂತ್ರ್ಯವನ್ನು ಹೊಂದಿದ್ದರು. ಈ ಸಾಕ್ಷಿಗಳನ್ನು ಆಧಾರಯುತವಾದವುಗಳು ಎಂದು ಸ್ಮೃತಿಗಳು ಅನರ್ಹ ಗೊಳಿಸಿದ್ದರೂ 1156ರ ಒಂದು ಶಾಸನದ ಪ್ರಕಾರ ಪಿರಿಯದೇವಿಯಕ್ಕ ಎಂಬ ಮಹಿಳೆಯು ಈ ವ್ಯಾಪಾರ ಕರಾರಿನ ಸಾಕ್ಷಿಯಾಗಿದ್ದು ತಿಳಿದುಬರುತ್ತದೆ.[45]

**ದೇವದಾಸಿ ಪದ್ಧತಿ**

ದೇವದಾಸಿಯರು ದೇವರ ಸೇವಕಿಯಾಗಿದ್ದರು. ಅವರ ಜೀವನವು ದೇವಾಲಯದಲ್ಲಿ ಪರಮಾತ್ಮನ ಸೇವೆಗಾಗಿ ಮುಡಿಪಾಗಿಡಲಾಗಿತ್ತು. ದೇವಾಲಯದಲ್ಲಿ ಹಾಡುವುದರೊಂದಿಗೆ ಮತ್ತು ನರ್ತಿಸುವುದರೊಂದಿಗೆ ಅವರು ದೇವರ ಸೇವೆಯನ್ನು ಮಾಡಬೇಕಾಗಿತ್ತು. ದೇವಾಲಯದಲ್ಲಿ ಇವರು ನರ್ತಿಸುವ ಪದ್ಧತಿಯು ಭಾರತಕ್ಕೆ ಸೀಮಿತವಾಗಿಲ್ಲದೇ ಪ್ರಾಚೀನ ಈಜಿಪ್ಟ್, ಅರೇಬಿಯಾ, ಸಿರಿಯಾ ಮತ್ತು ಇತರೆ ಪೂರ್ವ ಮಧ್ಯರಾಷ್ಟ್ರಗಳಲ್ಲೂ ಜಾರಿಯಲ್ಲಿದ್ದುದನ್ನು ಕಾಣಬಹುದು. ಭಾರತದ ಕೆಲವು ಭಾಗಗಳಲ್ಲಿ ಈ ಪದ್ಧತಿಯು ಇನ್ನು ಜೀವಂತವಾಗಿರುವುದನ್ನು ಕಾಣಬಹುದಾಗಿದೆ. ದೇಗುಲದ ಅಂಗ ಭೋಗ ಮತ್ತು ರಂಗಭೋಗಿ ದೇವರಿಗೆ ಕಾಣಿಕೆಗಳನ್ನು ನೀಡಿದ್ದುದರ ಬಗ್ಗೆ ಶಾಸನಗಳು ಮಾಹಿತಿ ಯನ್ನು ನೀಡುತ್ತವೆ. ಮೊದಲನೆಯದು ಅಭಿಷೇಕ, ಅಲಂಕಾರ, ದೀಪ, ಹೂವು ಮತ್ತು ಇತರೆ ವಸ್ತುಗಳನ್ನು ದೇವರ ಮೂರ್ತಿಗೆ ಅರ್ಪಿಸುವುದನ್ನು ಒಳಗೊಂಡಿದೆ. ಎರಡನೆಯದು ದೇವರ ವಿಗ್ರಹದ ಮುಂದೆ ಸಂಗೀತ ಮತ್ತು ಸುಂದರ ಸ್ತ್ರೀಯರಿಂದ ನರ್ತನವನ್ನು ಒಳಗೊಂಡಿದೆ. ದೇವಾಲಯದಲ್ಲಿ ನರ್ತಿಸುವ ನರ್ತಕಿಯರ ಪದ್ಧತಿಯು ಡಾ.ಅಲ್ಟೇಕರ್ ಪ್ರಕಾರ ಇತ್ತೀಚಿನ ಮೂಲವಾಗಿದೆ. ಇದು 6ನೇ ಶತಮಾನದಲ್ಲಿ ಸಾಮಾನ್ಯವಾದ ಪದ್ಧತಿಯಾಯಿತು. ದಕ್ಷಿಣ ಭಾರತದ ಕೆಲವು ಶಾಸನಗಳ ಪ್ರಕಾರ ದೇವಾಲಯದಲ್ಲಿ ನರ್ತಕಿಯರು ನರ್ತಿಸುವ ಪದ್ಧತಿಯು ಆರಂಭ ವಾದದ್ದು 9ನೇ ಶತಮಾನದಲ್ಲಿ ಎನ್ನಲಾಗಿದೆ.[46] ಸಾಮಾನ್ಯವಾಗಿ ನರ್ತಕಿಯರು ವೇಶ್ಯೆಯರಾಗಿರು ತ್ತಿದ್ದರು. ಮೊದಮೊದಲು ಬ್ರಾಹ್ಮಣರು ಈ ಪದ್ಧತಿಯನ್ನು ವಿರೋಧಿಸಿದರು. ಆದರೆ ರಾಜರು ಬಲವಂತವಾಗಿ ಈ ಪದ್ಧತಿಯನ್ನು ರೂಢಿಗೆ ತಂದರು.

ನರ್ತಿಸುವ ನರ್ತಕಿಯರಲ್ಲಿ ಎರಡು ವರ್ಗಗಳಿದ್ದವು. ಮೊದಲನೆಯವರು ಅಭಿನಯಿಸು ವವರು, ಹಾಡುವವರು ಮತ್ತು ನರ್ತಿಸುವವರು ಹಾಗೂ ಎರಡನೇಯ ವರ್ಗದವರು ಸೇವೆ

ಸಲ್ಲಿಸುವವರಾಗಿದ್ದರು. ಬಳ್ಳಿಗಾವೆಯ ಒಂದು ಶಾಸನವು ನರ್ತಕಿಯಾದ ಪದ್ಮಾವತಿಯನ್ನು ಪಾತ್ರಸೂಳೆ ಎಂದು ಹೇಳುತ್ತದೆ. ದೇವದಾಸಿಯರು ಹಾಡುವುದರಲ್ಲಿ ಮತ್ತು ನರ್ತಿಸುವುದರೆಡರಲ್ಲೂ ಪ್ರತಿಭಾವಂತರಾಗಿರಬೇಕಾಗಿತ್ತು. ಇದರ ಜೊತೆಗೆ ಸುಂದರವಾಗಿಯೂ ಇರಬೇಕಾಗಿತ್ತು. ಅವರ ಸೌಂದರ್ಯ ಮತ್ತು ಮೋಹಕತೆಯ ಆಧಾರದ ಮೇಲೆ ಅವರನ್ನು ಆಯ್ಕೆ ಮಾಡಲಾಗುತ್ತಿತ್ತು. ಮಹಾದೇವಚಮುಪತಿಯು ಇಟಗಿಯ ಬಳಿ ಮಹಾದೇವ ದೇಗುಲವನ್ನು ನಿರ್ಮಿಸಿದಾಗ ಸೌಂದರ್ಯಕ್ಕೆ ಹೆಸರಾದ ದೇವದಾಸಿಯರನ್ನು ಆಯ್ಕೆ ಮಾಡಲಾಯಿತು.[47] ದೇವಸ್ಥಾನದ ಹತ್ತಿರ ಅವರಿಗೆ ಸಂಬಂಧಿಸಿದ ವಸತಿಗೃಹಗಳಲ್ಲಿ ಅವರು ವಾಸಿಸುತ್ತಿದ್ದರು. ಅವರಿಗೂ ದಾನದತ್ತಿಗಳನ್ನು ನೀಡಿದುದರ ಬಗ್ಗೆ ಮತ್ತು ಅವರನ್ನು ನೋಡಿಕೊಳ್ಳುವ ಒಬ್ಬ ಮೇಲ್ವಿಚಾರಕ ಅಥವಾ ನಿರ್ವಾಹಕ ನಿರುತ್ತಿದ್ದನು. ಈ ಬಗ್ಗೆ ಕೆಲವು ಶಾಸನಗಳು ಮಾಹಿತಿಯನ್ನು ನೀಡುತ್ತವೆ. ದೇವಾಲಯದಲ್ಲಿ ಅವರು ಪ್ರತ್ಯೇಕ ಕರ್ತವ್ಯಗಳನ್ನು ನಿರ್ವಹಿಸಬೇಕಾಗಿತ್ತು. ದೇವದಾಸಿಯರು ವೇಶ್ಯೆಯರ ವರ್ಗಕ್ಕೆ ಸೇರಿದರೂ ಎಲ್ಲಾ ವೇಶ್ಯೆಯರು ದೇವದಾಸಿಗಳಾಗಿರಲಿಲ್ಲ.

ರಾಜರ ಒಡ್ಡೋಲಗದಲ್ಲಿ ಹಾಡುವ ಮತ್ತು ನರ್ತಿಸುವ ನರ್ತಕಿಯರನ್ನು ಚೌರಿ ಒಯ್ಯುವವರು, ವೀಳ್ಯ ತರುವವರು ಮತ್ತು ಬೀಸಣಿಗೆ ಬೀಸುವವರು ಎಂದು ದೊಡ್ಡ ಸಂಖ್ಯೆಯಲ್ಲಿ ನೇಮಕ ಮಾಡಿಕೊಳ್ಳಲಾಗುತ್ತಿತ್ತು. ಈ ವೇಶ್ಯೆಯರು ಮತ್ತು ದೇವದಾಸಿಯರಿಗೂ ಸಮಾಜದಲ್ಲಿ ಗೌರವಯುತವಾದ ಸ್ಥಾನಮಾನವಿದ್ದು ಅವರು ತಮಗೆ ಒದಗಿಸಿಕೊಟ್ಟ ಪ್ರತ್ಯೇಕ ಸ್ಥಳದಲ್ಲಿ ವಾಸಿಸುತ್ತಿದ್ದರು. ಕಾಲಾನುಕ್ರಮದಲ್ಲಿ ಈ ಆಕರ್ಷಣೀಯ ನರ್ತಕಿಯರು ತಂಡದ ಉಪಸ್ಥಿತಿಯಲ್ಲಿ ದೇವಸ್ಥಾನದಲ್ಲಿನ ಆಧ್ಯಾತ್ಮಿಕ ಮತ್ತು ನೈತಿಕ ವಾತಾವರಣವು ಹದಗೆಡುವುದಕ್ಕೆ ಕಾರಣವಾಯಿತು. ದೇವರನ್ನು ಆರಾಧಿಸುವ ಉದ್ದೇಶಕ್ಕಿಂತ ಹೆಚ್ಚಾಗಿ ಅಲ್ಲಿನ ಸ್ತ್ರೀಯರ ಜೊತೆ ಚಕ್ಕಂದವನ್ನಾಡುವವರ ಸಂಖ್ಯೆಯು ಹೆಚ್ಚಾಯಿತು. ಈ ರೀತಿ ಕಾಲ ಕಳೆದಂತೆ ಈ ಪದ್ಧತಿಯು ಸಮಾಜದ ಅವಹೇಳನೆಗೆ ಒಳಗಾಯಿತು. ಗೌರವಯುತವಾದ ಸ್ಥಾನಮಾನವನ್ನು ಕಳೆದುಕೊಂಡಿತು.

ದಕ್ಷಿಣ ಭಾರತದ ಕೆಲವು ಭಾಗಗಳಲ್ಲಿ ದೇವದಾಸಿಯರ ಕೆಲವು ಕುಟುಂಬಗಳೂ ಇನ್ನೂ ಅಸ್ತಿತ್ವದಲ್ಲಿವೆ. ಈ ಕುಟುಂಬಗಳು ಪೀಳಿಗೆಯಿಂದ ಪೀಳಿಗೆಗೆ ತಮ್ಮ ವಂಶಪಾರಂಪರ್ಯ ಕಲೆಯಾದ ನರ್ತಕ ಮತ್ತು ಹಾಡುಗಾರಿಕೆಯನ್ನು ಮುಂದುವರೆಸಿಕೊಂಡು ಹೋಗುತ್ತಿದ್ದಾರೆ. ಗೋವಾದಲ್ಲಿನ ಮಂಗೇಶ ದೇಗುಲದಲ್ಲಿ ಕೆಲವು ದೇವದಾಸಿಯವರೆಂದು ಹೇಳಲಾಗಿದೆ. ಸೋಮವಾರರಂದು ಮತ್ತು

ಇತರೆ ಹಬ್ಬ ಹರಿದಿನಗಳಲ್ಲಿ ನಡೆಯುವ ಪೂಜೆಯ ಸಮಯದಲ್ಲಿ ಅವರು ನರ್ತಿಸುತ್ತಿದ್ದರು. ದೇವಾಲಯಗಳಿಗೆ ಬಸವಿಯರನ್ನು ಬಿಡುತ್ತಿದ್ದುದನ್ನು ಒಂದು ಕಾಲದಲ್ಲಿ ಹೆಚ್ಚಾಗಿ ಅನುಸರಿಸ ಲಾಗುತ್ತಿತ್ತು. ಕೆಲವು ಶಾಸನಗಳು ವೇಶ್ಯೆಯರ ಮೇಲಿನ ತೆರಿಗೆಯ ಬಗ್ಗೆ ಹೇಳುತ್ತವೆ. ಮತ್ತೆ ಕೆಲವು ಶಾಸನಗಳು ಕನ್ನಡಿ ತೆರಿಗೆಯ ಬಗ್ಗೆ ಹೇಳುತ್ತವೆ. ಬಹುಶಃ ಅವರು ತಮ್ಮ ವೃತ್ತಿಯನ್ನು ನಡೆಸಲು ಸರಕಾರದಿಂದ ಅನುಮತಿಯನ್ನು ಪಡೆಯಬೇಕಾಗಿತ್ತೆಂದು ಕಾಣುತ್ತದೆ. ಇಷ್ಟೆಲ್ಲಾ ನ್ಯೂನತೆ ಗಳ ಮಧ್ಯೆಯೂ ಮಹಿಳೆಯ ಪಾವಿತ್ರ್ಯತೆ ನಿಷ್ಕಳಂಕವೂ, ಆಧ್ಯಾತ್ಮಿಕತೆಯ ಮತ್ತು ಧಾರ್ಮಿಕತೆಯ ಸಂಕೇತ ಹಾಗೂ ಗಣಿ ಎಂದು ಪರಿಗಣಿಸಲ್ಪಟ್ಟಿದ್ದಳು. ಈ ಕಾಲದುದ್ದಕ್ಕೂ ಅವರು ಸಂಸ್ಕೃತಿಯ ಪಾಲಕರಾಗಿ ಮುಂದುವರೆದಿದ್ದರು. ಅವರ ನಡತೆಯ ಹಕ್ಕುಗಳು ಒಂದು ನಿರ್ದಿಷ್ಟ ಮಟ್ಟಕ್ಕೆ ಸುಧಾರಣೆಯಾದರೂ ಅವರಲ್ಲಿ ಶ್ರೀಮಂತ ಮತ್ತು ಮೇಲ್ವರ್ಗದವರನ್ನು ಬಿಟ್ಟು ಇನ್ನಿತರು ಹೆಚ್ಚಾಗಿ ಅನಕ್ಷರಸ್ಥರು ಹಾಗೂ ಅವಿದ್ಯಾವಂತರಾಗಿಯೂ ಉಳಿದರು.

ಪುರುಷ ಮತ್ತು ಮಹಿಳೆಯ ಸಮಾನತೆಯ ಇತ್ತೀಚಿನ ಆಧುನಿಕ ಚಿಂತನೆಗಳು ಮತ್ತು ಒಲವಿನ ಹೊರತಾಗಿಯೂ ಮಹಿಳೆಯು ಸಾಮಾಜಿಕ ಅನ್ಯಾಯದ ಬಲಿಪಶುವಿನ ಹಂತದಿಂದ ಭದ್ರತೆಯ ಹಂತಕ್ಕೆ ಮುಂದುವರೆಯಲು ಸಾಧ್ಯವಾಗಿಲ್ಲ.

**ಆಭರಣಗಳು**

ಆಭರಣವು ಸೌಂದರ್ಯಕ್ಕೆ ಅತ್ಯಂತ ನೈಸರ್ಗಿಕ ಮತ್ತು ಉಪಯುಕ್ತವಾದ ಸಹವರ್ತಿಯಾಗಿದೆ. ಆಭರಣಗಳನ್ನು ಧರಿಸುವುದು ಮಾನವನ ಪ್ರೀತಿ ಮತ್ತು ಅಲಂಕಾರದ ಒಂದು ಬಾಹ್ಯ ಪ್ರದರ್ಶನ ವಾಗಿದೆ. ಮಾನವನ ಈ ನೈಸರ್ಗಿಕ ಪ್ರವೃತ್ತಿಯು ಹಲವಾರು ವಿಧಗಳಲ್ಲಿ ಮತ್ತು ಹಲವಾರು ಕೃತಿಗಳಲ್ಲಿ ವ್ಯಕ್ತವಾಗಿದೆ. ಆಭರಣವು ಈ ರೀತಿಯಾಗಿ ಒಂದು ರೀತಿಯ ಪ್ರದರ್ಶನವಾದರೆ ಕಲೆಯು ನಾಗರೀಕತೆಯ ಆರಂಭದಷ್ಟೇ ಪುರಾತನವಾದದ್ದು. ಆಭರಣಗಳು ಮನುಷ್ಯನ ಆಕೃತಿಯ ತಲೆಯಿಂದ ಹಿಡಿದು ಪಾದದವರೆಗೂ ಅಲಂಕರಿಸಿವೆ. ದೈವರೂಪವು ಮಾನವನ ಆದರ್ಶರೂಪ ಎಂದು ಊಹಿಸಲಾಗಿದ್ದು ಈ ಕಾರಣದಿಂದ ನಾವು ದೇವಾಲಯಗಳಲ್ಲಿ ದೇವರುಗಳು, ರಾಜರು ಮತ್ತು ರಾಣಿಯರಂತೆ ಅಲಂಕೃತಗೊಂಡಿರುವುದನ್ನು ಕಾಣುತ್ತೇವೆ. ಈ ರೀತಿಯಾಗಿ ದೇವರು ಮತ್ತು ದೇವತೆಗಳು ಶಿಲ್ಪಿಗಳಲ್ಲಿ ಮತ್ತು ಚಿತ್ರಕಲೆಯಲ್ಲಿ ಇದೇ ರೀತಿಯಲ್ಲಿ ಅಲಂಕೃತಗೊಂಡಿರುವುದನ್ನು ಕಾಣುತ್ತೇವೆ.

ಈ ಕಾಲದ ಶಾಸನಗಳು ಮತ್ತು ಸಾಹಿತ್ಯವು ದೇಹದ ನಾನಾ ಭಾಗಗಳಲ್ಲಿ ಪ್ರತ್ಯೇಕವಾಗಿ ತೊಡಲ್ಪಡುವ ವಿವಿಧ ಆಭರಣಗಳ ಉಲ್ಲೇಖವನ್ನು ನೀಡುತ್ತವೆ. ಚಿನ್ನದ ಆಭರಣ ಮತ್ತು ಬೆಲೆ ಬಾಳುವ ಹರಳುಗಳನ್ನು ತಯಾರಿಸುವ ಕಲೆಯು ಸೋಮೇಶ್ವರನ ಕಾಲದಲ್ಲೇ ಪ್ರಗತಿಯ ಹಂತ ವನ್ನು ತಲುಪಿತ್ತು. ಅಷ್ಟೇ ಅಲ್ಲದೇ ಈ ಪ್ರಗತಿಯು ಕರ್ನಾಟಕಕಕ್ಕೆ ಮಾತ್ರ ಸೀಮಿತವಾಗಿರದೇ ಇಡೀ ದಕ್ಷಿಣ ಭಾರತವನ್ನು ವ್ಯಾಪಿಸಿತ್ತು. ಆಭರಣ ಕೈಗಾರಿಕೆಯು ವಿಸ್ತಾರವಾದ ಕ್ಷೇತ್ರವನ್ನು ಹೊಂದಿತ್ತು. ಕಲ್ಪನೆ ಮತ್ತು ಸೃಜನ ಶೀಲತೆಗೆ ಇಲ್ಲಿ ಹೆಚ್ಚಿನ ವ್ಯಾಪ್ತಿಯಿತ್ತು. ಬೆಲೆಬಾಳುವ ಹರಳುಗಳು, ವಜ್ರ, ನೀಲಮಣಿ, ಹವಳಗಳು, ಚಂದ್ರಕಾಂತಮಣಿ, ನೀಲಿ ಹವಳ, ಗೋಮೇಧಕ, ಪುಷ್ಯರಾಗ, ಕೆಂಪು ಹವಳಗಳು, ರತ್ನಗಳು, ಕಾರ್ಕೇತನ ಮೊದಲಾದವುಗಳ ವ್ಯಾಪಾರವು ಎಲ್ಲೆಡೆ ವ್ಯಾಪಿಸಿತ್ತು ಮತ್ತು ತೀವ್ರವಾಗಿ ಬೆಳೆಯುತ್ತಿರುವ ವ್ಯಾಪಾರವಾಗಿತ್ತು.[48] ಆಭರಣವು ಸಂಪತ್ತಿನ ಸಾಂಪ್ರದಾಯಿಕ ಮೂಲವಾಗಿ ಉಳಿಯಿತು. ಬೆಲೆಬಾಳುವ ಹರಳುಗಳಾದ ವಜ್ರ, ಹವಳ, ಮಾಣಿಕ್ಯ ಮತ್ತು ರತ್ನಗಳ ಗುಣಗಳು ಹಾಗೂ ಲೋಪಗಳನ್ನು ಗುರುತಿಸಲಾಗುತ್ತಿತ್ತು.

ಆ ಕಾಲದ ಕೆಲವು ಆಭರಣಗಳು ಅವುಗಳ ಈಗಿನ ಪ್ರತಿನಿಧಿಗಳನ್ನು ಹೊಂದಿವೆ. ಅವುಗಳು ಬೇರೆ ಹೆಸರಿನಿಂದ ಕರೆಯಲ್ಪಡುತ್ತಿದ್ದು ಕೆಲವಕ್ಕೆ ಯಾವುದೇ ಪ್ರತಿನಿಧಿಗಳಿಲ್ಲದೆ ಈಗಿನ ಬಳಕೆ ಯಿಂದ ದೂರವಾಗಿವೆ. ಬಳೆಗಳಿಗೆ ವಿಧವಿಧವಾದ ಹೊಂಬಣ್ಣ, ಗಾಜಿನ ಸಣ್ಣಸಣ್ಣ ಚೂರಿನಿಂದ, ಮಣಿಗಳಿಂದ, ಸಣ್ಣದಾಗಿ ಕೆತ್ತಿದ ಬಂಗಾರದ ತುಣುಕುಗಳೂ ಮತ್ತು ಬೆಲೆಬಾಳುವ ಹರಳುಗಳಿಂದ ಕೂಡಿದ ಆಭರಣಗಳನ್ನು ಪುರುಷರು ಧರಿಸುತ್ತಿದ್ದರು. ಜೊತೆಗೆ ಮಹಿಳೆಯರು ಹಾಗೂ ಮಕ್ಕಳು ಸಹ ಧರಿಸುತ್ತಿದ್ದರು. ಕಿವಿಯೋಲೆಗಳನ್ನು ಹೆಚ್ಚಾಗಿ ಧರಿಸುವುದು ಅಂದಿನ ಸಂಪ್ರದಾಯವಾಗಿತ್ತು.

ಕಿವಿಯೋಲೆಗಳು ಭಾರವಾಗಿದ್ದ ಕಾರಣ ಮುತ್ತಿನ ಹಾರವನ್ನು ಇವುಗಳಿಗೆ ಪೋಣಿಸಿ ಅದನ್ನು ಕೂದಲಿಗೆ ಸಿಗಿಸಲಾಗುತ್ತಿತ್ತು. ಮೂಗುನತ್ತನ್ನು ಸಾಮಾನ್ಯವಾಗಿ ಹೆಂಗಸರು ಧರಿಸುತ್ತಿದ್ದರು. ಅದನ್ನು 'ಮುಕೊದಾವೆ' ಎಂದು ಕರೆಯಲಾಗುತ್ತಿತ್ತು.[49] ಮೂಗಿನ ಆಭರಣದ ಆಗಮನದ ಬಗ್ಗೆ ವಿದ್ವಾಂಸರು ನಾನಾ ಬಗೆಯ ಅಭಿಪ್ರಾಯಗಳನ್ನು ತಳೆದಿದ್ದಾರೆ. ಒಟ್ಟಾರೆ ಇದು ವೀರಸೋಮೇಶ್ವರನ ಕಾಲದಲ್ಲಿ ಹೆಂಗಸರು ಧರಿಸುತ್ತಿದ್ದಾರೆಂದು ತಿಳಿದುಬಂದಿದೆ. ಇನ್ನೊಂದು ಆಭರಣವೆಂದರೆ ಅದು ಡಾಬು. ಇದನ್ನು ಚಿನ್ನದಲ್ಲಿ ಮಾಡಲಾಗಿದ್ದು ಬಹಳ ಸುಂದರವಾಗಿದ್ದ ಈ ನಮೂನೆಯು ಸಾಮಾನ್ಯವಾಗಿ ಪುರುಷ ಮತ್ತು ಸ್ತ್ರೀ ಶಿಲ್ಪಿಗಳ ಮೇಲೆ ಕಾಣಸಿಗುತ್ತದೆ.

ಇನ್ನೊಂದು ರೀತಿಯಾದ ಸೊಂಟದ ಪಟ್ಟಿಯೆಂದರೆ ಹವಳ ಮತ್ತು ಮುತ್ತುಗಳ ಜೋಡಿಯಿಂದ ತಯಾರಿಸಿದ ಚಿನ್ನದ್ದಾಗಿತ್ತು. ಬಹಳ ಸಂಕೀರ್ಣ ನಮೂನೆಗಳಲ್ಲಿ ತಯಾರಾದ ವಿವಿಧ ಬಗೆಯ ಸೊಂಟದ ಪಟ್ಟಿಯ ಬಗ್ಗೆ ಹಲವು ಶಿಲ್ಪಪ್ರತಿಮೆಗಳು ವರ್ಣನೆಯನ್ನು ನೀಡುತ್ತವೆ. ಅದರ ಭಾಗಗಳಲ್ಲಿ ಅಲಂಕಾರಿಕ ಕೊಂಡಿಯ ಜೋಡಿಗಳು ಇವುಗಳ ಜೊತೆ ಹವಳಗಳು, ಸಣ್ಣ ಮತ್ತು ದೊಡ್ಡ ಹೂವುಗಳನ್ನು ಒಳಗೊಂಡ ರತ್ನಗಳು ಮತ್ತು ಹಾರದಂತೆ ಜೋಲಾಡುತ್ತಿರುವ ಲೋಲಕ ಇವುಗಳ ವರ್ಣನೆಯನ್ನು ಕಾಣುತ್ತೇವೆ. ಮುಖ್ಯ ಪದಕದ ತುದಿಯು ಮೊಗ್ಗಿನ ರೀತಿಯ ಹವಳಗಳ ನ್ನೊಳಗೊಂಡಿತ್ತು ಮತ್ತು ದಾರದ ಎಳೆಗಳಿಂದ ಇವುಗಳನ್ನು ಇಳಿ ಬಿಡಲಾಗುತ್ತಿತ್ತು. ಇದರ ಪ್ರತಿ ಕುಚ್ಚಿನ ಮಧ್ಯಭಾಗದಲ್ಲಿ ಮತ್ತೊಂದು ಸಣ್ಣ ಲೋಲಕವಿರುತ್ತಿತ್ತು. ಈ ಇಡೀ ಆಭರಣಗಳನ್ನು ಮುತ್ತುಗಳಿಂದ ಅಲಂಕರಿಸಲಾಗಿತ್ತು ಮತ್ತು ಹಲವಾರು ಭಾಗಗಳಲ್ಲಿ ಮುತ್ತುಗಳನ್ನು ಪೋಣಿಸಲಾಗಿತ್ತು. ಕೆಲವು ಸಮಯ ಸಣ್ಣ ಗಂಟೆಗಳನ್ನೊಳಗೊಂಡ ಮಾವಿನಕಾಯಿಯಾಕಾರದ ಮಣಿಗಳನ್ನು ಈ ಸೊಂಟಪಟ್ಟಿಯನ್ನು ತಯಾರಿಸುವಲ್ಲಿ ಉಪಯೋಗಿಸಲಾಗುತ್ತಿತ್ತು. ಹಾವಿನಾಕಾರದ ಸೊಂಟಪಟ್ಟಿಯನ್ನು ಸಾಮಾನ್ಯವಾಗಿ ಕೆಳವರ್ಗದ ಮಹಿಳೆಯರು ಉಪಯೋಗಿಸುತ್ತಿರಲಿಲ್ಲ. ಈ ಆಭರಣಗಳನ್ನು 'ಕಟಿಕುಂಚನ ಕಟಿಸೂತ್ರ' ಎಂದು ಕರೆಯಲಾಗುತ್ತಿತ್ತು. ಬೇಲೂರಿನಲ್ಲಿರುವ ದೇವಾಲಯದ ಗೋಡೆಗಳ ಮೇಲೆ ಚಿತ್ರಿಸಲಾಗಿರುವ ದೇವರು ಮತ್ತು ದೇವತೆಗಳು ಮತ್ತು ಹಳೇಬೀಡು ಹಾಗೂ ಇನ್ನಿತರ ದೇವಾಲಯಗಳಲ್ಲಿ ಚಿತ್ರಿತವಾಗಿರುವ ಸೊಂಟದ ಪಟ್ಟಿಯ ಆಭರಣವು ಸಂಕೀರ್ಣ ನಮೂನೆಗಳಲ್ಲಿದ್ದು ಆಭರಣಕಾರನು ಇವುಗಳನ್ನು ನಿಯೋಜಿಸುವಲ್ಲಿ ಮತ್ತು ತಯಾರಿಸುವಲ್ಲಿ ಯಾವ ರೀತಿಯ ಚಾಕಚಕ್ಯತೆಯನ್ನು ಉಪಯೋಗಿಸಿದ್ದಾನೆಂಬುದು ನಮ್ಮೆಲ್ಲರನ್ನು ಇಂದಿಗೂ ಬೆರಗು ಮೂಡಿಸುವಂತಿದೆ. ತಲೆಗೆ ಸಂಬಂಧಿಸಿದ ಆಭರಣವೆಂದರೆ ಹಲವಾರು ಮಾದರಿಗಳ ಕಿರೀಟಗಳು. ಇವುಗಳನ್ನು 'ಮುದಿ ಅಥವಾ ಮುಕುಟಂ' ಎಂದು ಕರೆಯಲಾಗುತ್ತಿತ್ತು. 1095ರ ಒಂದು ಶಾಸನವು ಈ ಕಿರೀಟದ ಬಗ್ಗೆ ಹೇಳುತ್ತದೆ. ಸಾಮಾನ್ಯವಾಗಿ ಈ ಕಿರೀಟವನ್ನು ರಾಜ ಮತ್ತು ರಾಣಿಯರು ಹಾಗೂ ದೇವದೇವತೆಗಳು ತೊಡುತ್ತಿದ್ದರು. ಕಿರೀಟವು ಶಂಕುವಿನಾಕಾರದಲ್ಲಿ ಅಥವಾ ಪಿರಿಮಿಡ್ಡಿನಾಕಾರದಲ್ಲಿರುತ್ತಿತ್ತು. ಅದನ್ನು ಚಿನ್ನದಲ್ಲಿ ತಯಾರಿಸಲಾಗಿದ್ದು ಹವಳಗಳಾದ ವಜ್ರ, ಮುತ್ತಿನ ಮಣಿಗಳು ಮತ್ತು ಹರಳುಗಳಿಂದ ಕೂಡಿದ್ದು ಕಿರೀಟದ ಮುಂಭಾಗದ ಕವಚದ ಹೊರಭಾಗದ ಇಕ್ಕೆಲಗಳಿಂದ ಇವುಗಳನ್ನು ತೂಗುಬಿಡಲಾಗಿತ್ತು.

ಕೆಲವು ಕಿರೀಟಗಳಲ್ಲಿ ಸರಗಳ ಕುಚ್ಚು ಮತ್ತು ಲೋಲಕಗಳು ಇಳಿ ಬಿದ್ದಿರುವುದನ್ನು ನೋಡುತ್ತೇವೆ. ಇನ್ನೊಂದು ಆಭರಣವೆಂದರೆ ಶಿರೋಮಣಿ ಅಥವಾ ತಲೆಯ ಆಭರಣ ಇದನ್ನು ತುರುಬಿನಲ್ಲಿ ಧರಿಸಲಾಗುತ್ತಿತ್ತು. ಇದನ್ನು 'ಚೂಡಾಮಣಿ'[50] ಎಂದೂ ಕರೆಯಲಾಗುತ್ತಿತ್ತು. ಇನ್ನೊಂದು ರೀತಿಯಾದ ಚಿನ್ನದಿಂದ ತಯಾರಿಸಿದ ಹಾಗೂ ಮುತ್ತಿನ ಸರಗಳಿಂದ ಕೂಡಿದ ಆಭರಣವನ್ನು ತಲೆ ಮೇಲೆ ಧರಿಸಲಾಗುತ್ತಿತ್ತು. ಈ ಆಭರಣವನ್ನು ಹಣೆಯ ಮೇಲೆ ತೂಗು ಬಿಡಲಾಗುತ್ತಿತ್ತು. ಇದನ್ನು 'ಉತ್ತಂಶ' ಎಂದು ಕರೆಯಲಾಗುತ್ತಿತ್ತು.[51] ಕೊಳವೆಯಾಕಾರದ ಹಾಗೂ ಪಿರಮಿಡ್ಡಿನಾಕಾರದ ನಾನಾ ಬಗೆಯ ಕಿರೀಟಗಳ ವರ್ಣನೆಯನ್ನು ಶಿಲ್ಪ ಪತ್ರಿಮೆಗಳು ಮಾಡುತ್ತವೆ. ಇವುಗಳನ್ನು ಕರಂದ ಮುಕುಟವೆಂದು ಕರೆಯಲಾಗುತ್ತಿತ್ತು. ಬದನಿಕೆಯ ಚಿತ್ರದಲ್ಲೊಂದರಲ್ಲಿರುವ ಯಕ್ಷನ ಕಿರೀಟದ ಮೇಲಿರುವಂತೆ ಇವುಗಳ ಮೇಲೆ ಕುಡಿಕೆಗಳಿರುತ್ತವೆ. ಬಹುತೇಕ ಇವುಗಳ ಹಿಂದೆ ಶಿರಚಕ್ರವಿರುತ್ತದೆ. ಬಹುಶಃ ಪ್ರತಿಮೆಗಳ ತಲೆಯ ಹಿಂದೆ ದೊಡ್ಡ ತೇಜೋವಲಯದ ಮೂಲ ದಿಂದ ಬಂದುದ್ದಾಗಿ ಹೇಳಲಾಗಿದೆ.[52] ಈ ತಟ್ಟೆಯಂತಹ ಆಭರಣವನ್ನು ನರ್ತಕಿಯರು ಮತ್ತು ವಧುಗಳು ಇಂದಿಗೂ ಧರಿಸುವುದನ್ನು ನೋಡಬಹುದು. ಪುರುಷರು ಮತ್ತು ಮಹಿಳೆಯರು 'ಕರ್ಣಭೂಷಣ'[53] ಎಂಬ ಕಿವಿಯಾಭರಣಗಳನ್ನು ತೊಡುತ್ತಿದ್ದರು. ಈ ಆಭರಣವು ಮಕುರ ಕುಂಡಲ ಮತ್ತು ಪುತ್ರ ಕುಂಡಲವೆಂದು ಹೆಸರಾಗಿತ್ತು. ಈ ಆಭರಣವು ಇಂದು ಓಲೆಯಾಗಿ ಉಳಿದಿದೆ. ಕಿವಿಯ ಮೇಲ್ಭಾಗದಲ್ಲಿ ಮಹಿಳೆಯರು ಇನ್ನೊಂದು ರೀತಿಯ ಆಭರಣವನ್ನು ಧರಿಸುತ್ತಿದ್ದರು. ಹಳ್ಳಿಗಾಡು ಪ್ರದೇಶಗಳಲ್ಲಿ ಹೆಚ್ಚಾಗಿ ಈ ಆಭರಣವನ್ನು ಇಂದಿಗೂ ಧರಿಸಲಾಗುತ್ತಿದೆ.

ಕತ್ತಿನ ಹಾರಗಳಲ್ಲಿ ನಮಗೆ ಹಲವಾರು ನಮೂನೆಗಳು ಸಿಗುತ್ತವೆ. ಮುತ್ತಿನಹಾರ[54] ಮಣಿಯ ಹಾರಗಳನ್ನು[55] ಈ ಕಾಲದ ಶಾಸನಗಳು ಮತ್ತು ಸಾಹಿತ್ಯಾಧಾರಗಳಲ್ಲಿ ಆಗಾಗ್ಗೆ ಪ್ರಸ್ತಾಪ ಗೊಂಡಿರುವುದನ್ನು ಕಾಣುತ್ತೇವೆ. ಕುತ್ತಿಗೆಯ ಆಭರಣದ ಕೆಲವನ್ನು ಧರಿಸಲಾಗುತ್ತಿತ್ತು. ಇನ್ನೂ ಕೆಲವನ್ನು ಕತ್ತಿನ ಸುತ್ತ ಧರಿಸಲಾಗುತ್ತಿತ್ತು. ಕತ್ತಿನ ಹಾರಗಳಲ್ಲಿ ಬಹುಪಾಲು ಅವುಗಳ ಹವಳದ ಸರಗಳಲ್ಲಿ ಭಿನ್ನವಾಗಿದ್ದವು. ಇವುಗಳ ಸಂಖ್ಯೆಯು ಮೂರರಿಂದ ಹಿಡಿದು ಏಳರವರೆಗೆ ಇದ್ದು ಪ್ರತಿ ಯೊಂದನ್ನು ಸರದ ಹಿಂದೆ ಕೊಂಡಿಯಿಂದ ಕಟ್ಟಲಾಗುತ್ತಿತ್ತು. ಇವುಗಳ ಮಧ್ಯೆ ಒಂದು ಪದಕ ವಿರುತ್ತಿತ್ತು. ಈ ಪದಕವು ಅದರ ನಮೂನೆಯಲ್ಲಿ ಹವಳಗಳ ಸಂಖ್ಯೆಯಲ್ಲಿ ಮತ್ತು ವಿಧಾನದಲ್ಲಿ ಭಿನ್ನವಾಗಿರುತ್ತಿತ್ತು. ನುಗ್ಗೇಹಳ್ಳಿ ದೇವಸ್ಥಾನದ ನರ್ತಿಸುತ್ತಿರುವ ಲಕ್ಷ್ಮೀ ವಿಗ್ರಹದ ಮೇಲೆ ಮುತ್ತಿನ ಹಾರವು ಮಂಡಿಯವರೆಗೂ ಇಳಿ ಬಿದ್ದಿರುವುದನ್ನು ಕಾಣುತ್ತೇವೆ.[56] ಋಷಿಗಳು ದಾರಕ್ಕೆ ಪೋಣಿಸಿದ

ರುದ್ರಾಕ್ಷಿಮಣಿಯಿಂದ ಕೂಡಿದ ಕುತ್ತಿಗೆ ಪಟ್ಟಿಯನ್ನು ಕುತ್ತಿಗೆಯ ಸುತ್ತ ಬಿಗಿದಂತೆ ತೊಡುತ್ತಿದ್ದರು. ತಾಳಿ ಅಥವಾ ಮಂಗಳ ಸೂತ್ರವು ಮದುವೆಯ ಪವಿತ್ರ ಸಂಕೇತವಾಗಿರುವುದನ್ನು ಈ ಕಾಲದ ಸಾಹಿತ್ಯದಲ್ಲಿ ಪ್ರಸ್ತಾಪಿಸಲಾಗಿದೆ.[57]

ತೋಳ್ಬಂದಿ ಮತ್ತು ಕೈಬಂಧಿಗಳು ತೋಳುಗಳು ಮತ್ತು ಕೈಗಳನ್ನು ಅಲಂಕರಿಸುತ್ತಿದ್ದವು. ಸಾಮಾನ್ಯವಾಗಿ ಈ ಆಭರಣಗಳನ್ನು ಉಪಯೋಗಿಸಲಾಗುತ್ತಿತ್ತು. ನಾವು ಹಲವಾರು ವಿಗ್ರಹಗಳು ಮತ್ತು ಪ್ರತಿಮೆಗಳ ತೋಳಿನ ಮೇಲೆ ಚಿನ್ನದಿಂದ ಮಾಡಿದ ವಿವಿಧ ಬಗೆಯ ಬಾಹುವಲಯ ಆಭರಣವನ್ನು ತೊಡುತ್ತಿದ್ದುದನ್ನು ಕಾಣುತ್ತೇವೆ. ಕೆಲವು ದೇವದೇವತೆಯರ ಮೂರ್ತಿಗಳು ಭುಜ ಕೀರ್ತಿ ಅಥವಾ ಭುಜಸ್ಥಂಭವೆಂಬ ಭುಜದ ಆಭರಣಗಳನ್ನು ಹೊಂದಿರುವುದನ್ನು ಕಾಣಬಹುದು.[58] ಇದು ಒಂದು ಸಣ್ಣ ಕತ್ತಿನ ಹಾರದಂತಿದ್ದು ಮೂರು ಮುತ್ತಿನ ಸರಗಳು ಮತ್ತು ಭುಜದ ಸ್ವಲ್ಪ ಮೇಲ್ಭಾಗದಿಂದ ಜಾರಿ ಬಿದ್ದಿರುವ ದೊಡ್ಡ ಹವಳಗಳನ್ನೊಳಗೊಂಡಿದೆ. ಕೈಗಳನ್ನಲಂಕರಿಸುತ್ತಿದ್ದ ಆಭರಣಗಳನ್ನು 'ಕಂಕಣ'[59] ವೆಂದು ಕರೆಯಲಾಗುತ್ತಿತ್ತು. ಸಾಮಾನ್ಯವಾಗಿ ಎಲ್ಲಾ ಮಹಿಳೆಯರು ಇದನ್ನು ಧರಿಸುತ್ತಿದ್ದರು. ಬಳೆಗಾರನ ಬಗ್ಗೆ ಒಂದು ಶಾಸನವು ಪ್ರಸ್ತಾಪಿಸುತ್ತದೆ.[60] ಕಡಗವು ಇನ್ನೊಂದು ರೀತಿಯಾದ ಕೈಬಳಕೆಯಾಗಿತ್ತು. ಇದನ್ನು ಚಿನ್ನದಿಂದ ಅಥವಾ ಮುತ್ತು ರತ್ನದಿಂದ ತಯಾರಿಸಲಾಗುತ್ತಿತ್ತು. ಇದನ್ನು 'ರತ್ನಕಡಗ' ಎಂದು ಕರೆಯಲಾಗುತ್ತಿತ್ತು. ಕೆಲವು ಮುತ್ತಿನ ಕಡಗಗಳು ಇದ್ದವು. ಕೈ ಉಂಗುರಗಳನ್ನು ಗಂಡಸರು ಹಾಗೂ ಹೆಂಗಸರಿಬ್ಬರೂ ಧರಿಸುತ್ತಿದ್ದರು. ಈ ಆಭರಣವು ಹವಳದ ಸಂಖ್ಯೆಯಲ್ಲಿ ಭಿನ್ನವಾಗಿತ್ತು. ತ್ರಿಕೋನಾಕಾರದ ಉಂಗುರ ಮತ್ತು ಅದರ ಮಧ್ಯದಲ್ಲಿ ಹೀರಾಹರಳೂ.[61] ಎರಡು ವಜ್ರಗಳ ಮಧ್ಯೆ ರತ್ನದ ಜೊತೆಯಿರುವ ಉಂಗುರ, ಹವಳ ಗಳಿಂದ ಸುತ್ತುವರೆದ ಮತ್ತು ಮಧ್ಯದಲ್ಲಿ ಹೀರಾ ಹರಳುಗಳನ್ನು ಸೇರಿಸಿದ ಉಂಗುರ, ಮೂರು ಹೀರಾ ಹರಳುಗಳುಳ್ಳ ಉಂಗುರ, ಇವೆಲ್ಲದರ ಪ್ರಸ್ತಾಪವನ್ನು ಮಾಡಲಾಗಿದೆ. ಒಂಭತ್ತು ಗ್ರಹಗಳಿಗೆ ಸಂಬಂಧಿಸಿದಂತೆ ಒಂಭತ್ತು ರತ್ನಗಳನ್ನು ಒಳಗೊಂಡ ಮತ್ತು ವೃತ್ತಾಕಾರದಲ್ಲಿ ಜೋಡಿಸಿದ ಉಂಗುರವು ಅತ್ಯಂತ ಉತ್ತಮ ಉಂಗುರವೆಂದು ಪರಿಗಣಿಸಲ್ಪಟ್ಟಿತ್ತು. ಇದು ನವಗ್ರಹ ಉಂಗುರ ವಾಗಿತ್ತು. ಇನ್ನೊಂದು ಒಡವೆಯೆಂದರೆ ಕತ್ತಿನಹಾರ. ಇದು ಪದಕಗಳನ್ನೊಳಗೊಂಡ ಲೋಲಕವನ್ನು ಹೊಂದಿತ್ತು. ಈ ಪದಕವು ಹಳಗಳಾದ ಹಸಿರು, ಕೆಂಪು, ನೀಲಿ ಮತ್ತು ನಾಯಕನೊಂದಿಗೆ ಕೇಂದ್ರ ಹವಳವನ್ನು ಹೊಂದಿದ ಎದೆಯ ಭಾಗವನ್ನು ಅಲಂಕರಿಸಲು ಇದನ್ನು ಬಳಸಲಾಗುತ್ತಿತ್ತು. ಮುತ್ತುಗಳ ಗೊಂಚಲನ್ನೊಳಗೊಂಡ ಭುಜದ ಆಭರಣ, ಚಿನ್ನದಲ್ಲಿ ಸೇರಿಸಿದ ರತ್ನಗಳನ್ನೊಳಗೊಂಡ

ಭುಜದ ಕವಚ, ಎರಡು ವಜ್ರಗಳ ಮಧ್ಯೆ ಒಂದು ಹವಳವನ್ನು ಸೇರಿಸಿದ ಕೈ ಕಂಕಣ, ಚಿನ್ನದಿಂದ ಸುತ್ತುವರಿದ ಮುತ್ತು ರತ್ನಗಳನ್ನೊಳಗೊಂಡ ನಾಗಪಾನ ಅತವಾ ತೋಳಿನಾಭಾರಣ,[62] ಕಿವಿಯ ಓಲೆ, ಚೂಡಕ, ಮಣಿಕಟ್ಟಿನ ಮೇಲೆ ಕಟ್ಟುತ್ತಿದ್ದ ಆಭರಣ, ಚಿನ್ನದ ಗಂಟೆಗಳಿಂದ ಕೂಡಿದ ಚಿನ್ನದ ಪಟ್ಟಿ ಇರುವ ಸೊಂಟದ ಪಟ್ಟಿ ರತ್ನಗಳನ್ನು ಒಳಗೊಂಡ ಅಥವಾ ಅವುಗಳಲ್ಲದ ಕಾಲಂದಿಗೆ ಹೀಗೆ ಹಲವಾರು ಆಭರಣಗಳ ಪ್ರಸ್ತಾಪವನ್ನು ಮಾಡಲಾಗಿದೆ.[63]

ನರ್ತಿಸುತ್ತಿರುವ ದೇವತೆಗಳ ಪ್ರತಿಮೆಗಳ ಕಾಲು ಮತ್ತು ಪಾದದ ಹಲವಾರು ನಮೂನೆಗಳ ಆಭರಣಗಳನ್ನು ತೋರಿಸುತ್ತವೆ. ಎಲ್ಲಾ ಪ್ರತಿಮೆಗಳಲ್ಲೂ ಕಾಲಂದಿಗೆಯು ಗಂಟೆಯೊಂದಿಗೆ ಅಥವಾ ಗಂಟೆಯಿಲ್ಲದೆ ಕಂಡುಬರುತ್ತದೆ. ಗಂಡಪೇಂದರ[64] ತೋಡರ ಮತ್ತು ಪೆಂಡೆಗಳು ಮುತ್ತು ರತ್ನಗಳ ನ್ನೊಳಗೊಂಡ ಪದಕಗಳೊಂದಿಗೆ ಗರುಡರ ಎಡಕಾಲಿಗೆ ತೊಡಿಸಲಾಗುತ್ತಿತ್ತು. ಲತಾಪಟ್ಟವೆಂದು[65] ಕರೆಯಲ್ಪಡುತ್ತಿದ್ದ ವೀರ ಭಟನ ಶಿರೋಮಾಲೆಯನ್ನು ಸಾಮಾನ್ಯವಾಗಿ ವೀರರು ತೊಡುತ್ತಿದ್ದರು. ಶ್ರೀರಂಗನ ದೇವರಾದ ಶ್ರೀರಂಗನಾಥ ದೇವರಿಗೆ ಕೊಡುಗೆಯಾಗಿ ಕೊಟ್ಟ ಆಭರಣದಲ್ಲಿ ಮಾಣಿಕ್ಯದ ಸರ, ಮುತ್ತು ರತ್ನಗಳ ಒಂದು ಕಿರೀಟ, ಮುತ್ತಿನಹಾರ ಮತ್ತಿನ್ನಿತರ ಒಡವೆಗಳ ಬಗ್ಗೆ ಪ್ರಸ್ತಾಪ ವನ್ನು ಮಾಡಲಾಗಿದೆ. ಮಾರ್ಕೊಪೋಲೋವಿನ ಪ್ರಕಾರ ಕೋರಮಂಡಲ ತೀರದ ರಾಜನು ತನ್ನ ಕುತ್ತಿಗೆಯ ಸುತ್ತ ಬೆಲೆ ಬಾಳುವ ಹರಳುಗಳಿಂದ ಕೂಡಿದ ಹಾರವನ್ನು ತೊಟ್ಟಿದ್ದನು. ಮಾಣಿಕ್ಯ, ನೀಲಿಮಣಿ, ಪಚ್ಚೆ ಮೊದಲಾದ ಹೆಚ್ಚು ಬೆಲೆ ಬಾಳುವ ಆಭರಣವನ್ನು ಧರಿಸಿದ್ದನೆಂದು ತಿಳಿದು ಬಂದಿದೆ. ತನ್ನ ಕುತ್ತಿಗೆಯ ಸುತ್ತಮುತ್ತ ರತ್ನಗಳಿಂದ ಕೂಡಿದ ಒಟ್ಟಾಗಿ 104 ಮಾಣಿಕ್ಯಗಳಿಂದ ಕೂಡಿದ ತೆಳುವಾದ ರೇಷ್ಮೆ ಹಾರವನ್ನು ಕಟ್ಟಿದ್ದನು ಹಾಗೂ ತನ್ನ ತೋಳಿನ ಸುತ್ತ ಮೂರು ಪ್ರತ್ಯೇಕ ಸ್ಥಳಗಳಲ್ಲಿ ಹೆಚ್ಚು ಬೆಲೆ ಬಾಳುವ ಹರಳುಗಳು ಮತ್ತು ಅಮೂಲ್ಯ ರತ್ನಗಳನ್ನು ಹೊಂದಿದ್ದನೆಂದು ತಿಳಿಸಿದ್ದಾರೆ. ತನ್ನ ಕಾಲಿನ ಸುತ್ತಲೂ ಮುತ್ತುರತ್ನಗಳಿಂದ ಕೂಡಿದ ಕಡಗಗಳನ್ನು ಕಾಲಿನ ಸುತ್ತ ಪ್ರತ್ಯೇಕ ಸ್ಥಳಗಳಲ್ಲಿ ತೊಟ್ಟಿದ್ದು, ಕಾಲಿನ ಬೆರಳಿಗೆ ತನ್ನ ವೈಡೂರ್ಯಗಳಿಂದ ಕೂಡಿದ ಕಾಲುಂಗರವನ್ನು ತೊಟ್ಟಿದ್ದನೆಂದು ವಿವರಿಸಿದ್ದಾರೆ.[66]

ರಾಜಮನೆತನದವರು ತೊಡುತ್ತಿದ್ದ ಆಭರಣಗಳ ಬಗೆಗಿನ ಈ ಮೇಲ್ಕಂಡ ವಿವರಣೆಯು ರಾಜ ಮತ್ತು ರಾಜಕುಮಾರರು ನಿರ್ದಿಷ್ಟವಾಗಿ ಹಬ್ಬಹರಿದಿನಗಳಲ್ಲಿ ಸಾರ್ವಜನಿಕವಾಗಿ ಕಾಣಿಸಿಕೊಳ್ಳ ಬೇಕಾದ ಸಂದರ್ಭಗಳಲ್ಲಿ ತೊಡುತ್ತಿದ್ದ ಹಲವಾರು ಆಭರಣಗಳನ್ನು ಪ್ರತಿನಿಧಿಸುತ್ತದೆ. ಮಾನಸೋ

ಲ್ಲಾಸದಲ್ಲಿ ವಿವರಿಸಲಾದ ಹಲವಾರು ಆಭರಣಗಳು ಈಗಿನ ಆಭರಣಗಳ ಶೈಲಿಯಲ್ಲಿಯೇ ಇವೆ ಎಂದು ಹೇಳಬಹುದು. ಆಭರಣಗಳ ಪ್ರವಾಹವು ನಿತ್ಯವಾಗಿ ಹರಿಯುತ್ತಿದ್ದರೂ ಇವೆಲ್ಲ ಆಭರಣ ಗಳನ್ನು ಈಗ ಬಳಸುವುದು ಸಂಪ್ರದಾಯಕ್ಕೆ ವಿರೋಧವಾಗಿದೆ. ಆಭರಣಗಳಿಂದ ಚಂದ್ರ, ಸೂರ್ಯ, ಮೂಡ, ರಾಖಡಿ, ಕೇತಕಿ, ಕೇವದ, ಕಾಯರಪಟ್ಟ, ವಿರೊದ್ಯ, ಜಾದವಿಂ, ವೆಂಪಲಾಪನ, ಬಾಗದ್ಯ ವೇದಮ್ ಇವುಗಳನ್ನು ಸ್ವಲ್ಪ ಬದಲಾವಣೆಯ ಹೆಸರುಗಳಿಂದ ಮಾನಸೋಲ್ಲಾಸದಲ್ಲಿ ವಿವರಿಸ ಲಾಗಿದೆ.[67] ಈ ರೀತಿಯಾಗಿ ಚಿನ್ನದ ಆಚಾರಿ ಮತ್ತು ಆಭರಣಕಾರ ರಿಬ್ಬರೂ ರಾಜಮನೆತನದವರು ಇನ್ನಿತರ ಮೇಲ್ವರ್ಗದವರ ಅತ್ಯಾಧುನಿಕ ಶೈಲಿಯ ಒಡವೆಗಳು ಹಾಗೂ ಸಮಾಜದ ಇತರೆ ವರ್ಗಗಳ ಅವಶ್ಯಕತೆಗಳನ್ನು ಪೂರೈಸುವುದರಲ್ಲಿ ತಲ್ಲೀನರಾಗಿದ್ದರು.

ಈ ಕಾಲದ ಶಿಲ್ಪ ಪ್ರತಿಮೆಗಳು ಈ ಕಾಲದಲ್ಲಿನ ಕೇಶಾಲಂಕಾರದ ಬಗ್ಗೆಯೂ ತಿಳಿಸುತ್ತವೆ. ಬೇಲೂರು ಮತ್ತು ಹಳೇಬೀಡಿನ ನರ್ತಿಸುತ್ತಿರುವ ಶಿಲ್ಪಿಗಳು ಆಗಿನ ಸಂಪ್ರದಾಯದ ಬಗ್ಗೆ ಮಾತನಾಡುತ್ತವೆ. ಅವುಗಳ ಕೇಶಾಲಂಕಾರವು ಅಮೋಘ ಹಾಗೂ ವಿವಿಧ ಶೈಲಿಯದಾಗಿದೆ. ಇತ್ತೀಚಿನ ಸಿನಿಮಾ ತಾರೆಯರ ಕೇಶಾಲಂಕಾರವು ಈ ಕಾಲದ ಬೆಡಗಿಯರ ತದ್ರೂಪವೆಂದರೆ ತಪ್ಪಾಗಲಾರದು. ಚೌಲಿ ಅಥವಾ ಬೇರೆಯವರ ತಲೆಗೂದಲನ್ನು ಹಲವಾರು ಕೇಶ ವಿನ್ಯಾಸಗಳನ್ನು ಮಾಡಲು ಅನುಕೂಲವಾಗುವಂತೆ ತಲೆಗೂದಲ ಗಾತ್ರವನ್ನು ಹೆಚ್ಚಿಸಲಾಗುತ್ತಿತ್ತು. ಈಗಿನ ಮಹಿಳೆಯರು ತಮ್ಮ ಕೂದಲನ್ನು ಹೆಚ್ಚು ಉದ್ದವಾಗಿ ಕಾಣುವಂತೆ ಮಾಡಲು ಚೌಲಿಯನ್ನು ಉಪಯೋಗಿಸುವುದನ್ನು ಕಾಣಬಹುದಾಗಿದೆ. ಮೂರು ಸುತ್ತುಗಳ ಶಂಖಾಕೃತಿಯಲ್ಲಿ ತಲೆಯನ್ನು ಬಾಚುವುದು, ಎರಡು ಸುಂದರವಾದ ಜಡೆಗಳನ್ನು ಹೆಣೆಯುವುದು, ಶಂಖಾಕೃತಿಯ ಗಂಟನ್ನು ಹಾಕಿ ಅದಕ್ಕೆ ಕಾಣದಂತೆ ತಲೆಪಿನ್ನುಗಳನ್ನು ಕಲಾತ್ಮಕವಾಗಿ ಸಿಗಿಸಿ ತಲೆಯ ಮೇಲೆ ನೇರವಾಗಿ ನಿಲ್ಲಿಸ ಲಾಗುತ್ತಿತ್ತು. ಅಥವಾ ತಲೆಯ ಹಿಂದೆ ಕಾಣುವಂತೆ ಮಾಡುತ್ತಿದ್ದ ಹಲವಾರು ಕೇಶ ವಿನ್ಯಾಸ ಗಳಿದ್ದವು. ಇಷ್ಟೆಲ್ಲಾ ವಿನ್ಯಾಸಗಳು ಅಂದು ಪ್ರಚಲಿತವಿದ್ದರೂ ಸೌಂದರ್ಯವರ್ಧಕ ವಸ್ತುಗಳಾಗಿ ಲೇಪನಗಳನ್ನು ಕಣ್ಣಿಗೆ, ತುಟಿಗೆ ಮತ್ತು ಹಲ್ಲಿಗೆ ಉಪಯೋಗಿಸುತ್ತಿದ್ದರು.

ಮಾನಸೋಲ್ಲಾಸ ವಿವರಿಸುವಂತೆ ರಾಜನಿಗೆ ಮೊದಲು ಸುಗಂಧ ತೈಲದಿಂದ ತಿಕ್ಕಿದ ನಂತರ ಸುಗಂಧ ತೈಲಗಳಿಂದ ಮಾಡಿದ ಲೇಪನವನ್ನು ಹಚ್ಚಬೇಕು. ಹಲವಾರು ಪರಿಮಳ ವಸ್ತುಗಳಿಂದ ತಯಾರಿಸಿದ ನೀರನ್ನು ರಾಜನ ಸ್ನಾನಕ್ಕಾಗಿ ಬಳಸಲಾಗುತ್ತಿತ್ತು. ಗಂಧದ ಹಿಟ್ಟು ಮತ್ತು ಅರಿಸಿನ

ಪುಡಿಯನ್ನು ಮುಖ ಮತ್ತು ಎದೆಗಾಗಿ ಬಳಸುತ್ತಿದ್ದರು. ಗಂಡಸರು ಸೌಂದರ್ಯವರ್ಧಕಗಳನ್ನು ಬಳಸುತ್ತಿದ್ದ ಕೈಗಳು, ಕಾಲುಗಳು, ಕೈಬೆರಳು ಮತ್ತು ಕಾಲು ಬೆರಳುಗಳನ್ನು ಅಲಂಕರಿಸುವುದಕ್ಕಾಗಿ ವಿವಿಧ ಬಗೆಯ ಬಣ್ಣಗಳನ್ನು ಹಾಗೂ ಮುಲಾಮುಗಳನ್ನು ಬಳಸುತ್ತಿದ್ದರು. ಕೆನ್ನೆ ಮತ್ತು ಎದೆಯ ಮೇಲೆ ಅವರ ಮೋಹಕತೆಯನ್ನು ಹೆಚ್ಚಿಸಲು ಅಲಂಕೃತ ರೇಖಾಚಿತ್ರಗಳನ್ನು ರಚಿಸಿದ್ದರು. ಸಿಂಧೂರ ತಿಲಕ ಅಥವಾ ವೃತ್ತಾಕಾರದಲ್ಲಿ ಕುಂಕುಮವನ್ನು ಸ್ತ್ರೀಯರು ಮತ್ತು ಕನ್ಯೆಯರು ಹಣೆಯ ಮೇಲೆ ಇಡುತ್ತಿದ್ದರು. ಇದು ಸುಮಂಗಲಿಯ ಸಂಕೇತ ಎಂದು ಪರಿಗಣಿಸಲ್ಪಟ್ಟಿತ್ತು. ಪರಾಕ್ರಮಿಗಳು ತಮ್ಮ ವಿರೋಧಿಗಳನ್ನು ಕೊಂದು ಅವರ ಹೆಂಡತಿಯರ ಸೌಭಾಗ್ಯವನ್ನು (ಸಿಂಧೂರ) ಹೇಗೆ ಹರಣ ಮಾಡುತ್ತಿದ್ದರೆಂಬುದನ್ನು ಶಾಸನಗಳು ತಿಳಿಸುತ್ತವೆ. ವೈಯಕ್ತಿಕವಾಗಿ ಯಾವುದೇ ವೇಷಭೂಷಣ ಗಳನ್ನು ತೊಡಬೇಕೆಂಬ ಕಟ್ಟುಪಾಡುಗಳಿರಲಿಲ್ಲ. ಅದೇ ರೀತಿ ಆಕರ್ಷಣೀಯ ಉಡುಪು ಹಾಗೂ ಸುಂದರವಾದ ಒಡವೆಯನ್ನು ಧರಿಸುವಂತಿಲ್ಲವೆಂಬ ನಿರ್ಬಂಧವು ಇರಲಿಲ್ಲ.[68]

**ಆಹಾರ ಮತ್ತು ಪಾನೀಯಗಳು**

ಜೈನ ಧರ್ಮದ ಪ್ರಭಾವದಿಂದಾಗಿ ಜೀವ ಹಾಗೂ ನಿರ್ಜೀವ ಸೃಷ್ಟಿಯ ಬಗ್ಗೆ ಜನರ ದೃಷ್ಟಿ ಕೋನವು ಸಂಪೂರ್ಣವಾಗಿ ಬದಲಾವಣೆ ಹೊಂದಿತ್ತು. ಕ್ರಿ.ಶ.12 ಮತ್ತು 13ನೇಯ ಶತಮಾನಗಳಲ್ಲಿ ವೀರಶೈವ ಧರ್ಮದ ಪ್ರಭಾವದಿಂದಾಗಿ ಜನರ ಮೇಲೆ ಹೆಚ್ಚು ಬದಲಾವಣೆಯ ಗಾಳಿ ಬೀಸಿತು ಹಾಗೂ ಈ ಎರಡು ಪ್ರಮುಖ ಅಂಶಗಳು ಗಣನೀಯವಾಗಿ ಜನರ ಆಹಾರ ಪರಿಕ್ರಮವನ್ನು ಬದಲಾಯಿಸಿದವು. ಧರ್ಮ ಹಾಗೂ ಧಾರ್ಮಿಕ ಪ್ರಭಾವದಿಂದಾಗಿ ಜನರು ತಮ್ಮ ಅಭ್ಯಾಸ ಹಾಗೂ ಆಹಾರ ಕ್ರಮದಲ್ಲಿ ತಮ್ಮದೇ ಆದ ನೆಲೆಗಟ್ಟನ್ನು ಹೊಂದಿದರು. ಜನರ ದಿನನಿತ್ಯದ ಆಹಾರವು ಸಾಮಾನ್ಯವಾಗಿ ರೊಟ್ಟಿ, ಅನ್ನ, ಬೇಯಿಸಿದ ತರಕಾರಿ, ಕಡೆದ ಬೆಣ್ಣೆ ಹಗೂ ಎಣ್ಣೆ ಮತ್ತು ಸಾಂಬಾರ ಪದಾರ್ಥಗಳಿಂದ ಕೂಡಿತ್ತು. ಕೆಳವರ್ಗದವರು ತರಕಾರಿ ಹಾಗೂ ಮಸಾಲೆ ಪದಾರ್ಥಗಳೊಂದಿಗೆ ಮಾಂಸವನ್ನು ಬಳಸುತ್ತಿದ್ದರು. ಪ್ರಾಪಂಚಿಕ ಸುಖಗಳಿಗಿಂತ ಆಧ್ಯಾತ್ಮಿಕ ಬೆಳವಣಿಗೆಯತ್ತ ಭಾರತೀಯರು ಗಮನ ಹರಿಸಿದರು ಎಂದು ಹೇಳುವುದು ಅಷ್ಟೇನು ಸರಿಯೆಂದು ಕಾಣಿಸದು. ಪ್ರಾಪಂಚಿಕ ಸುಖಕ್ಕೆ ಅವರು ಸಂಪೂರ್ಣವಾಗಿ ವಿರಕ್ತರಾಗಿದ್ದರು ಎಂದು ಹೇಳುವುದು ತಪ್ಪಾಗುವುದು, ಆದರೆ ಜೀವನದ ಈ ಎರಡು ಅಂಶಗಳ ಮೇಲೆ ಸಮಾನತೆಯನ್ನು ಸಾಧಿಸಲು ಅವರು ಇಚ್ಛಿಸಿದರು. ಜೀವನದ ಈ ದೃಷ್ಟಿಕೋನವು ಆಹಾರದೊಂದಿಗೆ ಸಾಕಷ್ಟು ಮಹತ್ವವನ್ನು ಇಟ್ಟುಕೊಳ್ಳಲು ಸಹಾಯ ಮಾಡಿತು.

ಹಿಂದೂಗಳು ಮಧ್ಯ ಕುಡಿಯುವುದರಿಂದ ದೂರ ಉಳಿದಿದ್ದರು. ಹಾಗೂ ಅದನ್ನು ಸೇವಿಸುತ್ತಿದ್ದವರನ್ನು ತಡೆಯುತ್ತಿದ್ದರು. ಇದು ಅವರ ಧರ್ಮಬಾಹಿರ ಎಂದಲ್ಲ. ಆದರೆ ಆ ರೀತಿ ಮಾಡುವುದರಿಂದ ಬುದ್ದಿಮತ್ತೆಯು ಕಡಿಮೆಯಾಗಿ, ಜ್ಞಾನದ ಸಾಮರ್ಥ್ಯವನ್ನು ಕಳೆದುಕೊಂಡರೆಂಬ ಭಯದಿಂದ ಆ ರೀತಿ ಮಾಡುತ್ತಿದ್ದರು. ಶೂದ್ರರಲ್ಲಿ ಮಧ್ಯಪಾನವು ಸಾಮಾನ್ಯವಾದರೆ ಮೇಲ್ಜಾತಿ ಯವರು ಕುಡಿತದಿಂದ ದೂರ ಉಳಿದಿದ್ದರು. ಬ್ರಾಹ್ಮಣರು ಯಾವುದೇ ತೆರನಾದ ಮಧ್ಯ ವನ್ನಾಗಲಿ, ಮಾಂಸವನ್ನಾಗಲಿ ತೆಗೆದುಕೊಳ್ಳುತ್ತಿರಲಿಲ್ಲ.

ಏಲಕ್ಕಿ, ಚಂಪಕಮೊಗ್ಗು, ಖಾಸ್‌ಖಾಸ್, ಗಿಡಮೂಲಿಕೆಗಳು, ದಳ, ಮೆಣಸು, ಮಸಾಲೆ ಪದಾರ್ಥ, ಜೀರಿಗೆ, ಸಕ್ಕರೆ, ಕಾಯಿಸಿದ ಬೆಣ್ಣೆ, ಹುಣಸೆಹಣ್ಣು, ಮೊಸರು, ಕಡಲೆ, ಬಾಳೆ, ಮೊಳಕೆ ಕಾಳು, ಹೊಟ್ಟನ್ನು ತೆಗೆದ ಅಕ್ಕಿ, ಭತ್ತ, ಎಣ್ಣೆ ಮತ್ತು ಉಪ್ಪು ದಕ್ಷಿಣ ಭಾರತದಲ್ಲಿ ದೊರೆಯುತ್ತಿದ್ದ ಸಾಮಾನ್ಯವಾದ ಆಹಾರ ಪದಾರ್ಥಗಳಾಗಿದ್ದವು.[69] ಮಾಂಸಹಾರ ಪದ್ಧತಿಯು ರಾಜ ಕುಲೀನವರ್ಗ ಹಾಗೂ ಶ್ರೀಮಂತರಲ್ಲಿ ಬಹಳಷ್ಟು ಖ್ಯಾತಿಯನ್ನು ಹೊಂದಿತ್ತೆಂದು ಕಾಣಿಸುತ್ತದೆ. ಆದರೆ ಜೈನ ಧರ್ಮದ ಪ್ರಭಾವದಿಂದಾಗಿ ಸಸ್ಯಾಹಾರದ ಪ್ರವೃತ್ತಿಯೆಡೆಗೆ ಬಹಳಷ್ಟು ಪರಿಣಾಮ ವುಂಟಾಗಿತ್ತೆಂದು ತಿಳಿದುಬರುತ್ತದೆ. ಸಸ್ಯಾಹಾರ ಹಾಗೂ ಮಾಂಸಾಹಾರ ಪದಾರ್ಥಗಳೆರಡರ ಬಗೆಯು ತೋರಿಸಿರುವಂತೆ ಪಾಕವಿದ್ಯೆಯಲ್ಲಿ ಉತ್ಕೃಷ್ಟತೆಯನ್ನು ಸಾಧಿಸಿದ್ದಾಗಿ ತಿಳಿದುಬರುತ್ತದೆ. ಇದು ಚಲನಾತ್ಮಕತೆ ಹಾಗೂ ಬದಲಾವಣೆಯನ್ನು ತೋರಿಸುತ್ತದೆ. ಮೊದಲು ತಿಳಿಸಿದ ಆಹಾರ ಪದಾರ್ಥಗಳಲ್ಲಿ ಕೆಲವು ಇನ್ನೂ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡಿರುವುದನ್ನು ಕಾಣಬಹುದಾಗಿದೆ.

## ಕ್ರೀಡೆ ಮತ್ತು ಮನೋರಂಜನೆ

ಜನರ ಜೀವನದಲ್ಲಿ ಕ್ರೀಡೆ ಹಾಗೂ ಇತರೆ ಹೆಸರುವಾಸಿಯಾದ ಮನೋರಂಜನೆಗಳು ಅತ್ಯಂತ ಪ್ರಮುಖವಾಗಿದ್ದವು. ಹಲವಾರು ವಿಧವಾದ ವಿರಾಮ ಚಟುವಟಿಕೆಗಳು ಅಸ್ತಿತ್ವದಲ್ಲಿದ್ದವು. ಹೊಯ್ಸಳರ ಕಾಲದಲ್ಲಿ ರಾಜಸ್ಥಾನದಲ್ಲಿ ಆನೆಯೊಂದಿಗೆ ರಣರಂಗದಲ್ಲಿ ಕಾದಾಡುವುದು ಬಹು ಪ್ರಸಿದ್ಧವಾದ ಕ್ರೀಡೆಯಾಗಿತ್ತು. ಅಂದಿನ ಕಾಲದ ಮಾನಸೋಲ್ಲಾಸವು ಈ ಕ್ರೀಡೆಯ ಬಗ್ಗೆ ಈ ರೀತಿ ವಿವರಿಸುತ್ತದೆ. ಕಾದಾಡುವುದಕ್ಕಾಗಿ ಆನೆಗಳಿಗೆ ಉತ್ತಮ ರೀತಿಯ ತರಬೇತಿಯನ್ನು ನೀಡುವುದರ ಜೊತೆಗೆ, ಹಿಂದಿನ ರಾತ್ರಿ ಆನೆಗಳಿಗೆ ಒಂದು ರೀತಿಯ ಔಷಧಿಯನ್ನು ನೀಡುತ್ತಿದ್ದರು. ಇದರಿಂದ ಅವುಗಳು ಪ್ರಭಾವಿತವಾಗಿ ಭಯಂಕರವಾಗಿ ಕಾದಾಡುತ್ತಿದ್ದವು. ಪ್ರೇಕ್ಷಕರು ಸಂಗೀತ ವಾದ್ಯಗಳಾದ

ವೀರಸೂದ, ಡಕ್ಕ ಹಾಗೂ ಜಯಘಂಟೆಗಳನ್ನು ಬಾರಿಸಿ ಅವುಗಳನ್ನು ಪ್ರೇರೇಪಿಸುತ್ತಿದ್ದರು. ಆ ಸಮಯದಲ್ಲಿ ಬೀದಿಗಳಲ್ಲಿ ಬಸುರಿ ಹೆಂಗಸರು, ದಢೂತಿಗಳು ಮಕ್ಕಳೂ ಹಾಗೂ ಅಂಗವಿಕಲರು ಓಡಾಡುವಂತಿರಲಿಲ್ಲ. ಕಾರಣ ಕುಡಿದ ಆನೆಗಳಿಂದ ಅಪಾಯವುಂಟಾಗಬಹುದೆಂದು ಅವರ ಓಡಾಟವನ್ನು ನಿಷೇಧಿಸಲಾಗಿತ್ತು. ಉತ್ತಮ ಓಟಗಾರರನ್ನು ಆನೆಯೊಂದಿಗೆ ಓಡಲು ಸೇರಿಸಿಕೊಳ್ಳ ಲಾಗುತ್ತಿತ್ತು.[70]

ಆ ಕಾಲದಲ್ಲಿ ಚಾಲ್ತಿಯಲ್ಲಿದ್ದ ಇನ್ನೊಂದು ಆಟವೆಂದರೆ ಪೋಲೋ. ಈ ಆಟವು ಇಂದಿನ ಆಧುನಿಕ ಪೋಲೋಗೆ ಹತ್ತಿರದ ಸಂಬಂಧವನ್ನು ಹೊಂದಿದೆ. ಕುದುರೆ ಸವಾರಿ ಕಲೆಯಲ್ಲಿನ ಪ್ರವೀಣತೆಯನ್ನು ಈ ಆಟವು ಪ್ರದರ್ಶಿಸುತ್ತದೆ.

## ಗರುಡರು

ಹೊಯ್ಸಳರ ಕಾಲದಲ್ಲಿ ಅದರಲ್ಲೂ ಪ್ರಮುಖವಾಗಿ ವೀರಸೋಮೇಶ್ವರನ ಕಾಲದಲ್ಲಿ ಗರುಡರು ಪ್ರಮುಖವಾಗಿ ಕಾಣಸಿಗುತ್ತಾರೆ. ಕೆಲವು ಆದರ್ಶಗಳನ್ನು ಉಳಿಸುವುದಕ್ಕಾಗಿ ಜನರು ತಮ್ಮ ಜೀವನವನ್ನು ಉದಾರವಾಗಿ ತ್ಯಾಗ ಮಾಡುತ್ತಿದ್ದರು. ಮೋಕ್ಷವನ್ನು ಹೊಂದುವ ಆಸೆಯಿಂದ ರಾಜನಿಗೆ ಶೌರ್ಯ, ರಾಷ್ಟ್ರಪ್ರೇಮ, ಸ್ವಾಮಿನಿಷ್ಠೆಯನ್ನು ತೋರಿಸುವ ದೃಷ್ಟಿಯಿಂದ ಗಂಡನಿಗೆ ನಿಷ್ಠೆಯಾಗಿರುವ ಉದ್ದೇಶದಿಂದ ಜನಗಳು ಜೀವಿಸಲು ಬಹಳ ಆಸೆ ಇದ್ದರೂ ಸಂತೋಷದಿಂದ ತಮ್ಮ ಪ್ರಾಣವನ್ನು ತ್ಯಜಿಸಿದರು. ಆತ್ಮಹತ್ಯೆ ಮಾಡಿಕೊಳ್ಳುವುದು ಮಹಾಪಾಪವಾಗಿತ್ತು. ಆದರೆ ಕೆಲವು ವಿಧಗಳ ಆತ್ಮಹತ್ಯೆಗೆ ಸ್ಮೃತಿಗಳಲ್ಲಿ ಹಾಗೂ ಪುರಾತನ ಕೃತಿಗಳಲ್ಲಿ ಅವಕಾಶ ಮಾಡಿ ಕೊಡಲಾಗಿದೆ. ಧಾರ್ಮಿಕ ಆತ್ಮಹತ್ಯೆಯು ಧರ್ಮಶಾಸ್ತ್ರದಲ್ಲಿ ಪವಿತ್ರ ಎಂದು ತಿಳಿದುಬಂದಿದೆ. ಒಬ್ಬ ವಯಸ್ಸಾದ ಮುದುಕನು ತನ್ನ ಜೀವನದಲ್ಲಿ ಆಸಕ್ತಿಯನ್ನು ಕಳೆದುಕೊಂಡು ಅಥವಾ ಯಾವುದೋ ಗುಣಪಡಿಸಲಾಗದ ಖಾಯಿಲೆಯಿಂದ ನರಳುತ್ತಿದ್ದರೆ ಆ ಸಂದರ್ಭಗಳಲ್ಲಿ ಆತ್ಮಹತ್ಯೆಯು ಸಾಧ್ಯವಿದೆ. ಆದರೆ ಆಲ್ಬೆರೊನಿಯ ಪ್ರಕಾರ ಬ್ರಾಹ್ಮಣರು ಮತ್ತು ಕ್ಷತ್ರಿಯರು ಈ ಪದ್ಧತಿಯಿಂದ ನಿಷೇಧಿಸಲ್ಪ ಟ್ಟಿದ್ದರು. ಇನ್ನುಳಿದ ಎರಡು ವರ್ಗಗಳು ಇಚ್ಛಿಸಿದಲ್ಲಿ ಈ ಪದ್ಧತಿಯನ್ನು ಅನುಸರಿಸಬಹುದಿತ್ತು. ಬ್ರಾಹ್ಮಣರು ಮತ್ತು ಕ್ಷತ್ರಿಯರು ತಮ್ಮ ಜೀವನವನ್ನು ತೊರೆಯಲು ಇಚ್ಛಿಸಿದರೆ ಅವರು ಗ್ರಹಣದ ದಿನಗಳಲ್ಲಿ ಅಥವಾ ಶುಭದಿನಗಳಲ್ಲಿ ಮಾತ್ರ ಆ ರೀತಿ ಮಾಡಬಹುದಾಗಿತ್ತು. ಕೆಲವು ಜನರು ತಮ್ಮನ್ನು ನೀರಲ್ಲಿ ಮುಳುಗಿಸಿ ಸಾಯಿಸಲು ಬೇರೆಯವರನ್ನು ಅವರಿಗೆ ದುಡ್ಡುಕೊಟ್ಟು ಸಾಯುವ

ವರೆಗೂ ನೀರಿನಲ್ಲಿ ಮುಳುಗಿಸುವಂತೆ ಕೇಳಿಕೊಳ್ಳುತ್ತಿದ್ದರು.[71] ಜೈನರು ಸಲ್ಲೇಖನ, ಸಮಾಧಿ ಮರಣ ಮತ್ತಿತರ ವಿಧಿಗಳ ಮೂಲಕ ತಮ್ಮ ಪ್ರಾಣವನ್ನು ಕಳೆದುಕೊಳ್ಳುತ್ತಿದ್ದರು. ಆತ್ಮಾರ್ಪಣೆಗಳ ಕೆಲವು ಉದಾಹರಣೆಗಳನ್ನು ಶಾಸನಗಳು ನಮಗೆ ತಿಳಿಸುತ್ತವೆ. ಚಾಲುಕ್ಯರ ಸಾಮ್ರಾಟ ಸೋಮೇಶ್ವರನು ವಾಸಿಯಾಗದ ಖಾಯಿಲೆಯಿಂದ ವಿಮುಕ್ತಿಯನ್ನು ಹೊಂದಲು ವಿಧಿಯುಕ್ತವಾಗಿ ಕುರುವತ್ತಿಯ ತುಂಗಾಭದ್ರಾ ನದಿಯಲ್ಲಿ ಮುಳುಗುವ ಮೂಲಕ (ಮಹಾಯೋಗ) ತನ್ನ ಜೀವನವನ್ನು ಕಳೆದು ಕೊಂಡನು. ಆತ್ಮಾರ್ಪಣೆಗೆ ಇನ್ನೊಂದು ಕಾರಣವೆಂದರೆ ತಮ್ಮ ನಾಯಕನ ಮೇಲಿನ ನಿಷ್ಟೆ ಹಾಗೂ ಕೃತಜ್ಞತೆ.[72] ಇಂತಹ ವ್ಯಕ್ತಿಗಳನ್ನು 'ವೇಲವಾಲಿ'ಗಳೆಂದು ಕರೆಯಲಾಗುತ್ತಿತ್ತು. ತಮ್ಮ ನಾಯಕನು ತೀರಿಕೊಂಡಾಗ ತಮ್ಮ ಪ್ರಾಣವನ್ನು ತ್ಯಜಿಸುವುದಾಗಿ ಅವರು ಆಣೆ ಮಾಡುತ್ತಿದ್ದರು. ಈ ವೇಲವಾಲಿ ಗಳು ಚಿತೆಯನ್ನೇರುವುದರ ಮೂಲಕ, ಹಿರಿದ ಖಡ್ಗಕ್ಕೆ ಬಲಿಯಾಗುವುದರ ಮೂಲಕ ಅಥವಾ ಖಡ್ಗದಿಂದ ತಮ್ಮನ್ನು ತಾವೆ ಇರಿದು ಕೊಳ್ಳುವುದರ ಮೂಲಕ ಪ್ರಾಣ ಕಳೆದುಕೊಳ್ಳುತ್ತಿದ್ದರು.[73] 1070 ರ ಶಾಸನವೊಂದು ಈ ರೀತಿಯ ವಿಚಿತ್ರ ರೀತಿಯಲ್ಲಿ ಪ್ರಾಣಹರಣ ಮಾಡಿಕೊಳ್ಳುತ್ತಿದ್ದರೆ ಒಂದು ಘಟನೆಯನ್ನು ನಾವು ನೋಡುತ್ತೇವೆ. ಸಂತರ ದೇವನು ಮರಣವನ್ನಪ್ಪಿದಾಗ ಪೋರ ವಲೇಯ ಗೌಂಡನು ತನ್ನ ಬೆನ್ನಿನ ಚರ್ಮವನ್ನು ಸುಲಿಸಿ ಆ ನೋವನ್ನು ಮೂರು ದಿವಸಗಳ ಕಾಲ ಅನುಭವಿಸಿ ಮರಣ ಹೊಂದಿದನು.[74]

ಆತ್ಮಾರ್ಪಣೆ ಮಾಡಿಕೊಳ್ಳುತ್ತಿದ್ದ ಹೊಯ್ಸಳ ಸದಸ್ಯರ ತಂಡವನ್ನು 'ಗರುಡರು' ಎಂದು ಕರೆಯಲಾಗುತ್ತಿತ್ತು. ಹೊಯ್ಸಳ ರಾಜವ್ಯವಸ್ಥೆಯಲ್ಲಿ 'ಗರುಡರು' ಎಂದು ಕರೆಯಲಾಗುತ್ತಿದ್ದ ಸಾಮಂತರ, ಯೋಧರ ಒಂದು ಗುಂಪು ಅಸ್ತಿತ್ವದಲ್ಲಿತ್ತು ಎಂಬುದರ ಬಗ್ಗೆ ಹೊಯ್ಸಳ ಶಾಸನಗಳು ಸ್ಪಷ್ಟವಾದ ಮಾಹಿತಿಯನ್ನು ನೀಡುತ್ತವೆ. ಒಂದರ್ಥದಲ್ಲಿ ಈ ತಂಡವು ಹೊಯ್ಸಳರ ಸರ್ವಶ್ರೇಷ್ಟ ಅರಸ ಹಾಗೂ ಅವನ ಕೆಳಗಿನ ಸಾಮಂತ ರಾಜನ ನಡುವೆ ಅಸ್ತಿತ್ವದಲ್ಲಿದ್ದು ವಿಶೇಷ ಸಂಬಂಧ ಗಳನ್ನು ಸೂಚಿಸುತ್ತದೆ. 'ಗರುಡ' ಎಂಬ ಪದವು ನಾರಾಯಣ ಅಥವಾ ವಿಷ್ಣುವಿನ ವಾಹನವಾಗಿ ತ್ತೆಂದು ನಂಬಲಾದ ಪುರಾಣದ ಒಂದು ಪಕ್ಷಿ ಎಂಬ ಉಲ್ಲೇಖವನ್ನು ನೀಡುತ್ತದೆ. ಗರುಡವು ನಾರಾಯಣನ ಭಾರವನ್ನು ಹೊತ್ತಂತೆ ಈ ಯೋಧರ ತಂಡವು ಹೊಯ್ಸಳ ಸಾಮ್ರಾಜ್ಯದ ಹೊರೆ ಯನ್ನು ವಿಶೇಷ ರೀತಿಯಲ್ಲಿ ಹೊತ್ತರು. ಅವರು ಎಲ್ಲಾ ರೀತಿಯಲ್ಲೂ ದೈಹಿಕವಾಗಿ, ಮಾನಸಿಕವಾಗಿ ಕೌಟುಂಬಿಕವಾಗಿ ಹಾಗೂ ಸಿರಿಯ ಮೂಲಕವಾಗಿಯೂ ಹೊಯ್ಸಳ ರಾಜರುಗಳೊಂದಿಗೆ ವಿಲೀನ ವಾಗಿದ್ದರು. ಗರುಡರು ಮತ್ತು ಹೊಯ್ಸಳ ರಾಜರ ನಡುವೆ ಸಾಮ್ಯರೂಪತೆ ಎಷ್ಟು ಪೂರ್ಣವಾಗಿ

ತ್ತೆಂದರೆ, ಗರುಡನಿಗೆ ಯಾವುದೇ ವೈಯಕ್ತಿಕತೆಯಾಗಲಿ ಅಥವಾ ಅಹಂಕಾರವಾಗಲಿ ಇರಲಿಲ್ಲ. ಅವನು ತನ್ನ ರಾಜನೊಂದಿಗೆ ಅವನ ಸಾವಿನ ನಂತರ ತಾನೂ ತಕ್ಷಣವೇ ಸಾಯುವವನೆಂದು ಭಾಷೆ ಅಥವಾ ಶಪಥವನ್ನು ಮಾಡಿದ್ದನು. ತನ್ನ ವೈಯಕ್ತಿಕ ಉಳಿವು ತನ್ನ ಯಜಮಾನನ ಸಾವಿನ ನಂತರ ನಿರರ್ಥಕ ಎಂದು ಗರುಡ ಯೋಧ ತಿಳಿದಿದ್ದನು.[75] ನಾಯಕರ ವಂಶವು ಹೊಯ್ಸಳ ರಾಜರಾದ ಬಲ್ಲಾಳ, ನರಸಿಂಹ ಮತ್ತು ಸೋಮೇಶ್ವರರಿಗೆ ನಿರಂತರವಾಗಿ ಗರುಡರಾಗುವ ಆಣೆಯನ್ನು ಹೊತ್ತರು. ಕ್ರಿ.ಶ. 1257ರಲ್ಲಿ ಕನ್ನೆಯ ನಾಯಕನು ಒಂದು ಆನೆಯ ಹಣೆಯ ಮೇಲೆ ಗರುಡವನ್ನು ಅಚ್ಚಿಸಿದನು.[76] ಸೂರಿಗೇಯ ನಾಯಕನೆಂಬುವವನು ತನ್ನ ಮಾತಿನ ಮೇರೆಗೆ ತನ್ನ ಹೆಂಡತಿಯರು, ಹತ್ತು ಸೇವಕಿಯರು ಹಾಗೂ ಇಪ್ಪತ್ತು ಸೇವಕರೊಂದಿಗೆ ಆನೆಯ ತಲೆಯ ಮೇಲೆ ಆರು ಬಾರಿ ಗರುಡನನ್ನು ಸಿಕ್ಕಿಸಿ ರಾಜನ ಜೊತೆ ಸಾವನ್ನಪ್ಪಿದ್ದರು.[77] ಈ ರೀತಿಯಾಗಿ ಜೀವನವನ್ನು ಕೊನೆಗಾಣಿಸುವುದನ್ನು ಪರಹಿತಾರ್ಥಿ ಆತ್ಮಹತ್ಯೆ ಎಂದು ಕರೆಯಬಹುದು. ಈ ಆತ್ಮಹತ್ಯೆಯಡಿ ಅಹಂಕಾರವು ಯಾವುದೇ ವಿಧದಲ್ಲೂ ವ್ಯಕ್ತಿಯ ಸ್ವಂತ ಆಸ್ತಿಯಲ್ಲ. ಅವನು ತಂಡದ ಧ್ಯೇಯ ಹಾಗೂ ಉದ್ದೇಶಗಳಿಗೆ ಸಂಪೂರ್ಣವಾಗಿ ತನ್ನನ್ನು ತಾನು ಸಮರ್ಪಿಸಿಕೊಂಡಿರುತ್ತಾನೆ. ವಿಶೇಷವಾಗಿ ನವ್ಯದ ಪೂರ್ವ ಸಮಾಜಗಳಲ್ಲಿ ಆತ್ಮಹತ್ಯೆಯು ಹಾಗಾದಲ್ಲಿ ಕೆಲವು ನಿರ್ದಿಷ್ಟ ಪರಿಸ್ಥಿತಿಗಳಲ್ಲಿ ಒಂದು ಕರ್ತವ್ಯವಾಗಬಲ್ಲದು. ಈ ಅವಶ್ಯಕ ಆತ್ಮಹತ್ಯೆಯನ್ನು ಮಾಡಿಕೊಳ್ಳಲು ನಿರಾಕರಿಸುವುದು ಸಾವಿನ ಭಯಕ್ಕಿಂತಲೂ ಹೆಚ್ಚು ಅಪಾಯಕಾರಿಯಾಗಿದೆ. ಆತ್ಮಹತ್ಯೆಯನ್ನು ಏತಕ್ಕಾಗಿ ಮಾಡಿಕೊಳ್ಳಲಾಗುತ್ತದೆಂದರೆ ತಂಡದ ಧ್ಯೇಯಗಳು ಮತ್ತು ಮೌಲ್ಯಗಳನ್ನು ಕಾಪಾಡಿಕೊಂಡು ಹೋಗಲು ಇದೊಂದು ಸರಿಯಾದ ದಾರಿ ಎಂದು ತಂಡವು ನಿರ್ಧರಿಸುತ್ತದೆ. ಆದ್ದರಿಂದ ಹೊಯ್ಸಳ ಯೋಧರ ಆತ್ಮಹತ್ಯೆಯು ಪರಹಿತದ ಛಲದಿಂದಾದುದು. ದೋಷವಿಲ್ಲದ ಒಬ್ಬ ವಿಧೇಯ ಯೋಧನ ಸ್ವಾಮಿನಿಷ್ಟೆಯು ಅವರ ತಂಡದ ಪ್ರತಿಯೊಬ್ಬ ವಿಧೇಯ ಯೋಧನ ಸ್ವಾಮಿನಿಷ್ಟೆಯು ಅವರ ತಂಡದ ಧ್ಯೇಯೋದ್ದೇಶವಾಗಿತ್ತು ಹಾಗೂ ಇದನ್ನು ಅವರ ನಾಯಕನು ತೀರಿಕೊಂಡ ನಂತರ ತಮ್ಮ ಪ್ರಾಣವನ್ನು ಕಳೆದುಕೊಳ್ಳುವುದರ ಮೂಲಕ ಪ್ರದರ್ಶಿಸಬೇಕಾಗಿತ್ತು. ಹೊಯ್ಸಳ ಸೇನಾಡಳಿತಗಾರನು ಗರುಡನಾಗಬೇಕಾದರೆ ರಾಜನಿಗೆ ಹೊಂದಿಕೊಂಡಂತೆ ಅವನಿಗೆ ಭಾಷೆ ಅಥವಾ ಆಣೆಯ ವಿಧೇಯತೆ ಮತ್ತು ಸ್ವಾಮಿನಿಷ್ಟೆಯನ್ನು ನೀಡಬೇಕಾಗಿತ್ತು.[78] 'ಗಂಡಪೇಂಡ್ರ' ಎಂಬ ಬೆಳ್ಳಿ ಅಥವಾ ಚಿನ್ನದ ಆಭರಣದ ಮೂಲಕ ಒಂದು ಮುದ್ರೆಯನ್ನು ಇವನು ಹೊಂದಬೇಕಾಗಿತ್ತು. ಇದನ್ನು ಅವನ ಎಡ ಹಿಮ್ಮಡಿಗೆ (ಎಡಕಾಲಿನ) ಕಟ್ಟಲಾಗುತ್ತಿತ್ತು ಮತ್ತು ಅವನು ನಡೆಯುವಾಗ ಜಲ್‌ಜಲ್ ಎಂಬ ಸದ್ದನ್ನು ಮಾಡುತ್ತಿತ್ತು.[79] ಇದೇ ರೀತಿಯಲ್ಲಿ ಗರುಡನ ಹೆಂಡತಿ ಅಥವಾ ಹೆಂಡತಿಯರು ಅವರ ಗಂಡ

ನೊಂದಿಗೆ ಭಾಷೆ ಅಥವಾ ವಚನದೊಂದಿಗೆ ಬದ್ಧರಾಗುತ್ತಿದ್ದರು. ಇವರೂ ಕೂಡ ಆ ಆಭರಣವನ್ನು ತೊಡುತ್ತಿದ್ದರು ಮತ್ತು ಅವರೊಂದಿಗೆ ಸಾಯುತ್ತಿದ್ದರು.[80] ಈ ರೀತಿಯಾದ ಹೆಂಡತಿಯನ್ನು 'ಲೆಂಕಿ' ಎಂದು ಕರೆಯಲಾಗುತ್ತಿತ್ತು.[81] ಗರುಡನಿಗೆ ಅಧೀನರಾದ ಸಾಮಂತರು ಅವರ ಯಜಮಾನನಿಗೆ ಅದೇ ರೀತಿಯಲ್ಲಿ ಭಾಷೆಯನ್ನು ವಿಧೇಯತೆಯ ಪ್ರತೀಕವಾಗಿ ಕೊಟ್ಟವರನ್ನು 'ಲೆಂಕರು' ಎಂದು ಕರೆಯಲಾಗುತ್ತಿತ್ತು. ಗರುಡನಿಗೆ ಸಂಬಂಧಿಸಿದ ಲೆಂಕರು ಅವನ ಸಾವಿನ ನಂತರ ತಮ್ಮ ಪ್ರಾಣತ್ಯಾಗ ಮಾಡುತ್ತಿದ್ದರು. ಈ ಕಾಲದ ಜೈನ ಕವಿಯಾದ ಜನ್ನನು ತನ್ನ ಕನ್ನಡ ಕೃತಿಯಾದ ಅನಂತ ಪುರಾಣದಲ್ಲಿ ಲೆಂಕರು ಅವರ ಯಜಮಾನನ ಸಾವಿನ ನಂತರ ತಮ್ಮ ತಲೆಗಳನ್ನು ಕಡಿದು ಹಾಕುವ ತ್ಯಾಗದ ಆಚರಣೆಯನ್ನು ವರ್ಣರಂಜಿತವಾಗಿ ವಿವರಿಸಿದ್ದಾನೆ.[82] ಶಿಲಾಶಾಸನಗಳಲ್ಲಿ ಈ ಕೃತ್ಯವನ್ನು ವಿವರಿಸುವ ಈ ಆಚರಣೆಯ ಶಿಲಾಪ್ರತಿನಿಧಿಗಳನ್ನು ಕಾಣಬಹುದು.[83] ಸುಮಾರು ಕ್ರಿ.ಶ. 1200ರ ಒಂದು ಶಾಸನವು ವೀರಬಲ್ಲಾಳನ ಗರುಡನಾಗಿದ್ದ ಕುವರ ಲಕ್ಷ್ಮಣನಿಗೆ ಸೇರಿದ 1000 ಲೆಂಕರು ಪ್ರಾಣತ್ಯಾಗ ಮಾಡಿಕೊಳ್ಳುವುದನ್ನು ಉಲ್ಲೇಖಿಸುತ್ತದೆ. ಆತನ ಹೆಂಡತಿಯೂ ಪ್ರಾಣಹರಣ ಮಾಡಿಕೊಂಡಳು.[84] ಗರುಡ ಕುವರ ಲಕ್ಷ್ಮಣನಿಗೆ ಸಂಬಂಧಿಸಿದ 100 ಲೆಂಕರ ತ್ಯಾಗದ ಬಗ್ಗೆ ಚಿದಾನಂದ ಮೂರ್ತಿಯು ಯಾವುದೇ ಸಂಶಯವನ್ನು ವ್ಯಕ್ತಪಡಿಸದಿದ್ದರೂ ಎಂ.ಎಂ.ಕಲುಬುರ್ಗಿಯವರು ಇದರ ಬಗ್ಗೆ ಸಂದೇಹವನ್ನು ವ್ಯಕ್ತಪಡಿಸಿದ್ದಾರೆ. ಇವರ ಪ್ರಕಾರ 1000 ಸಂಖ್ಯೆಯ ಗರುಡರ ತಂಡವು ಉಪಯೋಗಿಸುತ್ತಿದ್ದ ಒಂದು ಸಮೂಹ ಪದ ಮಾತ್ರ.[85] ಇದೇನೇ ಇದ್ದರೂ ಈ ವೀರ ಯೋಧರ ಪ್ರಾಣತ್ಯಾಗವನ್ನು ಸೂಚಿಸುವ 'ಗರುಡ' ಎಂಬ ಪದವು ಅಸಮರ್ಪಕ ಎಂಬ ಕಲುಬುರ್ಗಿಯವರ ಹೇಳಿಕೆಯನ್ನು ಒಪ್ಪಲಾಗದು. ಆದರೆ ಲೆಂಕ ಅಥವಾ ಲೆಂಕಾವಳಿ ಮಾತ್ರ ಸರಿ ಎಂಬ ಅವರ ವಾದವನ್ನು ಒಪ್ಪಲು ಸಾಧ್ಯವಿಲ್ಲ.[86] ವಾಸ್ತವವಾಗಿ ಗರುಡ ಮತ್ತು ಲೆಂಕ ಎಂಬ ಪದಗಳು ಈ ಯೋಧರ ಊಳಿಗಮಾನ್ಯ ಸಂತತಿಯನ್ನು ಉಲ್ಲೇಖಿಸುತ್ತವೆ. ಗರುಡರು ಹೊಯ್ಸಳ ಆಡಳಿತಗಾರರಿಗೆ ಸಂಬಂಧಿಸಿದರೆ, ಲೆಂಕರು ಗರುಡರಿಗೆ ಸಂಬಂಧವನ್ನು ಹೊಂದಿದ್ದರು. ಇನ್ನೊಂದು ಕಡೆ ಲಂಕಿಯರು ಅವರ ಗಂಡಂದಿರೊಂದಿಗೆ ಸಂಬಂಧವನ್ನು ಹೊಂದಿದ್ದ ಗರುಡರ ಪತ್ನಿಯರು.

ವಿಶಾಲವಾಗಿ ಹೇಳುವುದಾದರೆ ಗರುಡ ಮತ್ತು ಲೆಂಕ ಆತ್ಮಹತ್ಯೆಗಳು ತಮಿಳುನಾಡು ಮತ್ತು ಆಂಧ್ರದ 'ವೆಲೆವಾಳಿ' ಪದ್ಧತಿಗೆ ಸಮನಾಗಿವೆ.[87] ಇದೇ ರೀತಿಯಲ್ಲಿ ತೊಕುಗವಾ ಕಾಲದ (1608–1868) ಊಳಿಗಮಾನ್ಯ ಜಪಾನಿನ ಯೋಧರ ವರ್ಗವಾದ ಸಮುರೈಯೋಧರ 'ಬುಶಿಡೊ' ಶಕ್ತಿಗೆ (ಯೋಧನ ರೀತಿ) ಈ ಗರುಡ ಪಂಥವು ಮೂಲ ಸಾಮಿಪ್ಯವನ್ನು ಹೊಂದಿದೆ.

"ಉಳಿದವರಿಂದ ಸಾವಿನಲ್ಲಿ ಅವರ ದೊರೆಯನ್ನೊಲಿಸಲು ಆತ್ಮಹತ್ಯೆ" ಎಂಬುದು ಸಮುರೈ ಪಂಥದವರ ಅಂಗವಾಗಿತ್ತು. 1663ರಲ್ಲಿ ಈ ರೀತಿಯಾದ ಆತ್ಮಹತ್ಯೆಯನ್ನು ಜಪಾನಿನಲ್ಲಿ ನಿಷೇಧಿಸ ಲಾಯಿತು. 1702ರ 'ನಲವತ್ತೇಳರ ರೋನಿನ್' ಪ್ರಸಿದ್ಧ ಘಟನೆಯು ಈ ಅಂಶವನ್ನು ಉದಾಹರಿಸುತ್ತದೆ. ಒಬ್ಬ ಸಣ್ಣ ಡೈಮಿಯಾ ದೊರೆಯು ಕೂಗು ನಡೆಯ ಅಧಿಕಾರಿಯೊಬ್ಬನಿಂದ ಅಪಮಾನಗೊಂಡು, ಅವನನ್ನು ಆತ್ಮಹತ್ಯೆ ಮಾಡಿಕೊಳ್ಳುವಂತೆ ಒತ್ತಾಯಿಸಲಾಯಿತು ಹಾಗೂ ಅವನ ರಾಜ್ಯವನ್ನು ಮುಟ್ಟುಗೋಲು ಹಾಕಲಾಯಿತು. ಅವನ ಉಳಿದ ಸಮುರೈಗಳು ಈಗ 'ಯಜಮಾನನಿಲ್ಲದ ಸಮುರೈಗಳು' ರಾಜಕೀಯ ಸಂಶಯವನ್ನು ಎರಡು ವರ್ಷಗಳ ಕಾಲ ವನವಾಸ ದಲ್ಲಿದ್ದು ಕಡೆಗಣಿಸಿದ್ದರು. ಆದರೆ ನಂತರ ಮಧ್ಯೆ ಕಾಲದ ಧರ್ಮಶಾಸ್ತ್ರದ ಸಂಹಿತೆಯನ್ನು ಇಡೊ ಅಧಿಕಾರಿಯನ್ನು ಹತ್ಯೆಗೈಯುವುದರ ಮೂಲಕ ಈಡೇರಿಸಿದರು. ಅದೇ ರೀತಿ ತಮ್ಮ ದೊರೆಯ ಸಾವಿನ ಸೇಡನ್ನು ತೀರಿಸಿಕೊಂಡರು. ಸಾರ್ವಜನಿಕರು ರೋಮಾಂಚನಗೊಂಡರು ಹಾಗೂ ಈ ಘಟನೆಯು ಜಪಾನಿನ ನಾಟಕ ಕಲೆಯ ನೆಚ್ಚಿನ ವಸ್ತುವಾಯಿತು. ಆದರೆ ಅಧಿಕಾರಿಗಳು ಬಹಳ ನಿಷ್ಕರುತೆಯಿಂದ 'ನಲವತ್ತೇಳ'ನ್ನು ಆತ್ಮಹತ್ಯೆ ಮಾಡಿಕೊಳ್ಳುವಂತೆ ಒತ್ತಾಯಿಸಿದರು. ಸ್ವಾಮಿನಿಷ್ಠೆಯ ಮೇಲೆ ಕಾನೂನು ಮತ್ತು ಸುವ್ಯವಸ್ಥೆಯು ಜಯವನ್ನು ಸಾಧಿಸಿತು.[88]

ಈ ಗರುಡಯೋಧರು ಹೊಯ್ಸಳರ ರಾಜವ್ಯವಸ್ಥೆಯ ಆಡಳಿತ ಮೇಲ್ವರ್ಗದ ಉನ್ನತ ಶ್ರೇಣಿ ಯಿಂದ ಬಂದವರಾಗಿದ್ದರು. ಉದಾಹರಣೆಗೆ ಮುಗಿಲ ಸಂತತಿಯ ಗರುಡರ ಮೊದಲ ಸದಸ್ಯನಾದ ಗಂಧನಾರಾಯಣಶೆಟ್ಟಿಯು ಕಬ್ಬುಹುನಾಡಿನ ಮಹಾಪ್ರಭುವಾಗಿದ್ದನು. ಅವನ ವಂಶಸ್ಥರು ಹೊಯ್ಸಳ ರಡಿಯಲ್ಲಿ ಮಹಾ ಸಾಮಂತರಾಗಿದ್ದರು.[89] ಇಲ್ಲಿನ ಕುತೂಹಲಕಾರಿಯಾದ ಅಂಶವೇನೆಂದರೆ ವಾಣಿಜ್ಯದ ವಿಷಯದೊಂದಿಗಿನ ಈ ಸಂತತಿಯ ಸಂಬಂಧ. ಹೊಯ್ಸಳ ಶೆಟ್ಟಿಯ ಪ್ರಶಸ್ತಿಯ ಬಗೆಗಿನ ಎಚ್ಚರಿಕೆಯುಳ್ಳ, ಅಧ್ಯಾಯವು ಇವನ ಬಹುಮುಖ ವ್ಯಕ್ತಿತ್ವವನ್ನು ಪ್ರದರ್ಶಿಸುತ್ತದೆ. ಇವನ ವಂಶಸ್ಥರು ಕೇವಲ ಸಾಮಂತರಾಗಿ ಖ್ಯಾತರಲ್ಲದೇ ಗರುಡ ಯೋಧರಾಗಿಯೂ ಸ್ವೀಕೃತರಾಗಿದ್ದರು. ಒಂದು ಶಾಸನವು ಈ ರೀತಿ ಹೇಳುತ್ತದೆ. "ಹೊಯ್ಸಳ ಶೆಟ್ಟಿಯ ಔದಾರ್ಯದ ಸಿಂಹವು ಎಲ್ಲ ಕಡೆಯೂ ಎಚ್ಚರಿಸುತ್ತಾ, ಆನೆಗಳ ಗುಂಪನ್ನು ಅಂದರೆ ಉತ್ತಮ ಕವಿಗಳ ಬಡತನವನ್ನು ಭಯಾನಕ ಕೋಪದಿಂದ ಆಕ್ರಮಣ ಮಾಡಿತು."[90] "ಹೊಯ್ಸಳಶೆಟ್ಟಿ" ಪ್ರಸಿದ್ಧ ಮಹಾಪ್ರಭು, ಎಡೆಯಿಲ್ಲದ ಬಣರಜ ಧರ್ಮದ ಪೋಷಕ, ಸೇನೆಯ ಮುಖ್ಯಸ್ಥ. ದೇಶಿಯ ಆಭರಣ ಉಭಯ ದೇಶೀಯ ವಿಮೋಚನ."[91] ಇದು ಅವನ ಹೊಯ್ಸಳ ರಾಜವ್ಯವಸ್ಥೆಯೊಂದಿಗಿನ ಸಂಬಂಧ ಮತ್ತು ಆಡಳಿತ

ವರ್ಗದ ಹಂತಕ್ಕೇರುವ ರೀತಿಯನ್ನು ಸೂಚಿಸುತ್ತದೆ ಹಾಗೂ ಕವಿಗಳು ಮತ್ತು ಕಲಾವಿದರಿಗಿದ್ದ ಅವನ ಆಶ್ರಯವನ್ನು ಸೂಚಿಸುತ್ತದೆ.

ಗಂಧನಾರಾಯಣ ಶೆಟ್ಟಿಯ ಯುದ್ಧಪ್ರಿಯ ಗುಣಗಳ ಜೊತೆ ಈ ಮೇಲಿನ ಅಂಶವನ್ನು ಇನ್ನೊಂದು ಶಾಸನದಲ್ಲಿ ಈ ಕೆಳಕಂಡಂತೆ ವಿವರಿಸಲಾಗಿದೆ.[92]

"ಗಂಧನಾರಾಯಣ ಶೆಟ್ಟಿಯು, ಕಮಲಕ್ಕೆ ಭಾಸ್ಕರನಿದ್ದಂತೆ, ಮುಗಿಲ ಸಂತತಿಯ ಪ್ರಸಿದ್ಧ ವ್ಯಕ್ತಿ. ಹೊಯ್ಸಳ ರಾಜನ ಪದ್ಮಪಾದಗಳಿಂದ ಮಧುವನ್ನು ಹೀರುತ್ತಿರುವ ಮದವೇರಿದ ಭೃಂಗ, ಪ್ರಸಿದ್ಧ ಮಹಾಸಾಮಂತ, ಒಳ ಸಂಚುಕಾರರನ್ನು ಹತ್ತಿಕ್ಕಿ ವರ್ತಕರ ನಾಯಕತ್ವವನ್ನು ಹೊಂದಿದ, ಪರಾಕ್ರಮಿಗಳ ನಾಯಕನು ನಂದೇಶಿಯಿಂದ, ಕನ್ನಡಿಗ ಯೋಧರ ಮುಖ್ಯಸ್ಥರ ಸೇನಾನಾಯಕ. ಹೊಯ್ಸಳ ಲೆಂಕ ನಿಸ್ವಾಲೆಂಕರ ಪೋಷಕ, ಕಿತ್ತುಕೊಳ್ಳುವುದು, ಹಾಗೆತೇ ಬಿಟ್ಟು ಬಿಡುವ ನಾಯಕರ ಪರಾಕ್ರಮಿ, ಯುದ್ಧಕ್ಕೆ ಬರುವ ಆದರೆ ಹಿಂದಕ್ಕೆ ಓಡುವ ನಾಯಕರ ಪರಾಕ್ರಮಿ ಸೇವುಣ ಸೇನೆಯ ಸಿಂಹಸ್ವಪ್ನ, ಹಣೆಯುಳ್ಳ ಸಾಮಂತರಾಗಿದ್ದ ಗರುಡರ ನಾರಾಯಣ ಅವರ ಮಾತನ್ನು ಮುರಿಯುವ ಲೆಂಕರ ಪರಾಕ್ರಮಿ (ಬೆಸುಗೆ ತಪ್ಪುವ ಲೆಂಕರ ಗಂದಾರಂ) ಸಂಪತ್ತು, ಹೃದಯ ಮತ್ತು ಜೀವನವನ್ನು ಕಾಪಾಡುವಲ್ಲಿ ಸಹಾಯವನ್ನು ಯಾಚಿಸುವ ಲೆಂಕರ ಪರಾಕ್ರಮಿ."[93] ಈ ರೀತಿಯಾಗಿ ಮೇಲಿನ ಮಾಹಿತಿಯಿಂದ ಹೊಯ್ಸಳ ರಾಜಾಡಳಿತ ಚಲನೆಯನ್ನು ದೊಡ್ಡ ಪ್ರಮಾಣ ದಲ್ಲಿ ಒದಗಿಸಿದ ವಿಷಯವು ಸ್ಪಷ್ಟವಾಗಿದೆ. ಹಾಗೂ ಹೊಯ್ಸಳರ ರಾಜ್ಯ ವಿಸ್ತರಣೆ ನೀತಿಯಲ್ಲಿ ಗರುಡರು ಒಂದು ಪ್ರಮುಖ ಅಸ್ತ್ರವಾಗಿದ್ದರು. ಇಲ್ಲಿ ಕುತೂಹಲಭರಿತವಾದ ಅಂಶವೆಂದರೆ ಗರುಡರ ವಂಶಾವಳಿಯ ಪಟ್ಟಿಯಲ್ಲಿ ವರ್ತಕರ ಜಾತಿಯ ಅಂಕಿತವಾದ 'ಶೆಟ್ಟಿ'ಯನ್ನು ಕಡೆಗಣಿಸಿರುವುದನ್ನು ನೋಡುತ್ತೇವೆ. ಅದಕ್ಕೆ ಪರ್ಯಾಯವಾಗಿ ಸೇನೆಗೆ ಸಂಬಂಧಿಸಿದ ಅಂತ್ಯ ಪ್ರತ್ಯಯವಾದ 'ನಾಯಕ'ವು ಕ್ರಮವಾಗಿ ಬರುತ್ತಿರುವುದನ್ನು ಗಮನಿಸುತ್ತೇವೆ. ಇದು ಬಹುಶಃ ಏಕೆಂದರೆ ಒಂದು ವೃತ್ತಿಯಿಂದ ಇನ್ನೊಂದು ವೃತ್ತಿಗೆ ಸಂಪೂರ್ಣ ಬದಲಾವಣೆ ಅಥವಾ ಒಂದರಿಂದ ಇನ್ನೊಂದಕ್ಕೆ ಇರುವುದಾಗಿತ್ತು. ಈ ಸಂತತಿಯ ಗರುಡರ ತ್ಯಾಗವು ಈ ಕೆಳಕಂಡಂತೆ ವರ್ಣಿಸಲ್ಪಟ್ಟಿದೆ. ಹೊಯ್ಸಳ ಶೆಟ್ಟಿಯ ಮಗನು ಕುರೇಯ ನಾಯಕ ಎಂದು ಹೆಸರಾಗಿದ್ದನು. ಈ ಶಾಸನವು ಹೇಳುವಂತೆ ಅವನು "ಪ್ರಪಂಚವು ಅವನ ಪರಾಕ್ರಮದಿಂದ ಪ್ರೀತಿಸುವ ಹಾಗೆ ಮಾಡಿದ (ಕಾರಲ್ತಾನಧಿಮ್ ಲೋಕಮಾಮುಂ ಕೂರಿಸಿದ)"[94] ಅವನ ಮಗನನ್ನು ಪೇವಿನೇಯ ನಾಯಕ ಎಂದು ಕರೆಯಲಾಗುತ್ತಿತ್ತು. ಇವನೊಬ್ಬ

ಗರುಡನಾಗಿದ್ದು ತನ್ನ ಐದು ಲೆಂಕರೊಂದಿಗೆ ಹೊಯ್ಸಳ ರಾಜನಾದ ಬಲ್ಲಾಳ ದೇವನ ಜೊತೆ ತೆಗೆದುಕೊಂಡಿದ್ದ ಭಾಷೆಯನ್ನು ಪೂರೈಸಿದನು. ಈ ಕುಟುಂಬದ ಇನ್ನೊಬ್ಬ ಸದಸ್ಯನಾದ ಲೇಖಕೇಯ ನಾಯಕನು ಅವನ ಹೆಂಡತಿಯಾದ ಗಂಗಾದೇವಿ ಮತ್ತು ಮೂವರು ಲೆಂಕರೊಂದಿಗೆ ನರಸಿಂಗನೊಂದಿಗೆ ಅವನ ಭಾಷೆಯನ್ನು ಈಡೇರಿಸಿದನು. 1119ನೇ ಶಕ ವರ್ಷದ ನಳ ವರ್ಷದಲ್ಲಿ, ವೈಶಾಖದ ಪ್ರಕಾಶವಾದ ಪಕ್ಷದ 6ನೇ ದಿನವಾದ ಶನಿವಾರದಂದು ಕನ್ನೇಯ ನಾಯಕನು ತನ್ನ ಹೆಂಡತಿಯರ ಜೊತೆ ವುಮ್ಮವ್ವೆ, ಜವನವ್ವೆ ಮತ್ತು ಕಲ್ಲವ್ವೆ ಜೊತೆ, ಹತ್ತು ಮಾನಿಸ ಲೆಂಕಿತಿಯರು, ಇಪ್ಪತ್ತೊಂದು ಮಾನಿಸಂ ಲೆಂಕರ ಜತೆಗೂಡಿ ಗಜ ಮಸ್ತಕದಲ್ಲಿ ಗರುಡನನ್ನು ಆರು ಬಾರಿ ಅಪ್ಪಿ ಕೊಂಡು ಹೊಯ್ಸಳ ದೊರೆಯಾದ ಸೋಮೇಶ್ವರ ದೇವನ ಭಾಷೆಯನ್ನು ಈಡೇರಿಸಿದರು.[95] ಗರುಡರ ಆಕ್ರಮಣವನ್ನು ತಾಳಲಾಗದೆ ಆದಿಶೇಷನು ಪಾತಾಳಕ್ಕೆ ಹೋದನು. ಆದರೆ ಇದಕ್ಕೆ ವಿರುದ್ಧವಾಗಿ ಕನ್ನೇಯ ನಾಯಕನು ಭಯಾನಕ ಗರುಡನ ಬಲವನ್ನು ವಿರೋಧಿಸಿದನು. ಅವನನ್ನು ನಡುಗಿಸಿ ವಶಪಡಿಸಿಕೊಂಡು ಸೌರರಾಜನ ಲೆಂಕಾವಳಿಯನ್ನು ಪ್ರಪಂಚಕ್ಕೆ ತೋರಿಸಿದನು.[96] "ಇನ್ನೇನು ಹೇಳುವುದು! ಛೇ! ನನ್ನರಸನ ಸಾವಿನ ನಂತರ ಸನ್ನೀಸರನು ನನಗಪಹಾಸ್ಯ, ಲೆಂಕದ ಬಿಂಕದರಸನಾ ಹೇಗೆ ಬದುಕಲಿ", ಈ ರೀತಿ ಹೇಳುತ್ತಾ, ದೇಹವನ್ನು ಕೊಂಕಿಸದೇ, ತಲೆ ತುಂಡರಿಸಿದನು ಮತ್ತು ಧ್ಯಾನಾಸಕ್ತನಂತೆ ಅವನ ಕಾಲಿನ ಮೇಲೆ ಬೊಂಬೆಯಂತೆ ನಿಶ್ಚಲವಾಗಿ ನಿಂತನು ಈ ಸಾಮಂತ ಕಣ್ಣನು ತನ್ನ ಎಡಕಾಲಿಗೆ ಚಿನ್ನದ ಕಾಲಂದಿಗೆಯನ್ನು ತೊಟ್ಟು ಕೀರ್ತಿವಂತನಾದನು. ಕನ್ನೇಯ ನಾಯಕನು ನೋಡುತ್ತಾ ನಿಂತಿರುವಂತೆ ಇಡೀ ಜನಸ್ತೋಮ ನಿಬ್ಬರಗಾಯಿತು, ಸಂಬಂಧಿಗಳು ಮೂಕರಾದರು ಮತ್ತು ನಾಡಿನ ಎಲ್ಲಾ ಹೆಂಡತಿಯರು ಧೈರ್ಯವನ್ನು ಕೊಂಡಾಡಿದರು. ಕಲ್ಲವ್ವೆ, ಜವನವ್ವೆ ಮತ್ತು ವುಮ್ಮವ್ವೆ, ಪ್ರೀತಿ ಪಾತ್ರ ಪತ್ನಿಯರಾದ ಇವರು ಧೈರ್ಯದಿಂದ ಆಗತಾನೆ ಶಿರಚ್ಛೇಧವಾದ ರುಂಡವನ್ನು ಆರತಿಯಂತೆ ಬೆಳಗಿದರು."[97]

ಇನ್ನೊಂದು ಶಾಸನದಲ್ಲಿ ನಾವು ರಂಗನಾಯಕನನ್ನು ಎದುರಾಗುತ್ತೇವೆ. ಕನ್ನೇಯ ಕಾಯಕನ ಮಗನಾದ ಇವನು ಅವನ ಹೆಂಡತಿಯಾದ ಕೇತವ್ವೆ ನಾಯಕಿತಿ, ಹೊನ್ನವ್ವೆ ನಾಯಕಿತಿ, ಮರಿತವ್ವೆ ನಾಯಕಿತಿ, ಹತ್ತು ಲೆಂಕ್ತಿಗರು ಮತ್ತು ಇಪ್ಪತ್ತು ಲೆಂಕರೊಂದಿಗೆ ಆನೆಯ ತಲೆಯ ಮೇಲಿನ ಗರುಡ ವನ್ನು ಆರು ಬಾರಿ ಅಪ್ಪಿಕೊಳ್ಳುವುದರೊಂದಿಗೆ ಹೊಯ್ಸಳ ರಾಜನಾದ ಮೂರನೇ ನರಸಿಂಹನ ಭಾಷೆಯನ್ನು ಕ್ರಿ.ಶ. 1291ರಲ್ಲಿ ಪೂರೈಸಿದರು.[98]

ಗರುಡರನ್ನು ಶತ್ರುಗಳನ್ನು ಸದೆಬಡಿಯಲು ಹೇಗೆ ಕಳುಹಿಸಲಾಯಿತು ಎಂಬುದನ್ನು ಇನ್ನೊಂದು ಶಾಸನದಲ್ಲಿ ವರ್ಣಿಸಲಾಗಿದೆ.[99] ಈ ಶಾಸನವು ಹೊಯ್ಸಳ ಶೆಟ್ಟಿಯ ಮಗನಾದ ಒಬ್ಬೆಯ ನಾಯಕನನ್ನು ಉಲ್ಲೇಖಿಸುತ್ತದೆ. ಅವನು ಮಹಾ ಸಾಮಂತನ ಸ್ಥಾನವನ್ನು ಹೊಂದಿದ್ದನು. ಇವನು ಸೊಕ್ಕಿದ ಸಾಮಂತರ ವಿರುದ್ಧ ಆನೆಗಳಿಗೆ, ಇವನು ಸಿಂಹನಾಗಿದ್ದನು, ಶರಭಕ್ಕೆ ಭೇರುಂಡ ನಾಗಿದ್ದನು, ಸಾಮಂತರ ಬಂಧುವಾಗಿದ್ದನು, ಅನೇಕ ತಂತಿ ಹಾಗೂ ಸಂಗೀತ ವಾದ್ಯಗಳಲ್ಲಿ ಪರಿಣತ ನಾಗಿದ್ದನು."

"ಹೊಯ್ಸಳ ರಾಜ ಬಲ್ಲಾಳ ದೇವನು ರಾಜಧಾನಿ ದ್ವಾರಸಮುದ್ರಕ್ಕೆ ಅವನನ್ನು ಆಮಂತ್ರಿಸಿ ವೀಳ್ಯವನ್ನು ಕೊಟ್ಟು ಸಂಕ ಮಹಾದೇವನ ಸೈನ್ಯದ ವಿರುದ್ಧ ಹೋರಾಡುವಂತೆ ಆಜ್ಞೆ ಮಾಡಿ ಕಳುಹಿಸಿದನು. ಇದು ಒಂದು ಉತ್ತಮ ಕೃಪಕಟಾಕ್ಷ ಎಂದರಿತು ಅವನು ಹೊರಟನು. ಈ ಸಾಮಂತ ಒಬ್ಬ ಎದುರಾಗಿ ನುಗ್ಗಿದನು. ಮಾಂಡಲಿಕರನ್ನು ಇರಿದನು. (ಆ ಯುದ್ಧದಲ್ಲಿ ಮತ್ತು ನಂತರ)...... ಶತ್ರು ಸೇನೆಯ ಆಯುಧವು ಇವನ ಹೃದಯವನ್ನು ಭೇದಿಸಿದಾಗ ಇವನು ವೀರಸ್ವರ್ಗ ವನ್ನು ಹೊಂದಿದನು."[100]

ಈ ರೀತಿಯಾಗಿ ಗಂಧನಾರಾಯಣ ಶೆಟ್ಟಿಯ ಮುಗಿಲ ಸಂತತಿಯನ್ನು ಉಲ್ಲೇಖಿಸುವ ಶಾಸನಗಳು ಈ ಸಂತತಿಯ ಅನೇಕ ಗರುಡರು, ಲೆಂಕಿಗಳು ಮತ್ತು ಲೆಂಕಿಕರನ್ನು ನೀಡಿತು ಎಂದು ಹೇಳುತ್ತೇವೆ. ತಮ್ಮ ಸೇನಾ ಗುಣಗಳಿಗಾಗಿ ಹೆಸರುವಾಸಿಯಾಗಿದ್ದರು. ಮತ್ತೆ ಕೆಲವರು ಸಂಗೀತ ದಲ್ಲಿನ ಅವರ ಸಾಮರ್ಥ್ಯಗಳಿಗಾಗಿ ಹಾಗೂ ಕವಿಗಳಿಗೆ ನೀಡಿದ ಆಶ್ರಯದಿಂದಾಗಿ ಕೀರ್ತಿವಂತ ರಾದರು. ಹೊಯ್ಸಳರ 12 ಮತ್ತು 13ನೇ ಶತಮಾನದ ರಾಜ್ಯ ವಿಸ್ತರಣೆಯ ಕಾರ್ಯದಲ್ಲಿ ನೆರವಾದರು. ಹೊಯ್ಸಳರು ಮತ್ತು ಸೇವುಣರ ಮಧ್ಯೆ ನಡೆದ ಕದನದಲ್ಲಿ ಬಹುಶಃ ಇವರು ಪ್ರಮುಖ ಪಾತ್ರವನ್ನು ವಹಿಸಿದ್ದರೆಂದು ತೋರುತ್ತದೆ. ಅದೇ ಸಮಯದಲ್ಲಿ ಹೊಯ್ಸಳ ಆಡಳಿತ ಗಾರರ ಗರುಡರಾಗಿದ್ದರು. ಅವರು ಮಹಾ ಸಾಮಂತರು ಹಾಗೂ ಮಹಾಪ್ರಭುಗಳಾಗಿ ಅವರ ಸಾಮರ್ಥ್ಯಕ್ಕೆ ತಕ್ಕಂತೆ ನಿಷ್ಟರಾಗಿ ಸೇವೆ ಸಲ್ಲಿಸಿದರು. ಹಾಗೂ ಆ ಸಾಮ್ರಾಜ್ಯದ ನೀತಿ ಭ್ರಷ್ಟ ಮಾಂಡಲಿಕರನ್ನು ಹತ್ತಿಕ್ಕಿದರು. ಸಂಕ್ಷಿಪ್ತವಾಗಿ ಹೇಳುವುದಾದರೆ ಮುಗಿಲ ವಂಶವು ಆ ಕಾಲದ ಸೇನಾ ವರ್ಗದ ಪರಾಕ್ರಮ ಮತ್ತು ಶೌರ್ಯದ ಪ್ರತೀಕವಾಗಿತ್ತು. ಅವರು ಅವರ ಹೊಯ್ಸಳ ರಾಜರೊಂದಿಗೆ ಸಾವಿನ ಭಾಷೆಗೆ ಬದ್ಧರಾಗಿದ್ದರಿಂದ ಮತ್ತು ನಾವು ಅವರಿಗೆ ಯಾವುದೇ ಕ್ಷಣದಲ್ಲೂ

ಕಟ್ಟಿಬಿಟ್ಟ ಬುತ್ತಿಯಾಗಿದ್ದರಿಂದ ಯುದ್ಧದಲ್ಲಿ ಅವರು ಪ್ರದರ್ಶಿಸುತ್ತಿದ್ದ ಪರಾಕ್ರಮವು ಸರಿಸಾಟಿಯಿಲ್ಲದ್ದಾಗಿತ್ತು. ಅವರ ತ್ಯಾಗ ಪ್ರಜ್ಞೆಯು ಹೊಯ್ಸಳರ ಶತ್ರುಗಳ ವಿರುದ್ಧ ವೀರಾಗ್ರಣಿಗಳಂತೆ ಮಾಡಿತ್ತು. ನಾವುಗಳು ಮಂಡ್ಯ ಜಿಲ್ಲೆಯ ಕೆ.ಆರ್.ಪೇಟೆ ತಾಲ್ಲೂಕಿನ ಅಗ್ರಹಾರ ಬಾಚೋಹಳ್ಳಿಯಲ್ಲಿನ ಬೆಲೆ ಬಾಳುವಂತಹ ಶಾಸನಗಳನ್ನು ಹೊಂದಿದ ಪುಣ್ಯವಂತರಾಗಿದ್ದೇವೆ. ಏಕೆಂದರೆ ಇವುಗಳ ಗರುಡರ ಪರಾಹಿತಾರ್ಥಿ ಆತ್ಮಹತ್ಯೆಯ ಬಗ್ಗೆ ಒಂದು ದೃಶ್ಯವನ್ನು ಪ್ರದರ್ಶಿಸುವುದಲ್ಲದೆ ಅವರು ಆಡಳಿತದಲ್ಲೂ ಮತ್ತು ಸೇನೆಯಲ್ಲೂ ನೀಡಿದ ನಿರ್ದಿಷ್ಟ ಸೇವೆಯ ಒಂದು ನೋಟವನ್ನು ನಮಗೆ ನೀಡುತ್ತವೆ. ಈ ಉದಾಹರಣೆಯಲ್ಲಿ ಈ ಪಂಥದ ವಂಶ ಪಾರಂಪತ್ಯ ವೈಶಿಷ್ಟತೆಯನ್ನು ಕಾಣಬಹುದು.

ಸಂಕ್ಷಿಪ್ತವಾಗಿ ಹೇಳುವುದಾದರೆ ಈ ಗರುಡ ಪಂಥವು ಸಾಮಂತ ಯೋಧ ರಾಜ ವ್ಯವಸ್ಥೆಯ ನೈಸರ್ಗಿಕ ಬೆಳವಣಿಗೆಯ ಮೌಲ್ಯ ಸಿದ್ಧಾಂತವನ್ನು ವಿವರಿಸುತ್ತದೆ. ಈ ಸಾಮಂತರ ಧರ್ಮನೀತಿ ತತ್ವಗಳಿಂದ ನಿಸ್ಸಂದೇಹ ನಿಷ್ಠೆ, ಅಂತಸ್ತು ಮತ್ತು ಗೌರವದ ಬಲವಾದ ರಕ್ಷಣೆ, ಎಲ್ಲ ಕರ್ತವ್ಯಗಳ ಸಮರ್ಪಕವಾಗಿ ಪೂರ್ಣಗೊಳಿಸುವಿಕೆ ಇವುಗಳು ಈ ಪಂಥದ ಅವಿಭಾಜ್ಯ ಅಂಗವಾಗಿದ್ದವು. ಹೊಯ್ಸಳ ರಾಜ ವ್ಯವಸ್ಥೆಯ ಊಳಿಗಮಾನ್ಯ ಪರಿಸ್ಥಿತಿಗಳು ಬಹುಶಃ ಈ ಮೌಲ್ಯ ಸಿದ್ಧಾಂತವನ್ನು ರೂಪಿಸಿದ್ದವು. ಈ ಗರುಡ ಪಂಥವು 13ನೇ ಶತಮಾನದಲ್ಲಿ ಅದರ ಪರಾಕಾಷ್ಟತೆಯ ಮಟ್ಟವನ್ನು ತಲುಪಿತು. ಅವರು ಹೊಯ್ಸಳರಡಿಯ ಸಾಮಂತ ಪದ್ಧತಿಯ ಭಾಗವಾಗಿದ್ದರಿಂದ ಅವರನ್ನು 'ಸಾಮಂತ ಗರುಡ' ಎಂದು ಕರೆಯಲಾಗುತ್ತಿತ್ತು.[101] ಯುದ್ಧ ನೀತಿಯೊಂದಿಗಿನ ಅವರ ಸಂಬಂಧವು ಅವರಿಗೆ 'ಸಂಗ್ರಾಮ ಗರುಡ' ಎಂಬ ಬಿರುದನ್ನು ಒದಗಿಸಿತ್ತು.[102] ಹಾಗೂ ಅವರ ರಾಜನಿಷ್ಠೆಯಲ್ಲಿ ಶಾಸನಗಳು ನಮಗೆ ಹೇಳುವಂತೆ ಅವರು ನಿಸ್ಸಂದೇಹವಾಗಿ ವಿಷ್ಣುವಿನ ಗರುಡದಂತಿದ್ದರು. ಈ ರೀತಿಯಾದ ನೀತಿಯುತವಾದ ಮತ್ತು ಶ್ರದ್ಧೆಯುಳ್ಳ ಯೋಧರ ತಂಡದ ನೆರವಿಲ್ಲದೆ ಹೊಯ್ಸಳರ ಕ್ರಿ.ಶ. 12 ಮತ್ತು 13ನೇ ಶತಮಾನದ ರಾಜ್ಯ ವಿಸ್ತರಣೆಯು ಊಹಿಸಲು ಅಸಾಧ್ಯ. ಗರುಡರು ನಿಸ್ಸಂದೇಹವಾಗಿ ಹೊಯ್ಸಳ ರಾಜವ್ಯವಸ್ಥೆಯ ಆಧಾರಸ್ತಂಭವಾಗಿದ್ದರು.

ಶಾಸನಗಳಲ್ಲಿ ಬರುವ ವಿವರಗಳನ್ನು ಒಟ್ಟುಗೂಡಿಸಿ ಮುಗಿಲ ಕುಲದ ಈ ಗರುಡರ ವಂಶಾವಳಿಯನ್ನು ಹೀಗೆ ರೂಪಿಸಬಹುದು. ವೀರಸೋಮೇಶ್ವರನ ಕಾಲದ ಕ್ರಿ.ಶ. 1256ರ ಕೃ.ರಾ.ಪೇಟೆಯ ಅಗ್ರಹಾರ ಬಾಚೋಹಳ್ಳಿಯಲ್ಲಿ ದೊರೆತಿರುವ ಶಾಸನ ಸಂಖ್ಯೆ 82 (4, 9) ಈ ಮಾಹಿತಿ ದೊರೆತಿದೆ.




## ವೀರ ಸೋಮೇಶ್ವರನ ಕಾಲದಲ್ಲಿದ್ದ ಗರುಡರು

| ಗರುಡರು | ಶಾಸನ ಸಂಖ್ಯೆ | ಸ್ಥಳ | ರಾಜ | ಕಾಲ |
|---|---|---|---|---|
| ಪ್ರಭುಗಾವುಡ | EC, V-4, Ins. No.222 | ಚಾಮರಾಜನಗರ | ನರಸಿಂಹದೇವ | 12ನೇ ಶತಮಾನ |
| ಶಂಕರಗಾವುಡ | EC, V-3, Ins. No.89 | ಕಲ್ಲಹಳ್ಳಿ (ಗುಂಡ್ಲುಪೇಟೆ) | ನರಸಿಂಹ 2 | 12ನೇ ಶತಮಾನ |
| ಗಾವುಡ | EC, V-4, Ins. No.383 | ತಮ್ಮಡಹಳ್ಳಿ (ಚಾಮರಾಜನಗರ) | ಸೋಮೇಶ್ವರ | ಕ್ರಿ.ಶ. 1238 |

| | | | | |
|---|---|---|---|---|
| ಕವಿ ಗಾವುಡ | EC, V-4, Ins. No.182 | ಚಾಮರಾಜನಗರ | ಸೋಮೇಶ್ವರ | ಕ್ರಿ.ಶ. 1240 |
| ಗಾವುಡ | EC, V-4, Ins. No. 191 | ಗುಂಬಳ್ಳಿ (ಯಳಂದೂರು) | ಸೋಮೇಶ್ವರ | ಕ್ರಿ.ಶ. 1240 |
| ಪ್ರಭುಗಾವುಡರು | EC, V-3, Ins. No. 256 | ಕಲ್ಕುಂದ | ಸೋಮೇಶ್ವರ | ಕ್ರಿ.ಶ. 1241 |
| ಬೋಚಿ-ಗಾವುಡ | EC, V-5, Ins. No. 217 | ಹೆಮ್ಮನಹಳ್ಳಿ (ಮೈಸೂರು) | ಸೋಮೇಶ್ವರ | ಕ್ರಿ.ಶ. 1242 |
| ದಮ್ಮ-ಗಾವುಡ | EC, V-6, Ins. No.69 | ಚಾಕನಕೆರೆ | ಸೋಮೇಶ್ವರ | ಕ್ರಿ.ಶ. 1242 |
| ಪ್ರಾಚಿ-ಗಾವುಡರು | EC, V-6, Ins. No. 104 | ಹೊನ್ನೇನಹಳ್ಳಿ (ನಾಗಮಂಗಲ) | ಸೋಮೇಶ್ವರ | ಕ್ರಿ.ಶ. 1244 |
| ಮಾದಿ-ಗಾವುಡ | EC, V-8, Ins. No. 86 | ತಾವನಂದಿ (ಹೊಳೆನರಸೀಪುರ) | ಸೋಮೇಶ್ವರ | ಕ್ರಿ.ಶ. 1248 |
| ಆದಿ-ಗಾವುಡ | EC, V-5, Ins. No. 241 | ಹೀರೆಹಳ್ಳಿ | ಸೋಮೇಶ್ವರ | ಕ್ರಿ.ಶ. 1247 |
| ಕೋವಿ-ಗಾವುಡ | EC, V-4, Ins. No. 182 | | ಸೋಮೇಶ್ವರ | ಕ್ರಿ.ಶ. 1248 |
| ಮಲ್ಲಿ-ಗಾವುಡ | EC, V-7, Ins. No. 71 | ಕನ್ನಲಿ (ಮಂಡ್ಯ) | ಸೋಮೇಶ್ವರ | ಕ್ರಿ.ಶ. 1251 |
| ದಮ್ಮೆ-ಗಾವುಡ | EC, V-6, Ins. No. 69 | ಚಾಕನಕೆರೆ | ಸೋಮೇಶ್ವರ | ಕ್ರಿ.ಶ. 12ನೇ ಶತಮಾನ |
| ಚಿಕ್ಕ-ಗಾವುಡ | EC, V-5, Ins. No. 223 | ಗೋವಿಂದಹಳ್ಳಿ | ಸೋಮೇಶ್ವರ | ಕ್ರಿ.ಶ. 12ನೇ ಶತಮಾನ |
| ಸಿರಿಯಾ-ಗಾವುಡ | EC, V-7, Ins. No. 19 | ದೊಡ್ಡಮಾಲಗೂಡು (ಮಳವಳ್ಳಿ) | ಸೋಮೇಶ್ವರ | ಕ್ರಿ.ಶ. 12ನೇ ಶತಮಾನ |
| ಕೀರ್ತಿ-ಗಾವುಡ | EC, V-3, Ins. No. 274 | | ಸೋಮೇಶ್ವರ | ಕ್ರಿ.ಶ. 12ನೇ |

| | | | | ಶತಮಾನ |
|---|---|---|---|---|
| ಮಾರಿ-ಗಾವುಡ | EC, V-1, Ins. No. 85 | ನಿಡುತ (ಸೋಮವಾರಪೇಟೆ ತಾ) | 3ನೇ ನರಸಿಂಹ | ಕ್ರಿ.ಶ. 1255 |

## ಟಿಪ್ಪಣಿಗಳು ಮತ್ತು ಉಲ್ಲೇಖಗಳು


1) E.C. 11-Dg 133-1071
2) E.C. 7 – SK 297 – 1074
3) E.C. 7 – SK 11 – 1063
4) E.C. 7 – SK 185 – 1158
5) E.C. 5 – B.L. 236 – 1139
6) E.C. 6 – Kd 99 – 1143
7) IE – 1928 – Pt. IT – No.31-1166
8) BKI. I. ii – 144-1098
9) E.C. 3 – Sr.34 – 1126
10) B.K. I. I. i. 64 – 1028
11) S.I.E. IX. i -159 – C. 1090
12) E.C.5 – Mj. 18 – 1095
13) E.C. 7 – Sh. 97 – 1113
14) Sachan – alberuni ipp, 154
15) Sachan – II. P. 155
16) E.I. 13 – p.301-1125
17) E.I. 13-p.301-1125
18) E.C. 7 – Sh 10 – 1085
19) MAR 1937 – p.176-1140
20) E.C. 7 – Ci 39-1149
21) MAR 1932 p. 1711 – 1175, EC 7. Sh 112-1139, MAR 1910-p.36
22) EC 8 – sb. 138-1145
23) Alberuni – Ch LXIX – p – 154-155

24) E.C.2 – 132-1123
25) E.C.2 – 130-1118
26) E.C.4 – Hg 18
27) E.I.3 – p.216
28) E.C. 6 – Mudgere 34
29) S.I.E. 1919 – p.79-80
30) E.C. 7 – No.219
31) J.B.B.R.A.S.X. p.177
32) E.C. 1 – Cg. 52 – 1290
33) MAR. 1912 – p.75, MAR. 1914-p.65
34) E.C.2 – 118-1120
35) E.C. 8 – Nr 47 – 1062
36) MAR. 1909 – p.19
37) E.C. 8 – Nr 37 – 1147
38) I.E. 49-50 – No.128-1028
39) E.C. 5 – Cr.248 – 1134
40) E.C. 5 – AK 110-1142
41) E.C. 6 – AK 98 (i.e. 1254)
42) E.C. 6 – TK. 65-1141
43) E.C. 5 – AK 108
44) – do –
45) E.C. 5 – Hn 151-1156
46) The Position of Woman in Hindu Civilization – p.182
47) E.I. 13 – p.41 – 1112
48) E.C. 7 – S.K. 118-1150
49) E.C. 2 – S.B. 126-1113
50) E.C. 3 – Tn – 105
51) E.C. 3 – NJ 29 – 1095
52) South Indian Bronzes – C.Sivaramamurthi p.28
53) E.C. 8 – Nr 37-1147
54) E.C. 8 – Nr 37 – 1148

55) E.C. 2 – SB – 126-1113

56) Arch. Society of South India 1959-p.60

57) S.I.I. 13. No.144

58) E.C. 7 – SK 99 – 1113

59) – do –

60) E.C. 3 – Sr.34 – 1126

61) Leelavathi Prabandham – Nemichandra Chap. 12 – p.19

62) – do –

63) Manas II. Ch.8

64) E.C. 5 – BL 112

65) E.C. 5- BL 124 -1133

66) Travels of Marco Polo p.294

67) Manasollasa – II-III, Vimsati – p.15

68) – do – p.13

69) Alberuni – Ch.L.XIII p. 135

70) A History of South India – K.A.N. p.150

71) Alberuni-II, p.170

72) E.C. 7 – S.K. – 136-1068

73) E.C. 9 – Cg-44-1077

74) E.C. 7 – SK 62 – 1070

75) See Emile Durkheim – suicide, trasns. by J.A.Spaulding and C.Simson ed by George Simpson (New York 1951). Durkheim divides suicide into three categories:
(a) Cgoistic (b) altruistic (c) anomic

76) E.C. 4 – Pt. II – K.R.10

77) MAR 1915 – p.56-1291

78) E.C.V. (OS) B1-112, C. 1200 A.D

79) Ibid.,

80) Ibid.,

81) Ibid., E.C. IV (OS), K.R.Pet 9, 1257 A.D.: Ibid, K.R.Pet 10, 1292 A.D

82) Chidananda Murthy: Kannada Sasanagala – Samskritika Adhyana, Mysore 1966 p.309

83) M.M.Kaluburgi, Samadhi-Balidana – Veeramarana, Smarakagalu, I.B.H. Prakashana, Bangalore 1980 pp.58-59.

84) E.C. IV (OS) B1. 112, C. 1200 A.D

85) Kaluburgi: Op.Cit

86) Ibid., p.59

87) Chidananda Murthy, OP Cit. p.310

88) Fairbank, Reisehauer, Craig, East Asia, Boston 1973 p.411

89) E.C. VI (NS) K.R.Pet 77, 1179 A.D. and K.R.Pet 82, 1179 A.D.

90) Ibid, 77, 1179 AD

91) Ibid.,

92) Ibid., K.R.Pet 82 1179 A.D

93) Ibid.,

94) Ibid.,

95) Ibid.,

96) Ibid.,

97) Ibid.,

98) Ibid., K.R.Pet 84. 1291 A.D

99) Ibid., K.R.Pet 77, 1179 A.D.

100) Ibid.,

101) SII IX, I, 115 1054 A.D

102) BKI II, 113, 1974 A.D

# ಅಧ್ಯಾಯ 6
# ಶಿಕ್ಷಣ ಮತ್ತು ಸಾಹಿತ್ಯ

## ಶಿಕ್ಷಣ

ಈ ಕಾಲದಲ್ಲಿನ ಶೈಕ್ಷಣಿಕ ಚಟುವಟಿಕೆಗಳ ಬಗ್ಗೆ ಶಾಸನಗಳೂ ಮಹತ್ವದ ವಿವರಗಳನ್ನು ಒದಗಿಸುತ್ತವೆ. ವಿವಿಧ ಶೈಕ್ಷಣಿಕ ಸಂಸ್ಥೆಗಳಿಗೆ ಭುಮಿ ಅಥವಾ ಹಣವನ್ನು ದಾನ ಮಾಡಿದ ಬಗ್ಗೆ ಶಾಸನಗಳು ಬೆಳಕು ಬೀರುತ್ತವೆ. ಅಗ್ರಹಾರಗಳು, ಬ್ರಹ್ಮಪುರಿ, ಮಠಗಳು ಹಾಗೂ ದೇವಾಲಯ ಗಳು ಈ ಕಾಲದಲ್ಲಿ ಪ್ರವರ್ಧಮಾನವಾಗಿದ್ದ ಶೈಕ್ಷಣಿಕ ಸಂಸ್ಥೆಗಳು. ಅಗ್ರಹಾರದ ಗ್ರಾಮದ ಆಡಳಿತವನ್ನು ವಿದ್ಯಾವಂತ ಬ್ರಾಹ್ಮಣರಾಗಿದ್ದ ಮಹಾಜನರ ಸಭೆ ನೋಡಿಕೊಳ್ಳುತ್ತಿತ್ತು. ಅಗ್ರಹಾರವು ತೆರಿಗೆಗಳಿಂದ ಮುಕ್ತವಾಗಿತ್ತು. "ಐತಿಹಾಸಿಕ ಕಾಲಗಳಲ್ಲಿ ಈ ಸಂಸ್ಥೆಗಳು ನೀಡಿದ ಸೇವೆ ಅಪ್ರತಿಮವ್ರೂ, ಸಶಕ್ತವೂ ಆಗಿತ್ತು."[1]

ದಾಖಲೆಗಳು ಈ ಅಗ್ರಹಾರವನ್ನು ಶಿಕ್ಷಣದ ಕೇಂದ್ರ ಎಂತಲೂ, ಇಲ್ಲಿನ ಗಿಳಿಗಳೂ ಕೂಡ ವೇದ, ಮಂತ್ರಗಳನ್ನು ಹೇಳಬಲ್ಲವೆಂದೂ ಬಹಳಷ್ಟು ಹೊಗಳಿವೆ. ಶಿಕ್ಷಣಕ್ಕೆ ಉತ್ತೇಜನವು ಅಗ್ರಹಾರದ ಪ್ರಮುಖ ಲಕ್ಷಣವಾಗಿತ್ತು. ದಾನ ಸ್ವೀಕರಿಸುವವರು ವಿದ್ಯಾವಂತರಾಗಿದ್ದು ವೇದ, ಸ್ಮೃತಿ, ಪುರಾಣ, ನೀತಿಶಾಸ್ತ್ರ, ತರ್ಕ, ಆಗಮ, ಕಾವ್ಯ ಹಾಗೂ ನಾಟಕ ಹೀಗೆ ಮುಂತಾದ ಶಾಖೆಗಳಲ್ಲಿ ಅವರು ನುರಿತವರಾಗಿದ್ದರು.[2] ತಮಿಳು ದೇಶದಲ್ಲಿ ಅಗ್ರಹಾರಗಳನ್ನು ಚತುರ್ವೇದಿ ಮಂಗಳಂ ಎಂದು ಗುರುತಿಸಲಾಗುತ್ತಿತ್ತು. ನಮಗೆ ಚೋಳ ಮಹಾದೇವಿಪುರಂ ಎಂಬ ಅಗ್ರಹಾರದ ವಿಷಯ ದೊರಕುತ್ತದೆ.[3]

ಅಗ್ರಹಾರದ ನಂತರ ಶಿಕ್ಷಣದ ಉತ್ತೇಜನಕ್ಕಾಗಿ ಬ್ರಹ್ಮಪುರಿಗಳು ಇದ್ದವು. ಬ್ರಹ್ಮಪುರಿಗಳು ನಗರ, ಪಟ್ಟಣಗಳಲ್ಲಿ ವಾಸಿಸುತ್ತಿದ್ದ ಬ್ರಾಹ್ಮಣರ ವಾಸಕ್ಷೇತ್ರಗಳಾಗಿದ್ದವು. ಅವು ಅಗ್ರಹಾರಗಳಂತೆ ಪ್ರತ್ಯೇಕ ವಿಭಾಗಗಳಾಗಿರದೆ, ಪಟ್ಟಣಗಳ ಒಂದು ಭಾಗವಾಗಿದ್ದವಷ್ಟೇ.[4] ಮಠ ಹಾಗೂ ದೇಗುಲಗಳು ಮತ್ತೊಂದು ರೀತಿಯ ಜನಪ್ರಿಯ ವಿದ್ಯಾಕೇಂದ್ರಗಳಾಗಿದ್ದವು. ಮಠಗಳು ಧಾರ್ಮಿಕ ವಿದ್ಯಾಭ್ಯಾಸದ ಕೇಂದ್ರಗಳಾಗಿದ್ದವು, ವೀರಸೋಮೇಶ್ವರನ ಕಾಲದ ಒಂದು ಶಾಸನವು ಹೇಳುವಂತೆ ಸೋಮೇಶ್ವರನ ಪಟ್ಟದ ರಾಣಿಯಾದ ಸೋಮಲಾದೇವಿಯನ್ನು ಅಂತಿಮವಾಗಿ ತೃಪ್ತಿಪಡಿಸುವುದಕ್ಕಾಗಿ ಸೋಮೇಶ್ವರನು ಕಲುಕುನಿ ನಾಡಿನ ಮಟ್ಟಕಟ್ಟದ ಜೊತೆಗೆ ಮಾದನಪಿಳ್ಳೆಗೆ ಸೋಮಲಾಪುರ ಎಂಬ ಹೆಸರನ್ನು ನೀಡಿರುವುದು ಕಂಡುಬರುತ್ತದೆ ಮತ್ತು ಋಗ್ವೇದ ಖಂಡಿಕಾ, ಯಜುರ್ವೇದ, ಸಾಮದೇವ

ಭಟ್ಟ ವೃತ್ತಿಗಳಿಗಾಗಿ ಬ್ರಾಹ್ಮಣರಿಗೆ ಇತರೆ ವಸ್ತುಗಳ ಜೊತೆ ಪಾಲುಗಳನ್ನು ನೀಡಿರುವುದು ಕಂಡು ಬರುತ್ತದೆ.[5] ಮಠಗಳು ವಸತಿ ವಿದ್ಯಾಲಯಗಳಾಗಿದ್ದು, ವಿದ್ಯಾರ್ಥಿಗಳಿಗೆ ಉಚಿತ ವಸತಿ ಹಾಗೂ ವಿದ್ಯಾದಾನವನ್ನು ನೀಡಲಾಗುತ್ತಿತ್ತು. ಮಠಗಳು ಮೊದಮೊದಲಿಗೆ ಕೇವಲ ಧಾರ್ಮಿಕ ಕಾರಣಗಳಿಗಾಗಿ ಹೆಸರು ಪಡೆದುದಾದರೂ ನಂತರ ವಿದ್ಯಾಕೇಂದ್ರಗಳಾಗಿ ಪ್ರಮುಖ ವಹಿಸಿರುವುದು ಕಂಡು ಬರುತ್ತದೆ. ಮಠದ ನಿರ್ವಹಣೆಗಾಗಿ ದಾನ ನೀಡಲಾಗುತ್ತಿದ್ದ ಭೂಮಿಯನ್ನು ಮಠದ ಭೂಮಿ ಎಂದು ಕರೆಯಲಾಗುತ್ತಿತ್ತು.[6] ಕ್ರಿ.ಶ. 1265ರ ಶಾಸನವೊಂದು ತಲಕಾಡಿನ ರಾಜೇಶ್ವರಂ ದೇಗುಲಕ್ಕೆ ಪಂಚಮಠಗಳ ಸ್ಥಾನಾಧಿಪತಿಗಳು ಮಹಾನೇರವೀದಾಂಗಣಪಳ್ಳಿ ಎಂಬ ಹಳ್ಳಿಯನ್ನು ದಾನ ನೀಡಿದ ಬಗ್ಗೆ ವಿವರಿಸುತ್ತದೆ.[7]

ಶಿಕ್ಷಣದ ಉನ್ನತಿಗಾಗಿ ದೇವಾಲಯಗಳು ಪ್ರಮುಖ ಪಾತ್ರ ವಹಿಸಿರುವುದು ಕಂಡುಬರುತ್ತದೆ. ದಕ್ಷಿಣ ಭಾರತದ ದೇವಾಲಯಗಳು ಹಲವಾರು ವಿಧಗಳಲ್ಲಿ ಶಿಕ್ಷಣ ಸಂಸ್ಥೆಗಳ ಇಷ್ಟಾರ್ಥವನ್ನು ನೆರವೇರಿಸಿದವು. ದೇವಾಲಯಗಳಲ್ಲಿ ಕಾವ್ಯವಾಚನ, ವೇದಗಳ ಪಠನೆ, ಧಾರ್ಮಿಕ ಪದ್ಯಗೀತೆಗಳು, ತೇವರುನಿಂದ ಭಕ್ತಿಗೀತೆಗಳು, ನಳಿಯಿರಪ್ರಭಂದಂ ಹಾಗೂ ಪವಿತ್ರ ಕೃತಿಗಳ ವಾಚನ ಮತ್ತು ಪ್ರವಚನಕ್ಕೆ ವಿಶೇಷವಾದ ಅವಕಾಶಗಳಿದ್ದವು. ದೇವಸ್ಥಾನಗಳಿಗೆ ಸಂಬಂಧಿಸಿದ್ದ ಋಷಿಗಳು ವಿದ್ಯಾವಂತರಾಗಿದ್ದರು. ದೇವಸ್ಥಾನದ ಭಕ್ತರು ಶಿಕ್ಷಣಕ್ಕಾಗಿ ಬಗೆಬಗೆಯ ಕೊಡುಗೆಗಳು ಮತ್ತು ದಾನಗಳನ್ನು ನೀಡುತ್ತಿದ್ದರು. ಆದ್ದರಿಂದ ದೇವಾಲಯಗಳ ಕಲಿಕೆಯ ಕೇಂದ್ರಬಿಂದುವಾಗಿ ಬೆಳವಣಿಗೆಯನ್ನು ಸಾಧಿಸಿದವು.

## ಪ್ರಾಥಮಿಕ ಶಿಕ್ಷಣ

ವಿದ್ಯಾರ್ಥಿಗಳು ಬಹುಶಃ ಅವರ ಐದನೇ ವಯಸ್ಸಿನಲ್ಲಿ ಶಿಕ್ಷಣವನ್ನು ಪ್ರಾರಂಭಿಸಿದರು. ಹೊಯ್ಸಳರ ದೊರೆ ವಿಷ್ಣುವರ್ಧನನಿಂದ ಪೋಷಿಸಲ್ಪಟ್ಟ ಚಿಪ್ಪಿಯಣ್ಣನು ತನ್ನ ಶಿಕ್ಷಣವನ್ನು ತನ್ನ ಉಪನಯನದ ನಂತರ ಮತ್ತು 7–8 ವರ್ಷಗಳ ನಡುವಿನ ಅವಧಿಯಲ್ಲಿ ಪ್ರಾರಂಭಿಸಿದನು. ಇವನು ಶಾಸ್ತ್ರ ಮತ್ತು ಶಸ್ತ್ರವೆರಡರಲ್ಲೂ ಪ್ರವೀಣತೆಯನ್ನು ಹೊಂದಿದ್ದ ಎಂದು ಹೇಳಲಾಗಿದೆ.[8]

## ಉನ್ನತ ಶಿಕ್ಷಣ

ಉನ್ನತ ಶಿಕ್ಷಣ ಕೇಂದ್ರಗಳಲ್ಲಿ ಭೋದಿಸಿ ಜ್ಞಾನದ ವಿಸ್ತರಣೆಗೆ ಕಾರಣರದ ಶಿಕ್ಷಕರು ಆಳವಾದ ಪಾಂಡಿತ್ಯವನ್ನು ಹೊಂದಿದ್ದು ಅವರ ವೃತ್ತಿಗೆ ತಮ್ಮನ್ನು ಅರ್ಪಿಸಿಕೊಂಡಿದ್ದರು. ಈ

ಕಾಲದ ಶಾಸನಗಳು ಬ್ರಾಹ್ಮಣರು ಮತ್ತು ಇತರ ವಿದ್ವಾಂಸರ ಕಲಿಕೆಯನ್ನು ವಿವರಿಸುತ್ತವೆ. ಮಾರೋಲ್‌ನ 1024ರ ಒಂದು ಶಾಸನವು ಒಬ್ಬ ಜೈನ ಶಿಕ್ಷಕನ ಜ್ಞಾನದ ಬಗ್ಗೆ ಮಾಹಿತಿಯನ್ನು ಒದಗಿಸುತ್ತದೆ. ಅದರಂತೆ ಆ ಜೈನ ಶಿಕ್ಷಕನಾದ ಅನಂತವೀರ್ಯಮುನಿಯು ವ್ಯಾಕರಣ, ನಿಘಂಟು, ಗಣಿತ, ವಾತ್ಸಾಯನ, ಜ್ಯೋತಿಷ್ಯ, ಶಕುನ, ಛಂದಸ್ಸು, ಮನು, ಗಾಂಧರ್ವ, ಅಲಂಕಾರ, ಮಹಾಕಾವ್ಯ ನಾಟಕ ಮತ್ತು ಸಿದ್ಧಾರ್ಥಗಳ ಮೇಲೆ ಅಪ್ರತಿಮ ವಿದ್ವತ್ತನ್ನು ಹೊಂದಿದ್ದನು. ಈ ದೊಡ್ಡ ಪಟ್ಟಿಯು ಜೈನಮುನಿಯ ಪ್ರಶಂಸೆಯಾಗಿರಬಹುದು. ಆದರೆ ಇದು ಆ ಕಾಲದ ಒಬ್ಬ ಶ್ರಮ ಅಭ್ಯಾಸಿ ವಿದ್ವಾಂಸನು ಎಷ್ಟೆಲ್ಲಾ ವಿಷಯಗಳಲ್ಲಿ ಜ್ಞಾನವನ್ನು ಪಡೆಯಬಹುದಾಗಿತ್ತು ಎಂಬುದನ್ನು ಸೂಚಿಸುತ್ತದೆ.[9]

ಕ್ರಿ.ಶ. 1253ರಲ್ಲಿ ವೀರಸೋಮೇಶ್ವರನು ಸೋಮಲಾಪುರದ ಬ್ರಾಹ್ಮಣರಿಗೆ ಅವರ ಋಗ್ ಯಜಸ್, ಸಾಮದೇವ ಖಂಡಿಕಗಳು ಭಟ್ಟವೃತ್ತಿಗಾಗಿ ಇನ್ನಿತರ ವಸ್ತುಗಳ ಜೊತೆಗೆ ಪಾಲುಗಳನ್ನು ನೀಡಿರುವುದು ಕಂಡುಬರುತ್ತದೆ.[10]

ಶಿಕಷಣವು ದೇವಗಳಭ್ಯಾಸ ವೇದಾಂಗ ಮತ್ತು ಉಪಾಂಗಗಳ ಅಭ್ಯಾಸವನ್ನೊಳಗೊಂಡಿತ್ತು. ಬಾಲ ಶಿಕ್ಷೆಯ ಬಗ್ಗೆ ಶಾಸನಗಳು ಪ್ರಸ್ತಾಪಿಸುತ್ತವೆ. ಶಿಕ್ಷಣವು ವೇದಾಂಗಗಳಲ್ಲಿ ಒಂದಾಗಿತ್ತು. ಇದು ವೇದಗಳ ಸರಿಯಾದ ಉಚ್ಚಾರಣೆಯನ್ನು ಬೋಧಿಸುತ್ತಿತ್ತು. ಬನವಾಸಿನಾಡಿನ ಬ್ರಾಹ್ಮಣರು ಪ್ರವಚನ, ಚರ್ಚೆ ಮತ್ತು ಶಿಕ್ಷಣಗಳಲ್ಲಿ ಪಾರಂಗತರಾಗಿದ್ದರು ಎಂದು ಹೇಳಲಾಗುತ್ತದೆ. ಅವರು ವೇದಗಳ ಶ್ರೇಷ್ಟ ವಿದ್ವಾಂಸಕರಾಗಿದ್ದರು. ಇವರು ತಪ್ಪು ಉಚ್ಚಾರಣೆ ಮತ್ತು ತಪ್ಪಾಗಿ ಪಠಿಸುವುದರಿಂದ ಮುಕ್ತ ರಾಗಿದ್ದರು. ಹಾಗೆಯೇ ವೇದಗಳ ಪಠನೆಯಲ್ಲಿನ ವಿವಿಧ ಪದ್ಧತಿಗಳಲ್ಲಿ ಪ್ರವೀಣರಾಗಿದ್ದರು. ಕೆಲವರು ವೇದಗಳನ್ನು ಅವುಗಳ ಅರ್ಥದೊಂದಿಗೆ ಕಲಿತರು. ಕೇವಲ ಪಠಿಸುವುದನ್ನು ಮಾತ್ರ ತಿಳಿದು ಅದರ ಅರ್ಥವನ್ನು ತಿಳಿಯದವರನ್ನು ನಿಶ್ಚಲ ಕಂಬಗಳಿಗೆ ಮತ್ತು ಭಾರ ಒಯ್ಯುವ ಸಾಧನ ಗಳಿಗೆ ಹೋಲಿಸಲಾಗಿದೆ. ವೇದಾಭ್ಯಾಸವು ಕೇವಲ ಬ್ರಾಹ್ಮಣರಿಗಷ್ಟೇ ಸೀಮಿತವಾಗದೆ ಕ್ಷತ್ರಿಯರೂ ಕೂಡ ಕಲಿತಿದ್ದರು.[11]

ವಿದ್ಯಾರ್ಥಿಗಳಿಗೆ ಬೋಧಿಸುತ್ತಿದ್ದ ಜ್ಞಾನದ ಇನ್ನಿತರ ಅಂಗಗಳೆಂದರೆ, ವ್ಯಾಕರಣ, ಕೌಮಾರ, ರೂಪಾವತಾರ, ಪಳನಿ, ಜ್ಯೋತಿಶಾಸ್ತ್ರ, ಪುರಾಣಗಳು, ಕಾವ್ಯ ಮತ್ತು ನಾಟಕ ಅರ್ಥಶಾಸ್ತ್ರ, ಭರತ

ಶಾಸ್ತ್ರ, ವಾತ್ಸಾಯನ, ಆರು ದರ್ಶನಗಳು ಮತ್ತು ಶ್ರುತಿಗಳು. ಶೈವರು ಲಾಕುಲಗಾಮ ಮತ್ತು ಶೈವಗಾಮಗಳನ್ನು ಕಲಿತರೆ ಜೈನರು ಶಕಟಾಯನ ಪುಜಪಾದದ ವ್ಯಾಕರಣವನ್ನು ಜ್ಞಾನದ ಇತರೆ ಭಾಗಗಳಲ್ಲಿ ಕಲಿತರು.[12]

ಮಧ್ಯಕಾಲೀನ ಯುಗದಲ್ಲಿ ಪ್ರಾಥಮಿಕ ಶಿಕಷಣವು ಬರವಣಿಗೆಯ ಕಲೆ, ವ್ಯಾಕರಣ, ಅಂಕ ಗಣಿತ, ಜ್ಯೋತಿಶಾಸ್ತ್ರ, ಕಾವ್ಯಶಾಸ್ತ್ರ, ಛಂದಸ್ಸು ಮತ್ತು ತರ್ಕಶಾಸ್ತ್ರ ಹಾಗೂ ಇತರೆ ವಸ್ತುಗಳನ್ನೊಳಗೊಂಡಿತ್ತು. ಕನ್ನಡ ಕಲಿಕೆಯ ಮೇಲಿನ ದತ್ತಿಯ ಬಗ್ಗೆ ಶಾಸನಗಳು ನಿರ್ದಿಷ್ಟವಾದ ಮಾಹಿತಿಯನ್ನು ನೀಡದಿದ್ದರೂ ಕನ್ನಡವನ್ನು ಇತರ ಭಾಷೆಗಳ ಜೊತೆಗೆ ಕಲಿಯಲಾಯಿತು ಎಂದು ಹೇಳಬಹುದು. ಇತರೆ ದತ್ತಿಗಳ ಜೊತೆ ಕನ್ನಡ ಅಕ್ಷರವನ್ನು ಕಲಿಯಲು ದತ್ತಿಯನ್ನು ಕೊಡಲಾಯಿತೆಂದು ಕೆಲವು ಶಾಸನಗಳು ಹೇಳುತ್ತವೆ. ಸಂಸ್ಕೃತವನ್ನು ಕನ್ನಡ ಲಿಪಿಯಲ್ಲಿ ಬರೆಯಲಾಯಿತು ಮತ್ತು ಸಂಸ್ಕೃತ ವನ್ನು ಕಲಿತವರೆಲ್ಲರೂ ಕನ್ನಡವನ್ನೂ ಕಲಿತರು ಎಂದು ಹೇಳಬಹುದು.[13]

ಜನಗಳಿಗೆ ಕಡೇ ಪಕ್ಷ ನಾಲ್ಕು ಭಾಷೆಗಳು ಗೊತ್ತಿದ್ದವು. ಅವುಗಳನ್ನು ಬರೆಯುವುದೂ ಅವರಿಗೆ ತಿಳಿದಿತ್ತು. ಒಬ್ಬ ಸಂಧಿವಿಗ್ರಹಿಯನ್ನು "ಚತುರ್ಭಾಷಾ ಲಿಖಿತರ ವಿದ್ಯಾಧರ"[14] ಎಂದು ನಾಲ್ಕು ಭಾಷೆಗಳನ್ನು ಬರೆಯುವುದರಲ್ಲಿ ಒಬ್ಬ ವಿದ್ಯಾಧರ ಎಂದು ಹೇಳಲಾಗುತ್ತದೆ. ಕನ್ನಡ, ನಾಗರ, ತಿಳುತಿವುಳಿಗಳು ಆ ನಾಲ್ಕು ಭಾಷೆಗಳು ಎಂದು ಹೇಳಲಾಗಿದೆ. ತಿವುಳವು ಬಹುಶಃ ತಮಿಳಾಗಿದ್ದು ಇನ್ನೊಂದು ಶಾಸನದಲ್ಲಿ ಇದನ್ನು 'ದ್ರಾಮಿಳ' ಎಂದು ಕರೆಯಲಾಗಿದೆ ಮತ್ತು ತಿಳುವು ಬಹುಶಃ ತೆಲಗಾಗಿರಬೇಕು, ಸಂಧಿ ವಿಗ್ರಹಿಯು ಅವಶ್ಯವಾಗಿ ಹೆಚ್ಚು ಭಾಷೆಗಳನ್ನು ತಿಳಿದಿರಬೇಕಾಗಿತ್ತು. ರವಿ ಚಾಮುಪತಿ ಎಂಬ ಒಬ್ಬ ಬ್ರಾಹ್ಮಣನು ಓದುವ ಕಲೆಯಲ್ಲಿ ನಿಷ್ಣಾತನಾಗಿದ್ದ ಮತ್ತು ಹಲವಾರು ಭಾಷೆಗಳನ್ನು ಬಲ್ಲವನಾಗಿದ್ದ. ಅವನ ಈ ಜ್ಞಾನದಿಂದ ಸಂಧಿ ವಿಗ್ರಹಿಯ ಹುದ್ದೆಯನ್ನು ಗಳಿಸಲು ಸಾಧ್ಯವಾಗಿತ್ತು.[15]

## ತಾಂತ್ರಿಕ ಶಿಕ್ಷಣ

ಕೈಗಾರಿಕಾ ವರ್ಗಗಳ ಸುವ್ಯವಸ್ಥಿತವಾದ ಸಂಘಸಂಸ್ಥೆಗಳಿದ್ದವು. ಇವುಗಳು ವೀರ ಪಂಚಾಲರಾಗಿದ್ದು ಅಕ್ಕಸಾಲಿಗರು, ನಾಣ್ಯ ತಯಾರಕರು, ಕಮ್ಮಾರರು, ಕಟ್ಟಡ ನಿರ್ಮಾಪಕರು ಮತ್ತು ಬಡಗಿಗಳಾಗಿದ್ದರು. ವೀರ ಬಣಜಿಗರು, ಶೆಟ್ಟಿಗಟ್ಟರು, ಗವರುಗಳು, ಅಂಕಕಾರರು ಮಾಣಿಗಾರರು,

ತೈಲಿಗರು ಚಿಪ್ಪಿಗ ಗೋಥಲಿಗರು ಅಥವಾ ಸಿಂಪಿಗರು ಇತರೆ ಪ್ರಮುಖ ಕೈಗಾರಿಕಾ ಮತ್ತು ವ್ಯಾಪಾರ ಸಮುದಾಯಗಳಾಗಿದ್ದರು.

ಯುವ ಪೀಳಿಗೆಯ ಸದಸ್ಯರು ತಮ್ಮ ಹಿರಿಯರಿಂದ ತರಬೇತಿಯನ್ನು ಪಡೆದರು. ಶಿಷ್ಯನು ಗುರುವಿನಿಂದ ಪೋಷಿಸಲ್ಪಟ್ಟನು ಮತ್ತು ಗುರುವಿನ ಪಾಳಯದಲ್ಲೇ ವಿದ್ಯಾಭ್ಯಾಸ ಮಾಡುತ್ತಿದ್ದನು. ತನ್ನ ಗುರುವಿನ ಮಾರ್ಗದರ್ಶನದಲ್ಲಿ ಶಿಷ್ಯನು ಕೆಲಸವನ್ನು ನಿರ್ವಹಿಸುತ್ತಿದ್ದನು ಮತ್ತು ತನ್ನ ಗುರುಗಳು ಪಾಲಿಸುತ್ತಿದ್ದ ಹಲವಾರು ವಿಧಾನಗಳನ್ನು ಅವಲೋಕಿಸುವುದರ ಮೂಲಕ ಕಲಿಯುತ್ತಿದ್ದನು.

ಆದರೆ ಕೆಲವು ಕುಟುಂಬಗಳಲ್ಲಿ ಉತ್ತಮ ಕಲಿಕೆಗಾಗಿ ಬೇಕಾದ ನಿಪುಣತೆ ಮತ್ತು ಕೌಶಲ್ಯಗಳನ್ನು ಗೌಪ್ಯವಾಗಿ ಇಡುತ್ತಿದ್ದರು. ಆದರೆ ಇವುಗಳನ್ನು ಆಯ್ದ, ಸಮರ್ಥ, ನಂಬಿಕಸ್ಥ ಕಲಿಕಾರ್ಥಿಗಳು ಮತ್ತು ಶಿಷ್ಯರು ಮಾತ್ರ ಕಲಿಯುತ್ತಿದ್ದರು. ಶಿಷ್ಯನು ಗುರುವಿಗೆ ಮಗನೇ ಆಗಲಿ ಅಥವಾ ಸಂಬಂಧಿಯೇ ಆದರೂ ಗುರುವಿನ ಗುಲಾಮನಾಗಬೇಕಿತ್ತು. ತಾಂತ್ರಿಕ ಶಿಕ್ಷಣ, ತಾಂತ್ರಿಕ ಜ್ಞಾನ ಮತ್ತು ನಿಪುಣತೆಯು ಮುಖ್ಯವಾಗಿ ಪ್ರಾಯೋಗಿಕ ತರಬೇತಿ ಮತ್ತು ಅವಲೋಕನದ ಮೂಲಕ ದೊರಕುತ್ತಿತ್ತು.[16]

## ಸ್ತ್ರೀಯರ ಶಿಕ್ಷಣ

ಯಾವುದೇ ಶಿಕ್ಷಣ ಪದ್ಧತಿಯಾಗಲಿ, ಅದು ಸ್ತ್ರೀ ಶಿಕ್ಷಣದ ಹೊರತಾಗಿ ಪೂರ್ಣವಾಗಲು ಸಾಧ್ಯವಿಲ್ಲ. ಮಹಿಳೆಯರ ಶಿಕ್ಷಣಕ್ಕೆ ಸಂಬಂಧಿಸಿದಂತೆ ಯಾವುದೇ ನೇರವಾದ ಮತ್ತು ನಿರ್ದಿಷ್ಟವಾದ ಪ್ರಸ್ತಾಪಗಳಿರದಿದ್ದರೂ ಹಾಗೂ ಇದರ ಸಂಬಂಧ ಯಾವುದೇ ಸಂಸ್ಥೆಗಳಿರದಿದ್ದರೂ ಮಹಿಳೆಯರು ಅವಿದ್ಯಾವಂತರಾಗಿದ್ದರು ಮತ್ತು ನಿರ್ಲಕ್ಷಿತರಾಗಿದ್ದರು ಎಂದು ಊಹಿಸಲಾಗದು. ಈ ಕಾಲದ ಮಹಿಳೆಯರು ಸುಂದರ ಸಾಧನೆಗಳಲ್ಲಿ ಹಿಂದಿರಲಿಲ್ಲ. ರಾಜಮನೆತನದ ಮಹಿಳೆಯರು, ಸೇನಾಧಿಪತಿಗಳು, ಮಂತ್ರಿಗಳು, ಉನ್ನತ ಅಧಿಕಾರಿಗಳು ಅದೇ ರೀತಿ ಮೇಲ್ವರ್ಗ ಮತ್ತು ಮಧ್ಯಮ ವರ್ಗದ ಮಹಿಳೆಯರು ಓದಲು ಬರೆಯಲು ಬಲ್ಲವರಾಗಿದ್ದರು. ಈ ಕಾಲದುದ್ದಕ್ಕೂ ಇದ್ದ ವ್ಯವಸ್ಥಿತ ಉದಾರ ಶಿಕ್ಷಣವು ಮಹಿಳೆಯರನ್ನು ಯಾವುದೇ ರೀತಿಯಲ್ಲೂ ಅಂದರನ್ನಾಗಿರಲು ಬಿಡಲಿಲ್ಲ.

ಮಹಿಳೆಯರು ಸಂಗೀತ ಮತ್ತು ನೃತ್ಯದಂತಹ ಲಲಿತಕಲೆಗಳಲ್ಲಿನ ಪ್ರವೀಣತೆಗೆ ಹೆಚ್ಚಿನ ಗಮನವನ್ನು ನೀಡಿರಬಹುದೆಂದು ಕಾಣುತ್ತದೆ. ಆರನೇ ಚಾಲುಕ್ಯ ವಿಕ್ರಮಾದಿತ್ಯನ (1076–1126) ರಾಣಿಯಾದ ಕೇತಲಾದೇವಿಯನ್ನು "ಅಭಿನವ ಸರಸ್ವತಿ" ಎಂದು ಕರೆಯಲಾಗಿತ್ತು.[17] ಅವಳು ಸಂಗೀತ ವಿದ್ಯಾಧರಿಯಾಗಿದ್ದು ಹಲವಾರು ಭಾಷೆಗಳಲ್ಲಿನ ಸಾಹಿತ್ಯಿಕ ಸಾಧನೆಗಳಿಗಾಗಿ ಅವಳು ಪ್ರಸಿದ್ಧಿಯನ್ನು ಹೊಂದಿದ್ದಳು.

ರವೀದೇವ ದಂಡಾಧಿಪನ ಹೆಂಡತಿಯಾದ ರೆಬ್ಬಲಾದೇವಿಯು "ಪ್ರತಿಭಾ ಸರಸ್ವತಿ" ಎಂದು ಹೆಸರಾಗಿದ್ದಳು. ಕದಂಬ ಸಾಮಂತನಾದ ದಯಸಿಂಹನ ರಾಣಿಯಾದ ಮೋಚಲಾದೇವಿಯು ಒಬ್ಬ ಉತ್ತಮ ನುರಿತ ಸಂಭಾಷಣಕಾರಳಾಗಿದ್ದಳು.[18] ಭವ್ಯ ರಾಜನ ಪತ್ನಿಯಾದ ಗಂಗಾದೇವಿಯು ವಿದ್ಯೆಯಲ್ಲಿ ಸರಸ್ವತಿಗೆ ಸಮಾನಳು ಎಂದು ಹೇಳಲಾಗುತ್ತದೆ. ಹೊಯ್ಸಳ ವಿಷ್ಣುವರ್ಧನನ ರಾಣಿಯಾದ ಶಾಂತಲಾದೇವಿಯು ಸಂಗೀತ ಮತ್ತು ನೃತ್ಯದಲ್ಲಿ ಉನ್ನತ ಸಾಧನೆ ಮಾಡಿದ ಹೆಸರುವಾಸಿಯಾದ ಮಹಿಳೆಯಾಗಿದ್ದಳು. ಸ್ತ್ರೀಯರಿಗಾಗಿ ಲಲಿತ ಕಲೆಗಳಲ್ಲಿ ಉತ್ತಮ ಶಿಕ್ಷಣ ಮತ್ತು ತರಬೇತಿಯು ಅಸ್ಥಿತ್ವದಲ್ಲಿತ್ತು. ಇದನ್ನು ಪ್ರತೀ ಪೀಳಿಗೆಯೂ ಅನುಸರಿಸುತ್ತಿತ್ತು. ಉನ್ನತ ಸಮಾಜದ ಮಹಿಳೆಯರ ಜೊತೆಗೆ ದೊಡ್ಡ ನಗರಗಳಲ್ಲಿ ವೇಶ್ಯೆಯರ ಪ್ರಪಂಚ ಸಹ ಇತ್ತು. ಇವರು ಸಂಗೀತ ಮತ್ತು ನೃತ್ಯ ಲಲಿತಕಲೆಗಳ ಪ್ರಥಮ ಪಾಲಕರಾಗಿದ್ದರು.

## ಪರೀಕ್ಷೆಗಳು

ಪ್ರತೀ ಶಿಕ್ಷಕನಡಿಯಲ್ಲಿ ನಿಯಮಿತ ವಿದ್ಯಾರ್ಥಿಗಳು ಮಾತ್ರ ಇರುತ್ತಿದ್ದರು. ಇದರಿಂದ ಗುರುವಿಗೆ ಪ್ರತೀ ಶಿಷ್ಯನ ಮೇಲೆ ಜ್ಞಾನವನ್ನು ಗಳಿಸುವ ಉದ್ದೇಶದ ಜೊತೆಗೆ ಶಿಷ್ಯನ ಒಟ್ಟಾರೆ ವ್ಯಕ್ತಿ ವಿಕಸನಕ್ಕೆ ಹೆಚ್ಚಿನ ಗಮನವನ್ನು ನೀಡಲು ಸಾಧ್ಯವಾಗಿತ್ತು. ಶಿಷ್ಯರಿಂದ ಯಾವುದೇ ರೀತಿಯಾದ ಅಗೌರವದ ಬಗ್ಗೆ ಯಾವುದೇ ಶಾಸನಗಳು ಮಾಹಿತಿಯನ್ನು ನೀಡುವುದಿಲ್ಲ. ಹಿಂದಿನ ಪಾಠಗಳ ಪರಿಪೂರ್ಣ ಗ್ರಹಿಕೆಯ ನಂತರವೇ ಮುಂದಿನ ಪಾಠಗಳಿಗೆ ಶಿಷ್ಯರನ್ನು ಅವಕಾಶ ಮಾಡಿಕೊಡಲಾಗುತ್ತಿತ್ತು. ಹೆಚ್ಚು ಮುಂದುವರೆದ ವಿದ್ಯಾರ್ಥಿಗಳು ಶಾಸ್ತ್ರಗಳಲ್ಲಿ ಅಥವಾ ಅವರು ಕಲಿಯುತ್ತಿದ್ದ ಜ್ಞಾನದ ಭಾಗಗಳ ಚರ್ಚೆಗಳಲ್ಲಿ ಪಾಲ್ಗೊಳ್ಳಬೇಕಾಗಿತ್ತು. ವಿದ್ಯಾರ್ಥಿಯು ಸಂವರ್ತನವನ್ನು ಹಮ್ಮಿಕೊಳ್ಳಲಾಗುತ್ತಿತ್ತು. ಶಾದಂಗಿ ತನ್ನ ಶಿಕ್ಷಣವನ್ನು ಮುಗಿಸಿದ ನಂತರ ಅವನನ್ನು ಸ್ನಾತಕ ಎಂದು ಕರೆಯಲಾಗುತ್ತಿತ್ತು. ಪದವಿಯು ಮುಗಿದ ನಂತರ ಘಟಿಕೋತ್ಸವ ಅಥವಾ ಘಟಿಕಾಸಾಹಸ್,

ಸಾಮವೇದಿ, ಅವಧಾನಿ, ಗಣಪತಿ, ಸರ್ವಜ್ಞ, ಭಟ್ಟೋಪಾಧ್ಯಾಯ ಮತ್ತು ಇದೇ ರೀತಿಯ ಸಮನಾದ ಶಬ್ದಾವಳಿಗಳು ಪದವಿಗಳಾಗಿದ್ದು ವಿದ್ಯಾರ್ಥಿಗಳಿಗೆ ಅವರು ಮುಗಿಸಿದ ವಿಷಯಕ್ಕನು ಗುಣವಾಗಿ ನೀಡಲಾಗುತ್ತಿತ್ತು.

ಸಾಮಾನ್ಯವಾಗಿ ಶಿಕ್ಷಣವು ಸಮಾಜದ ಮೇಲೆ ತನ್ನ ಫಲಕಾರಿಯಾದ ಪರಿಣಾಮಗಳನ್ನು ಬೀರಿದೆ. ಜನಗಳು ವಿದ್ಯಾಕಾಂಕ್ಷಿಗಳಾಗಿದ್ದರು. ಅವರಿಗೆ ಕಲಿಯುವ ಹಂಬಲವು ಉತ್ಕಟವಾಗಿತ್ತು. ಬೌದ್ಧಿಕ ಹಾಗೂ ನೈತಿಕ ಪ್ರಸಿದ್ಧಿಗೆ ಹೆಚ್ಚಿನ ಗೌರವವನ್ನು ನೀಡಿದರು. ಮಹಾಕಾವ್ಯಗಳು, ಪುರಾಣ ಗಳು, ಲಾವಣಿ ಗೀತೆಗಳು, ಉಪನ್ಯಾಸಗಳು ಮತ್ತು ಕಥೆಗಳ ವಾಚನವು ಸಾಂಸ್ಕೃತಿಕ ನಿಯೋಗಿ ಯಂತೆ ಉನ್ನತಿ ನೈತಿಕ ಮತ್ತು ಆಧ್ಯಾತ್ಮಿಕ ಆದರ್ಶಗಳನ್ನು ಹುಟ್ಟುಹಾಕಿತು. ಈ ಸಾಂಸ್ಕೃತಿಕ ನಿಯೋಗಗಳು ಶಿಕ್ಷಣ ಮತ್ತು ಜನರ ಜ್ಞಾನೋದಯವನ್ನುಂಟು ಮಾಡಿದವು. ಆದ್ದರಿಂದ ಜನಗಳು ನ್ಯಾಯನಿಷ್ಟರೂ, ನಂಬಿಕಸ್ಥರೂ, ಶೀಲವಂತರೂ, ಹೃದಯವಂತರೂ ಮತ್ತು ಉದಾರಿಗಳೂ ಆಗಿದ್ದರು.

## ವೀರಸೋಮೇಶ್ವರನ ಕಾಲದಲ್ಲಿ ಸಾಹಿತ್ಯ

ವೀರಸೋಮೇಶ್ವರನ ಕಾಲದಲ್ಲಿ ಸಾಹಿತ್ಯವು ಶ್ರೀಮಂತಗೊಂಡಿತೆಂದು ಹೇಳಬಹುದು. ಪ್ರತಿಷ್ಠಿತ ಜೈನ ಕವಿಗಳ ಒಂದು ಗುಂಪು ಈತನ ಕಾಲದಲ್ಲಿ ಇತ್ತೆಂದು ತಿಳಿದುಬರುತ್ತದೆ. ಇವರು ಒಬ್ಬರಿಗೊಬ್ಬರು ಬಹಳ ನಿಕಟ ಸಂಬಂಧವನ್ನು ಹೊಂದಿದ್ದರೆಂದು ತಿಳಿಯುತ್ತದೆ. ಅವರಲ್ಲಿ ಸುಮಂತನ ಮಗನಾದ ಜನ್ನಾ, ಮಲ್ಲಿಕಾರ್ಜುನ ಮತ್ತು ಅವನ ಮಗನಾದ ಕೇಶಿರಾಜ ಪ್ರಮುಖರು ಕ್ರಿ.ಶ. 13ನೇ ಶತಮಾನದಲ್ಲಿ ಇವರ ಸಮಕಾಲೀನರಾಗಿ ಇದ್ದ ಇತರ ಪ್ರಮುಖ ಕವಿಗಳೆಂದರೆ, ರಾಘವಾಂಕ, ಕೆರೆಯ ಪದ್ಮರಸ, ಪಾರ್ಶ್ವಪಂಡಿತ, ಎರಡನೇ ಗುಣವರ್ಮ, ಅಂಡಯ್ಯ ಮೊದಲಾದವರು. ಈ ಕಾಲದಲ್ಲಿ ದೊರೆತಂತಹ ಪ್ರೋತ್ಸಾಹ, ಉತ್ತೇಜನವು ಮುಂದಿನ ವಿಜಯ ನಗರದ ಕಾಲಕ್ಕೂ ಮುಂದುವರೆದಿರುವುದನ್ನು ಕಾಣಬಹುದು. ಇದು ಶ್ರೇಷ್ಟ ಸಾಹಿತ್ಯದ ಪ್ರೇರಣೆ ಯನ್ನು ಹುಟ್ಟು ಹಾಕಿತೆಂದು ಹೇಳಿದರೆ ತಪ್ಪಾಗಲಾರದು.[19]

### 1) ಅಂಡಯ್ಯ (1235)

ಈ ಕಾಲದ ಪ್ರಮುಖ ಜೈನ ಕವಿಯಾದ ಅಂಡಯ್ಯನು ಚಂಪೂಕೃತಿಯಾದ 'ಕಬ್ಬಿಗರ ವಿಜಯ'ವನ್ನು ರಚಿಸಿದ್ದಾನೆ. ಅದೇ ಅಲ್ಲದೇ 'ಮಧನ ವಿಜಯ' 'ಕವನ ಗೆಲ್ಲ' ಮತ್ತು 'ಸೊಬ್ಬಿಗರ

ಸುಗ್ಗಿ' ಅಥವಾ 'ಬೆಳೆಯ ಸೊಬೆಗು' ಗಳನ್ನು ರಚಿಸಿದ್ದಾನೆ. ಬೆಳೆಯ ಸೊಬಗಿನ ಬಗ್ಗೆ 350 ಚರಣಗಳನ್ನು ರಚಿಸಿದ್ದಾನೆ. ಈ ಪದ್ಯದಲ್ಲಿ ಈತನು ದೇವರ ಪ್ರೀತಿಯನ್ನು ವಿಜಯದ ಸಂಕೇತವಾಗಿ ಬಿಂಬಿಸಿದ್ದಾನೆ. ಈ ಕೃತಿಯು 'ಮನ್ಮಥನ ವಿಜಯ'ವೆಂಬ ವಿಷಯವನ್ನು ಒಳಗೊಂಡಿದ್ದರೂ ಕೂಡ ಇದು ಕವಿರ ಕಲ್ಪನೆಯಾಗಿದೆ. ಈ ಕೃತಿಯ ಸಾರಾಂಶ ಇಂತಿದೆ. ಒಮ್ಮೆ ಶಿವಚಂದ್ರನನ್ನು ಬಂಧಿಸುತ್ತಾನೆ. ಇದರಿಂದ ಕೋಪಗೊಂಡ 'ಮನ್ಮಥ' ತನ್ನ ಬಿಲ್ಲಿನಿಂದ ಶಿವನ ಮೇಲೆ ಆಕ್ರಮಣ ಮಾಡುತ್ತಾನೆ. ಶಿವನಿಂದ ಶಾಪಕ್ಕೊಳಗಾದ ಮನ್ಮಥ ತಾನು ಮದುವೆಯಾಗಲಿರುವ ವಧುವಿನಿಂದ ದೂರವಾಗುತ್ತಾನೆ. ನಂತರ ಮನ್ಮಥ ಶಿವನ ಶಾಪದಿಂದ ವಿಮುಕ್ತನಾಗಿ ಮತ್ತೆ ತನ್ನ ವಧುವನ್ನು ಸೇರಿಕೊಳ್ಳುವ ದಾರಿ ಕಂಡುಕೊಳ್ಳುತ್ತಾನೆ ಎಂದು ಕವಿ ಇಲ್ಲಿ ವರ್ಣಿಸಿದ್ದಾನೆ. ಈ ಕೃತಿಯಲ್ಲಿ ಪ್ರಾರಂಭದಿಂದ ಕೊನೆಯವರೆಗೂ ಎಲ್ಲಿಯೂ ಸಂಸ್ಕೃತ ಶಬ್ಧದ ಬಳಕೆಯಾಗದೇ ಇರುವುದು ಇದರ ಹೆಗ್ಗಳಿಕೆಯಾಗಿದೆ. ಆದರೂ ಇಲ್ಲಿ 'ತದ್ಭವ' ಶಬ್ದಗಳನ್ನು ವಿಪುಲವಾಗಿ ಬಳಸಲಾಗಿದೆ. ಇಂತಹ ಕೃತಿ ಮತ್ತೊಂದು ಕನ್ನಡ ಸಾಹಿತ್ಯದಲ್ಲಿ ಇಲ್ಲವೆನ್ನಬಹುದು. ಈ ಕೃತಿಯ ಶೈಲಿ ಅನುಪಮ ಹಾಗೂ ಕನ್ನಡ ಸಾಹಿತ್ಯದಲ್ಲಿ ಇಲ್ಲವೆನ್ನಬಹುದು. ಈ ಕೃತಿಯ ಶೈಲಿ ಅನುಪಮ ಹಾಗೂ ಅದ್ವಿತೀಯ. ಇದು ಕವಿಯ ಸಾಮರ್ಥ್ಯಕ್ಕೆ ಕನ್ನಡಿಯಂತಿದೆಯೆನ್ನಬಹುದು.

### 2) 2ನೇ ಗುಣವರ್ಮ (1235)

ಈತ ಪ್ರಮುಖ ಜೈನ ಕವಿಗಳಲ್ಲಿ ಒಬ್ಬನಾಗಿದ್ದಾನೆ. ಸವದತ್ತಿಯ ರಟ್ಟರ ಆಸ್ಥಾನದಲ್ಲಿದ್ದ ಇವನು 'ಕವಿಜನ್ನ'ನ ಸಮಕಾಲೀನ. ಇವನ ಕೃತಿಯಾದ 'ಪುಷ್ಪದಂತ ಪುರಾಣ'ವು ಜೈನರ 9ನೇ ತೀರ್ಥಂಕರನ ಜೀವನ ಮತ್ತು ಸಾಧನೆ ಕುರಿತು ವಿವರಿಸುತ್ತದೆ. ಈ ಕೃತಿಯನ್ನು 'ಚಂಪೂ' ಶೈಲಿಯಲ್ಲಿ ರಚನೆ ಮಾಡಲಾಗಿದೆ. ಇದೊಂದು ಹೊಸ ಬಗೆಯ ಕಾವ್ಯ ಎಂದು ಈತನು ಹೊಗಳಿಕೊಂಡಿದ್ದಾನೆ. ಒಂದು ಸಣ್ಣಕತೆಯಾದ ಇದು 14 ಅಧ್ಯಾಯಗಳನ್ನೊಳಗೊಂಡ ಮಹಾಕಾವ್ಯವಾಗಿದೆ. ಇದು ಕವಿಯ ಪಾಂಡಿತ್ಯ ಮತ್ತು ಅದ್ವಿತೀಯವಾದ ಊಹೆಗಳನ್ನು ಬಿಂಬಿಸುತ್ತದೆ. ಈ ಕೃತಿಯು ಜೈನರಲ್ಲದವರಿಂದಲೂ ಪ್ರಶಂಸನೆಗೊಳಗಾಗಿದೆ. ಈತನ ಇನ್ನೊಂದು ಕೃತಿಯಾದ 'ಚಂದ್ರನಾಥ ಅಸ್ತಕಾ'ವು ತ್ರಿಭುವನ ಜಿನಾಲಯದ 'ಚಂದ್ರನಾಥ'ನನ್ನು ಕೊಂಡಾಡಿ ಬರೆದ ಕೃತಿಯಾಗಿದೆ.

### 3) ಕಮಲಾಭವ

ಇವನು ಪ್ರಮುಖ ಜೈನ ಕವಿಗಳಲ್ಲಿ ಒಬ್ಬ. ಇವನು ಅನೇಕ ಪುರುಷ್ಕಾರ ಮತ್ತು ಪ್ರಶಂಸೆಗೆ ಒಳಗಾಗಿದ್ದಾನೆ. 'ಶಾಂತಿನಾಥಪುರಾಣ'ವು ಈತನ ಪ್ರಮುಖ ಕೃತಿಯಾಗಿದೆ. ಈ ಕೃತಿ ಜೈನರ 16ನೇ

ತೀರ್ಥಂಕರನ ಜೀವನವನ್ನು ಕುರಿತು ವಿವರಿಸುತ್ತದೆ. ಇದು 16 ಅಧ್ಯಾಯಗಳನ್ನು ಒಳಗೊಂಡ ಚಂಪೂಕಾವ್ಯವಾಗಿವೆ. ಜೈನ ಪುರಾಣಗಳು ಮತ್ತು ಮಹಾಕಾವ್ಯಗಳು ಹೊಂದಿರಬೇಕಾದ ಎಲ್ಲಾ ಲಕ್ಷಣಗಳನ್ನು ಈ ಕೃತಿ ಹೊಂದಿದೆ. 'ಕಮಲಾಭವನ' ಶಾಬ್ದಿಕ ವರ್ಣನೆಗಳು ತುಂಬಾ ಸರಳವು ಮತ್ತು ಮನಮುಟ್ಟುವಂಥವುಗಳಾಗಿವೆ. ಈ ಕೃತಿ ಮಲ್ಲಿನ ಕವಿಯ ಉನ್ನತವಾದ ಕಲ್ಪನೆಗಳು ಸೊಗಸಾದ ಪದ ಸಮುಚ್ಛಯಗಳು ಕವಿ ಸಾಮರ್ಥ್ಯಕ್ಕೆ ಕೈಗನ್ನಡಿಯಂತಿವೆ. ವಿಷಯವನ್ನು ಕಲಾತ್ಮಕ ವಾಗಿ ವಿವರಿಸುವ ಕೃತಿಗಳಲ್ಲಿಯೇ ಈ ಕೃತಿ ಅದ್ವಿತೀಯವಾಗಿದೆ.

**4) ಮಲ್ಲಿಕಾರ್ಜುನ**

ಸೋಮೇಶ್ವರನ ಕಾಲದಲ್ಲಿದ್ದ ಕವಿ ಮಲ್ಲಿಕಾರ್ಜುನನು ಇದ್ದನೆಂಬುವುದಕ್ಕೆ ಕ್ರಿ.ಶ. 1252–53ರ ನಡುವೆ ತನ್ನ ಕೃತಿಯಾದ 'ಸೂಕ್ತಿ ಸುಧಾರ್ಣವ'ವನ್ನು ಸೋಮೇಶ್ವರನು ಕಣ್ಣಾನೂರಿನ ಅಜ್ಞಾತ ವಾಸದಲ್ಲಿದ್ದಾಗ ರಾಜನ ಎದುರಿಗೆ ವಾಚನ ಮಾಡುವುದರ ಮೂಲಕ ರಂಜಿಸಿದ್ದರಿಂದ ಈತನು ಸೋಮೇಶ್ವರನ ಕಾಲದಲ್ಲಿದ್ದಕ್ಕೆ ಸಾಕ್ಷಿಯಾಗಿದೆ. ಈ ಕುತೂಹಲಕಾರಿಯಾದ ಕವನ ಗುಚ್ಛವು ಕನ್ನಡ ಸಾಹಿತ್ಯ ಇತಿಹಾಸದಲ್ಲಿ ವಿಶಿಷ್ಟ ಸ್ಥಾನವನ್ನು ಹೊಂದಿದೆ. ಹೊಯ್ಸಳರ ರಾಜತ್ವದ ಕಲ್ಪನೆಯನ್ನು ಅರ್ಥಮಾಡಿಕೊಳ್ಳಲು ಈ ಕೃತಿಯು ಬಹಳ ಸಮರ್ಪಕವಾಗಿದೆ. ಇಲ್ಲಿನ ಪ್ರತಿಯೊಂದು ಅಧ್ಯಾಯವೂ ರಾಜನನ್ನು ಉಲ್ಲೇಖಿಸುತ್ತದೆ. ಇದರಲ್ಲಿ ಬರುವ 'ಮಂತ್ರವರ್ಣಂ' ಎಂಬ ಅಧ್ಯಾಯವು ಆಡಳಿತ ವಿಷಯದ ಬಗ್ಗೆ ವಿವರಣೆ ನೀಡುತ್ತದೆ. ಇಲ್ಲಿನ ಹೆಚ್ಚು ಅಧ್ಯಾಯಗಳಲ್ಲಿ ಸೋಮೇಶ್ವರ ಮತ್ತು ಅವನ ತಂದೆ ನರಸಿಂಹ ಅಥವಾ ಅವನ ಅಜ್ಜ ಎರಡನೇ ಬಲ್ಲಾಳನ ಒಂದಲ್ಲ ಒಂದು ವಿಶಿಷ್ಟ ಗುಣವನ್ನು ಉದ್ದೇಶಿಸುವ ಹಲವಾರು ಉಲ್ಲೇಖಗಳಿವೆ.[20] ಇಡೀ ಕೃತಿಯನ್ನು ಒಂದು ಪರಿಷ್ಕೃತ ಆಶೀರ್ವಾದದ ರೀತಿಯಲ್ಲಿ ಶೃಂಗರಿಸಲಾಗಿದೆ. ಕನ್ನಡದ ಶ್ರೇಷ್ಟಕೃತಿಗಳಿಂದ ಆಯ್ದ 'ಮುತ್ತಿನ ಸಾಲುಗಳ' ಸಂಗ್ರಹವೆಂದು ಉದ್ದೇಶಿಸಲ್ಪಟ್ಟರೂ ಇದನ್ನು ಒಂದೇ ಚೌಕಟ್ಟಿನಲ್ಲಿ ಸಂಪಾದಿಸಿ ಹೆಣೆದಿರುವುದು ಅದ್ಭುತವಾಗಿದೆ.

ಇದರ ಉದ್ದೇಶವು ಶೋತೃವಿನ ಮನಸ್ಸಿನಿಂದ ದುಃಖ ಮತ್ತು ವಿಫಲತೆ ಭಾವನೆಯನ್ನು ಪ್ರತ್ಯೇಕಿಸುವುದು ಮತ್ತು ರಾಜನ ಜೀವನದ ಶ್ರೇಷ್ಟ ಘಟನೆಗಳು ಮತ್ತು ಅವುಗಳ ಪ್ರಶಂಸನೀಯ ಸಂತೋಷವನ್ನು ಶ್ರೀಮಂತವಾದ ಮತ್ತು ಯಶಸ್ವಿಯಾದ ರಚನೆಯಲ್ಲಿ ವರ್ಣಿಸಬೇಕೆಂಬುದಾಗಿತ್ತು. ಇದರಿಂದಾಗಿ ಹಲವಾರು ಉದ್ದೇಶಗಳು ನೆರವೇರಿದವು. ಇದು ಇದರ ಬರಹಗಾರನು ಕನ್ನಡನಾಡಿನ

ಸಾಹಿತ್ಯಿಕ ಸಾಧನೆಗಳ ಮೇಲೆ ಹೊಂದಿದ್ದ ಅಪಾರ ಸಲುಗೆಯನ್ನು ಪ್ರದರ್ಶಿಸಿತು. ನಿಸ್ಸಂಶಯವಾಗಿ ಅವನಿಗೆ ಗಣನೀಯ ಖ್ಯಾತಿಯನ್ನು ತಂದುಕೊಟ್ಟಿತು. ಇದು ಹೊಯ್ಸಳೇಶ್ವರನಿಗೆ ಎಲ್ಲಾ ರೀತಿ ಯಲ್ಲೂ ರುಚಿಸುವ ವೇಷಭೂಷಣದಲ್ಲಿ ಆಗಿನ ದೇಶೀಯ ಬರಹಗಾರ ಹಿಂದಿನ ಅರ್ಧ ಶತಮಾನ ದಿಂದಲೂ ಹೊಯ್ಸಳರ ಆಶ್ರಯದಲ್ಲಿದ್ದವರು ಅಥವಾ ಪುರಾತನ ಬರಹಗಾರರ ರಸಭರಿತವಾದ ಬರವಣಿಗೆಯನ್ನು ಅರ್ಪಿಸಿತು. ಇದು ಸೋಮೇಶ್ವರನಿಗೆ ಅವನು ಅಷ್ಟೇನು ಹೆಚ್ಚಿನ ಜ್ಞಾನವನ್ನು ಹೊಂದದ ಕರ್ನಾಟಕದ ಸಂಸ್ಕೃತಿಯನ್ನು ಬೋಧಿಸಿತು ಮತ್ತು ದೇಶಾಭಿಮಾನದ ಹುರುಪು ಕವಿಗಳೂ ಮತ್ತು ಸಾಮಂತರ ತುಟಿಯ ಮೇಲೆ ಇನ್ನೂ ಇತ್ತು ಎಂಬುದನ್ನು ಇಡೀ ಆಸ್ಥಾನಕ್ಕೆ ಮನದಟ್ಟು ಮಾಡಿತು. ಈ ಕೃತಿಯಿಂದ ಸೋಮೇಶ್ವರನು ಬಹಳ ಸಂತೃಪ್ತನಾದನೆಂದು ನಾವು ತಿಳಿಯುತ್ತೇವೆ ಮತ್ತು ಇದಕ್ಕೆ ಸಮನಾಗಿ ಅದನ್ನು ಸಮರ್ಪಣೆಯಾಗಿ ಸ್ವೀಕರಿಸಿದನು. ಇದರ ಪ್ರಶಂಸೆ ಮತ್ತು ಅಭಿನಂದನೆಯು ಹೊಯ್ಸಳ ಸಾಮ್ರಾಜ್ಯದ ಪ್ರಸ್ತುತ ಸ್ಥಿತಿ ಅದರ ಭವಿಷ್ಯದ ನಂಬಲರ್ಹ ಆಶೋತ್ತರಗಳೆರಡರ ದೃಷ್ಟಿಯಿಂದಲೂ ಸಾಹಿತ್ಯ ವಿಡಂಬನೆಯ ರಾಜನನ್ನು ಉತ್ತೇಜಿಸು ವಲ್ಲಿ ವಹಿಸಿದ ಪಾತ್ರವನ್ನು ನಾವು ಅಲ್ಲಗೆಳೆಯುವಂತಿಲ್ಲ.[21]

## 5) ಕೇಶೀರಾಜ (1260)

ಮಲ್ಲಿಕಾರ್ಜುನನ ಮಗ ಮತ್ತು ಅವನ ತಂದೆಯ ಕಡೆಯಿಂದ ಸುಮನೋಬಾಣ ಅಥವಾ ಶಂಕರನ ಮೊಮ್ಮಗ ಹಾಗೂ ಜನ್ನನ ಸಹೋದರಿಯ ಮಗನಾದ ಇವನು ಒಂದು ಸಾಹಿತ್ಯ ಕುಟುಂಬದಿಂದ ಬಂದವನಾಗಿದ್ದನು. ಈತನು ಹೊಯ್ಸಳ ವೀರಸೋಮೇಶ್ವರನ ಕಾಲದಲ್ಲಿ ಜೀವಿಸಿದ್ದನು. ಈತನು ಕನ್ನಡದ ಸುಪ್ರಸಿದ್ಧ ಶ್ರೇಷ್ಟ ವ್ಯಾಕರಣ ಗ್ರಂಥವಾದ "ಶಬ್ಧಮಣಿದರ್ಪಣ"ದ ಕರ್ತೃವಾಗಿದ್ದಾನೆ. ಈತನ ಇತರೆ ಕೃತಿಗಳಾದ 'ಸುಭದ್ರಹರಣ', 'ಪ್ರಭೋದ ಚರಿತ್ರೆ', 'ಕಿರಾತ', 'ಶ್ರಿಚಕಮಾಲೆ' ಮತ್ತು 'ಚೋರಪಾಲಕ ಚರಿತೆ' ಇವುಗಳು ಈಗ ನಮಗೆ ಲಭ್ಯವಿಲ್ಲ. ಅವನ ಮೊದಲ ವ್ಯಾಕರಣ ಗ್ರಂಥವು ನಾಗವರ್ಮನ ಶಬ್ಧ ಸ್ಮೃತಿಯನ್ನು ಆದರಿಸಿದಾಗ್ಯೂ ಅದರ ವಸ್ತು ವಿಷಯವನ್ನು ಬಹಳ ವಿಸ್ಮೃತವಾಗಿ, ವ್ಯವಸ್ಥಿತವಾಗಿ, ಸಂಪೂರ್ಣವಾಗಿ ಮತ್ತು ಅದರ ಮೂಲ ವಿಧಾನದಲ್ಲಿ ಬರೆಯಲಾಗಿದೆ. ಎಲ್ಲಾ ಸೂತ್ರಗಳನ್ನು ತುಂಬಾ ನಾಜೂಕಾದ, ಅಂದವಾದ ಕಂದ ಛಂದಸ್ಸಿನಲ್ಲಿ ಬರೆಯಲಾಗಿದೆ. ಹಾಗೂ ಇದರೊಂದಿಗೆ ಲೇಖಕನೇ ಸ್ವತಃ ಬರೆದಿರುವ ವೃತ್ತಗಳಿವೆ. ಈ ಕಾಲದ ಹೊತ್ತಿಗೆ ಹಳೇಗನ್ನಡವು ನಶಿಸುತ್ತಿದ್ದು ನಡುಗನ್ನಡದ ಪ್ರವಾಹಕ್ಕೆ ದಾರಿ ಮಾಡಿ ಕೊಡುತ್ತಿತ್ತು. ಆ ವೇಳೆಯಲ್ಲಿ ಕಡುಗನ್ನಡವು ಸುಭದ್ರ ನೆಲೆಯನ್ನೂರುವ ಹುನ್ನಾರವನ್ನು ಮಾಡಿತ್ತು.

ಅಸಮರ್ಪಕ ಎಂದು ಪರಿಗಣಿಸಲ್ಪಟ್ಟದ್ದ ಪದಗಳು ಕ್ರಮೇಣ ಪ್ರಸ್ತುತದ ಬಳಕೆಯಲ್ಲಿ ನುಸುಳಿದವು. ಬಹುಶಃ ಕೇಶಿರಾಜನು ಇವುಗಳಿಂದ ನೊಂದು ಈ ರೀತಿಯ ಬಳಕೆಯನ್ನು ನಿಯಂತ್ರಿಸಲು ಪ್ರಯತ್ನಿಸಿದ್ದು ಕಂಡು ಬರುತ್ತದೆ.[22] 'ಶಬ್ದಮಣಿದರ್ಪಣ' ವಿದ್ಯಾದೇವತೆಯ ಎರಡನೇ ವೀಣೆ ಇದನ್ನು ಓದುವ ವ್ಯಕ್ತಿಯು ಮೋಕ್ಷವನ್ನು ಗಳಿಸಬಹುದು ಎಂದು ಕೇಶಿರಾಜ ಹೇಳುತ್ತಾನೆ. ಈತನ ಗ್ರಂಥವು ಕನ್ನಡ ವ್ಯಾಕರಣದ ಮೇಲೆ ಇರುವ ಒಂದೇ ಒಂದು ಪರಿಷ್ಕೃತ ಗ್ರಂಥವಾಗಿರುವುದು ಇದರ ಹೆಗ್ಗಳಿಕೆಯಾಗಿದೆ. ಬರ್ನೆಲ್ ಎಂಬ ಜೈನ ಬರಹಗಾರ ಈ ವ್ಯಾಕರಣ ಗ್ರಂಥ ಕುರಿತು ಈ ರೀತಿ ಹೇಳುತ್ತಾನೆ. ಶಬ್ದಮಣಿದರ್ಪಣದ ಶ್ರೇಷ್ಟ ಮತ್ತು ನಿಜವಾದ ಯೋಗ್ಯತೆಯೇನೆಂದರೆ ಅದು ತನ್ನ ನಿಯಮಗಳನ್ನು ಸ್ವತಂತ್ರ ಸಂಶೋಧನೆ ಹಾಗೂ ಪ್ರಸಿದ್ಧ ಬರಹಗಾರರ ಬಳಕೆಯನ್ನು ಆಧರಿಸಿದೆ. ಈ ರೀತಿಯಾಗಿ ಈ ಗ್ರಂಥ ತಮಿಳು ಮತ್ತು ತೆಲುಗು ಗ್ರಂಥಗಳ ನಿಷ್ಪ್ರಯೋಜಕ ಪಾಂಡಿತ್ಯದಿಂದ ಬಲು ಮುಂದಿದೆ" ಎಂದಿದ್ದಾರೆ.[23]

ಲೂಯಿಸ್ ರೈಸ್‌ರವರು ಹೇಳುವಂತೆ "ಈ ಹೊಗಳಿಕೆಯು ಇತರ ಕನ್ನಡ ವ್ಯಾಕರಣ ಗಳಿಗೂ ಸಮನಾಗಿ ಅನ್ವಯವಾಗುತ್ತದೆ. ಬರ್ನೆಲ್‌ನು ಇದನ್ನು 1875ರಲ್ಲಿ ಬರೆದಾಗ ಬಹಿರಂಗ ಗೊಳಿಸಿರಲಿಲ್ಲ. ಉಲ್ಲೇಖಗಳು ಸಂಪತ್ತನ್ನು ಹಾಗೂ ಹಿಂದಿನ ಬರಹಗಾರರ ದೃಷ್ಟಾಂತಗಳನ್ನು ಬಿಟ್ಟರೆ ಈ ವ್ಯಾಕರಣ ಬರಹಗಳೂ ಯಾವುದೇ ಆಕರ್ಷಣೀಯವಾದ ಸತ್ವವನ್ನು ಹೊಂದಿಲ್ಲ ಮತ್ತು ಇದು ಅವರಿಗೆ ಉನ್ನತ ವೈಜ್ಞಾನಿಕ ಅದೇ ರೀತಿಯಲ್ಲಿ ಚಾರಿತ್ರಿಕ ಮೌಲ್ಯವನ್ನು ಒದಗಿಸಿಕೊಡುತ್ತದೆ" ಎಂದಿದ್ದಾರೆ.[24] ಏನೇ ಆಗಲೀ ಕ್ರಿ.ಶ. 13ನೇ ಶತಮಾನದಲ್ಲಿ ರಚಿತವಾದ ಈ ಗ್ರಂಥವು ಇಂದಿಗೂ ವ್ಯಾಕರಣ ಗ್ರಂಥದಲ್ಲಿ ಏಕೈಕವಾಗಿದ್ದು, ಪ್ರಥಮ ಹಾಗೂ ಕಡೆಯ ವ್ಯಾಕರಣ ಗ್ರಂಥವೆಂದರೆ ತಪ್ಪಾಗಲಾರದು.

### 6) ಮಹಾಬಲಕವಿ

ಈತನು ಈ ಕಾಲದ ಮತ್ತೊಬ್ಬ ಜೈನ ಕವಿಯಾಗಿದ್ದು ಈತನು ತನ್ನ ಚಂಪೂ ಕೃತಿಯಾದ 'ನೇಮಿನಾಥ ಪುರಾಣ'ದಿಂದ ಜೈನ ಪುರಾಣದ ಸಾಹಿತ್ಯವನ್ನು ಶ್ರೀಮಂತಗೊಳಿಸಿದನು. ಇದು 22ನೇ ತೀರ್ಥಂಕರನ ಜೀವನ ವೃತ್ತಾಂತವನ್ನು ವಿವರಿಸುತ್ತದೆ. ಇದು ಹರಿವಂಶ ಮತ್ತು ಕುರುವಂಶದ ಕಥೆಯನ್ನು ನಿರೂಪಿಸುತ್ತದೆ.

## ಟಿಪ್ಪಣಿಗಳು ಮತ್ತು ಉಲ್ಲೇಖಗಳು


1) Q.J.M.S. Vol. 33. p.51
2) E.C. Vol. VI. Cm.44
3) E.C. Vol. VIII, Honnali 90
4) E.C. Vol. III. Tn.27
5) E.C.9 – Bn 6 – 1253 A.D
6) M.A.R. 1914
7) E.C. Vol. XV. Tn.26: M.A.R. 1912 p.44
8) E.C. 5 – BL 17. 1136 A,.D
9) S.I.E. No.65 – 1079
10) E.C.9-Bn-6-1253
11) E.C. 8 – SB 42 – 1120
12) E.C. 8 – SB 249 – 1065
13) E.C. 5 – Ag 99 – 1079
14) E.C. 5 – Ag 99 – 1079
15) E.C. 6 – Mg 22 – 1129
16) E.C. 5 – Mj – 18 – 1095 A.D
17) E.C. 5 – Mj – 18 – 1095 A.D
18) E.C. 5 – Mj – 18 – 1095 A.D.
19) His of Kan. Lit. p.11
20) The Hoysalas, J.DUNOANM, DERRETT p.126
21) The Hoysalas, J.Derrett p.127
22) S.K.S.C. p.161
23) Cited by E.P.Rice in the Hist of Kan. Lit. p.83
24) Ibid p.84

# ಅಧ್ಯಾಯ 7
# ಧಾರ್ಮಿಕ ಜೀವನ

ವೀರಸೋಮೇಶ್ವರನ ಕೈಕೆಳಗಿನ ಸಾಮ್ರಾಜ್ಯವು ವಿವಿಧ ಮತಧರ್ಮಗಳಿಗೆ ಸೇರಿದ ಜನರಿಂದ ಕೂಡಿತ್ತು ಹಾಗೂ ರಾಜಧಾನಿಯು ಸರ್ವಸಮದರ್ಶಿಯಾದ ಮಹಾನಗರವಾಗಿತ್ತು. ಹೊಯ್ಸಳ ಸಾಮ್ರಾಜ್ಯವು ಒಂದು ಕಡೆ ಜೈನ, ಶೈವ ಧರ್ಮಗಳನ್ನು ಹೊಂದಿದ್ರೆ, ಬೌದ್ಧ, ವೈಷ್ಣವ ಪಂಥಗಳ ಹಾಗೂ ಇತರ ಧರ್ಮಗಳ ಸಾಮರಸ್ಯದ ಸಹಬಾಳ್ವೆಯ ಯುಗವಾಗಿತ್ತು. ಜೈನ ಧರ್ಮವು ಪ್ರಮುಖ ವಾದ ಧರ್ಮವಾಗಿ ಹೊಯ್ಸಳರ ಆರಂಭದ ಕಾಲದಿಂದಲೂ ಉನ್ನತಿಯನ್ನು ಹೊಂದಿದ್ದರೂ ಕಾಲ ಕಾಲಕ್ಕೆ ಇತರೆ ಧರ್ಮಗಳೂ ಕೂಡ ಏಳಿಗೆಗೆ ಬಂದಿರುವುದನ್ನು ಕಾಣಬಹುದಾಗಿದೆ.

## ಧಾರ್ಮಿಕ ಪಂಥಗಳು ಮತ್ತು ಅವುಗಳ ಸಿದ್ಧಾಂತಗಳು

**(ಅ) ಜೈನ ಧರ್ಮ**: ಹೊಯ್ಸಳರ ಉಗಮ ಜೈನಮುನಿ ಸುದತ್ತಾಚಾರ್ಯರಿಂದ ಆರಂಭಗೊಂಡಿದ್ದ ರಿಂದ ಈ ಕಾಲದಲ್ಲಿ ಜೈನ ಧರ್ಮಕ್ಕೆ ವಿಶಿಷ್ಟ ಸ್ಥಾನವನ್ನು ನೀಡಲಾಗಿದೆ. ಜೈನ ಧರ್ಮದಲ್ಲಿ 'ಸಲ್ಲೇಖನ' ವ್ರತ ಬಹಳ ಮುಖ್ಯವಾದುದ್ದು. ಇದು ಒಂದು ರೀತಿಯ ಸಮಾಧಿ ಮರಣ. ಇದನ್ನು ಅನುಸರಿಸುವ ವ್ಯಕ್ತಿಯು ಕೆಲವು ಷರತ್ತಿನೊಂದಿಗೆ ಊಟಾಹಾರವಿಲ್ಲದೇ ಉಪವಾಸದಿಂದ ಸಾಯುತ್ತಾನೆ. ಅವನು ತನಗೆ ಸಂಬಂಧಿಸಿದ ಎಲ್ಲವನ್ನೂ ತ್ಯಜಿಸಬೇಕು. ಮುಂದಿನ ಜನ್ಮದಲ್ಲಿ ಉತ್ತಮ ಜೀವನವನ್ನು ಆಶಿಸುತ್ತಾ ಪ್ರಾಣ ಬಿಡಬೇಕು. ಏಕೆಂದರೆ ಆತನ ಮುಂದಿನ ಜನ್ಮವು ಅವನ ಕಡೆಯ ಆಲೋಚನೆಗಳ ಆಧಾರದ ಮೇಲೆ ನಿರ್ಧಾರವಾಗುತ್ತದೆ. ಈ ಧರ್ಮವು ಜನರ ಮೇಲೆ ಎಷ್ಟು ಪ್ರಭಾವ ಬೀರಿತ್ತೆಂದರೆ ಬೃಹತ್ ಸಂಖ್ಯೆಯ ಶಾಸನಗಳು ಈ ಚರಣೆಯಿಂದ ಬಹಳ ಸಂಖ್ಯೆಯ ಜನಗಳು ಪ್ರಾಣ ಕಳೆದುಕೊಂಡ ಬಗ್ಗೆ ಮಾಹಿತಿಯನ್ನು ನೀಡುತ್ತವೆ. ಜೈನರ ನೀತಿ ಸೂತ್ರಗಳು ಪಂಚಮಹಾವ್ರತಗಳಲ್ಲಿ ನಿರೂಪಿತವಾಗಿವೆ. ಅಹಿಂಸೆ, ಸತ್ಯ, ಆಚಾರ್ಯ (ಅಸ್ತೇಯ) ಬ್ರಹ್ಮಚರ್ಯ ಹಾಗೂ ಅಪರಿಗ್ರಹ (ಪ್ರಾಪಂಚಿಕ ಆಸೆಗಳಿಂದ ಮುಕ್ತಿ) ಔದಾರ್ಯ, ದಯಾಪರತೆ, ಪಾವಿತ್ರ್ಯ ಮತ್ತು ತಪಸ್ಸು ಇವು 'ನಾಲ್ಕುಧರ್ಮ' ಅಥವಾ ಗುಣಗಳು ಮೂರು ಬಗೆಯ ಸಂಯಮ ಗಳೆಂದರೆ ಮನಸ್ಸು, ನಾಲಿಗೆ ಮತ್ತು ದೇಹನಿಗ್ರಹ.[1] ಜೈನರು 'ನಿರ್ವಾಣ' ಸಿದ್ಧಾಂತವನ್ನು ಇಟ್ಟು ಕೊಂಡಿದ್ದಾರೆ. ಆದರೆ ಅವರಿಗೆ ಅದೊಂದು ದಿವ್ಯಾನಂದಕರ ಶಾಂತ ಸ್ಥಿತಿ ಅಥವಾ ನಿಶ್ಚಲತೆ ಪುನರ್ಜನ್ಮದ ನಿಲುಗಡೆ. ಆದರೆ ದೇಹಾತ್ಮ ವಿನಾಶವಲ್ಲ.[2] ಸಲ್ಲೇಖನ ಅಥವಾ ಧಾರ್ಮಿಕ

ಆತ್ಮಹತ್ಯೆಯ ಆಚರಣೆಯು ಪುಣ್ಯಕರವಾದುದೆಂದು ಪರಿಗಣಿತವಾಗಿದೆ. ಜೈನರು ವೇದಗಳನ್ನು ನಿರಾಕರಿಸುತ್ತಾರೆ ಹಾಗೂ ತಮ್ಮದೇ ಆದ ಪವಿತ್ರ ಗ್ರಂಥಗಳನ್ನು ಹೊಂದಿದ್ದಾರೆ.[3]

ವೀರಸೋಮೇಶ್ವರನು ಜೈನರ ಬಗ್ಗೆ ಸಹಿಷ್ಣುತೆಯುಳ್ಳವನಾಗಿದ್ದು ಅವನ ಆಡಳಿತಾವಧಿಯಲ್ಲಿ ಜೈನಧರ್ಮವನ್ನು ಪ್ರೋತ್ಸಾಹಿಸಿದನು. ಜೈನ ಗುರುವಾದ ಮೂಲ ಸಂಘದೇಸಿಂಗದ ಸಕಲ ಚಂದ್ರ ಮುನಿಯು ತೀರಿಕೊಂಡಾಗ ಹಳೇಬೀಡಿನ ನಾಗರೀಕರು ಈತನ ಕಾಲದಲ್ಲಿ ಅವರ ಸ್ಮರಣಾರ್ಥ ಬಿಳೀಚದಲ್ಲಿ ಒಂದು ಬಸದಿಯನ್ನು ನಿರ್ಮಿಸಿದರು ಎಂದು ಹೇಳಲಾಗಿದೆ.[4]

(ಆ) **ಶೈವಧರ್ಮ**: ಭಾರತದ ಅತ್ಯಂತ ಪುರಾತನ ಧರ್ಮಗಳಲ್ಲಿ ಶೈವಧರ್ಮವೂ ಒಂದಾಗಿದೆ. ರುದ್ರನ ಆರಾಧನೆಯು ವೇದದ ಮೂಲವಾಗಿದೆ. ಶೈವ ಧರ್ಮವು ಶೈವ ಆಗಮಗಳ ಮೇಲೆ ಆಧಾರಿತವಾಗಿದೆ. ಇವುಗಳು ಇಪ್ಪತ್ತೆಂಟು, ಇವುಗಳಲ್ಲಿ ಪ್ರತಿಯೊಂದು ಹಲವಾರು ಉಪಾಗಮ ಗಳನ್ನು ಹೊಂದಿವೆ. ಇವುಗಳನ್ನು ಶಿವನು ಪಾರ್ವತಿಗೆ ಉಪದೇಶಿಸಿದ ಎಂದು ಹೇಳಲಾಗಿದೆ. ಮೂರು ಗ್ರಂಥಗಳ ಪ್ರಕಾರ ಶಿವನು ಪರಮ ಶ್ರೇಷ್ಟ ಜೀವಿ. ಈ ವೇದಾಂತವು ದೇವರು, ದೇಹ ಮತ್ತು ಆತ್ಮದ ಸಂಬಂಧಗಳ ಸಂಬಂಧವನ್ನು ನಿರ್ಧರಿಸುತ್ತದೆ. ಇದರ ಪ್ರಕಾರ ದೇಹ ಮತ್ತು ಆತ್ಮ ಗಳು ಶಾಶ್ವತ. ಸರ್ವಶಕ್ತನು ಆತ್ಮಗಳನ್ನು ದೇಹದ ಬಂಧನದಿಂದ ಮತ್ತು ಮೂರು ಕಲ್ಮಶಗಳಿಂದ ವಿಮುಕ್ತಿಗೊಳಿಸಲು ಸದಾ ಸಿದ್ದನಾಗಿರುತ್ತಾನೆ. ದೇವರು ನಿಸರ್ಗ ಮತ್ತು ಮನುಷ್ಯನಲ್ಲಿ ನೆಲೆ ಸಿರುತ್ತಾನೆ. ಹಾಗೆಯೇ ಇವುಗಳು ಅವನಲ್ಲಿ ನೆಲೆಸಿವೆ. ಆದರೆ ಅವನು ಇವುಗಳ ಜೊತೆ ಸಾಮರಸ್ಯ ವನ್ನು ಹೊಂದಿಲ್ಲ. ಶೈವಪಂಥದವರು ಬಹಳ ಧಾರ್ಮಿಕ ಶ್ರದ್ಧೆಯುಳ್ಳವರಾಗಿದ್ದರೂ, ಸಮಾಜದ ಅಭಿವೃದ್ಧಿ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸಿರುವುದಾಗಿ ತಿಳಿಯುತ್ತದೆ. ಅವರು ಜನರ ಮಧ್ಯೆ ಜೀವಿಸಿದ್ದರು ಮತ್ತು ಜನರ ಹಿತಕ್ಕಾಗಿ ಶ್ರಮಿಸಿದರು. ಬಹುಪಾಲು ಶಾಸನಗಳೂ ಇವರು ದೇವಸ್ಥಾನ ಅಥವಾ ಮಠಗಳ ಪರವಾಗಿ ಕೊಡುಗೆ ಮತ್ತು ಉಂಬಳಿಗಳನ್ನು ಪಡೆಯುತ್ತಿದ್ದರ ಬಗ್ಗೆ ಮಾಹಿತಿಯನ್ನು ಒದಗಿಸುತ್ತವೆ.

ಶೈವಧರ್ಮವು ಜನರ ಜೀವನದ ಮೇಲೆ ಅಗಾಧವಾದ ಪ್ರಭಾವವನ್ನು ಬೀರಿತ್ತು ಮತ್ತು ಎಲ್ಲಾ ವರ್ಗದ ಜನಗಳನ್ನು ಧಾರ್ಮಿಕವಾಗಿ, ಸಾಮಾಜಿಕವಾಗಿ ನೈತಿಕವಾಗಿ ಮತ್ತು ಸಂಘಟಿತ ಚಟುವಟಿಕೆಗಳ ಮೂಲಕ ಪ್ರಚೋದಿಸಿತ್ತು.

ವೀರಸೋಮೇಶ್ವರನು ಶೈವ ಮತಕ್ಕೆ ಪ್ರೋತ್ಸಾಹ ನೀಡಿದ್ದಲ್ಲದೇ ಈತನು ಒಬ್ಬ ಶೈವನಾಗಿದ್ದನು. ಸೋಮೇಶ್ವರನು ಶೈವಮತದ ಪಕ್ಷಪಾತವನ್ನು ಹೊಂದಿದ್ದ ಎಂಬುದಕ್ಕೆ ಒಂದು ರಸಾವತ್ತಾದ ಕಥೆಯಿದೆ. ಕುಷ್ಟರೋಗದಿಂದ ಬಳಲುತ್ತಿದ್ದ ಸೋಮೇಶ್ವರನು ದೋರಸಮುದ್ರದ ಬಳಿಯ ಪುಷ್ಪಗಿರಿ ಬೆಟ್ಟದಲ್ಲಿ ವಿಶ್ರಾಂತಿ ತೆಗೆದುಕೊಳ್ಳಲು ಹೋದನು. ಅಲ್ಲಿ ದೇವವಾಣಿಯೊಂದು ಈತನಿಗೆ ಒಂದು ಶಿವದೇವಾಲಯ ನಿರ್ಮಾಣ ಮಾಡಿ ಪೂಜೆ ಮಾಡಿದರೆ ಖಾಯಿಲೆ ಗುಣವಾಗುತ್ತೆಂದು ದೇವವಾಣಿಯು ನುಡಿಯಿತು.[5] ಈತನು ಖಾಯಿಲೆಯಿಂದ ನರಳುತ್ತಿದ್ದ ಎಂಬುದಕ್ಕೆ ಸೋಮೇಶ್ವರನ ಆಳ್ವಿಕೆಯ ಹದಿನೈದು ಹಾಗೂ ಹದಿನೇಳನೇ ವರ್ಷಗಳಲ್ಲಿ ಸೇಲಂ ಜಿಲ್ಲೆಯಲ್ಲಿ ದೊರೆತ ಎರಡು ಶಾಸನಗಳಿಂದ ಮಾಹಿತಿಯನ್ನು ಊಹಿಸಬಹುದಾಗಿದೆ. ಇವುಗಳಿಂದ ರಾಜನ ಯೋಗಕ್ಷೇಮದ ದೃಷ್ಟಿಯಿಂದ ಸೋಮೆಯ ದಣ್ಣಾಯಕ ಹಾಗೂ ಎಪ್ಪತ್ತೊಂಭತ್ತು ಜಿಲ್ಲೆಗಳ ನಾಗರೀಕರು ದೇವಸ್ಥಾನಕ್ಕೆ ಭೂದಾನ ಮಾಡಿದುದರ ಬಗ್ಗೆ ಬರೆಯುತ್ತವೆ.[6] ಕೆಲವು ಶಾಸನಗಳ ಸಾಕ್ಷಿಯಿಂದ ಸೋಮೇಶ್ವರನು ಶೈವಮತವನ್ನು ಅವಲಂಬಿಸಿದ್ದ ಎಂಬುದು ರುಜುವಾತಾಗುತ್ತದೆ. ಉದಾಹರಣೆಗೆ ಕ್ರಿ.ಶ. 1253ರಲ್ಲಿ ಈತನು ಕಣ್ಣಾನೂರಿನ ಜಂಬುಕೇಶ್ವರ ದೇವಾಲಯದಲ್ಲಿ ಅವನ ಅಜ್ಜ, ಅಜ್ಜಿ, ತಂದೆ ಮತ್ತು ತಾಯಿಯ ಸ್ಮರಣಾರ್ಥ ವಲ್ಲಾಲೀಶ್ವರ, ಪದುಮಾಲೀಶ್ವರ, ವೀರ ನರಸಿಂಗೀಶ್ವರ ಮತ್ತು ಸೋಮಲೀಶ್ವರ ಎಂಬ ಮೂರ್ತಿಗಳನ್ನು ಪ್ರತಿಷ್ಠಾಪಿಸಿದನೆಂದು ತಿಳಿದು ಬರುತ್ತದೆ.[7]

## 5) ವೀರಶೈವಧರ್ಮ

ಹೊಯ್ಸಳರ ಯುಗವು ಸ್ಫೂರ್ತಿಯುತ ಬಸವೇಶ್ವರರ ನಾಯಕತ್ವದಡಿಯಲ್ಲಿ ವೀರಶೈವ ಧರ್ಮವು ಪ್ರತಿಷ್ಟೆಯ ಉತ್ತುಂಗಕ್ಕೆ ಏರಿತು. ಪ್ರೊ.ಮುಗುಳಿಯವರು ಹೇಳುವಂತೆ ಅದೊಂದು ಸರಿಸಾಟಿಯಿಲ್ಲದ ಆಧ್ಯಾತ್ಮಿಕ ಉತ್ಸಾಹವನ್ನು ಹೊಂದಿದ್ದ ಯುಗವಾಗಿತ್ತು. ಈ ಕಾಲದಲ್ಲಿ ಕರ್ನಾಟಕದ ಎಲ್ಲಾ ಭಾಗಗಳಲ್ಲಿ ವೀರಶೈವ ಧರ್ಮವು ಪ್ರಚಾರ ಹೊಂದಿತು.

ವೀರಸೋಮೇಶ್ವರನ ಕಾಲದಲ್ಲಿ ಕುಂದನಂಬಿಯು ಕಣ್ಣಾನೂರಿನ ಕುಂಜನ ಹೆಸರಿನಲ್ಲಿ ಶಿವಲಿಂಗವೊಂದನ್ನು ಪ್ರತಿಷ್ಠಾಪಿಸಿ ಪೂಜೆ ಪುರಸ್ಕಾರಕ್ಕಾಗಿ ಭೂದಾನವನ್ನು ಮಾಡಿದನು. ಆಲೂರಿನ ಎಲ್ಲಾ ಬ್ರಾಹ್ಮಣರು ದಾನವನ್ನು ನೀಡಿರುವುದು ತಿಳಿದುಬರುತ್ತದೆ.[8] ಕ್ರಿ.ಶ. 1235ರಲ್ಲಿ ವೀರ ಸೋಮೇಶ್ವರನ ಕಂದಾಯದ ಅಧಿಕಾರಿಯಾದ ಅಡ್ಡಾಯದ ಹರಿಹರ ದಂಡನಾಯಕ ಮತ್ತು ಅವನ

ಸಹೋದರರು ಅವರ ತಾಯಿಯ ಹೆಸರಿನಲ್ಲಿ ಮಂಡ್ಯ ಜಿಲ್ಲೆಯ ಬಸರಾಳುವಿನ ಬಳಿ ಮಲ್ಲಿಕಾರ್ಜುನ ದೇವಾಲಯವನ್ನು ಕಟ್ಟಿಸಿದರು ಮತ್ತು ದೇವರ ಸೇವೆಗಾಗಿ ಸಹಾಯಧನವನ್ನು ಪಡೆದದ್ದು ತಿಳಿದು ಬರುತ್ತದೆ.[9] ಸೋಮೇಶ್ವರನ ಅಧಿಕಾರಿ, ಮಂತ್ರಿ ಹಾಗೂ ದಂಡನಾಯಕನಾಗಿದ್ದ ಬೊಮ್ಮಣ್ಣನು ರಾಜ ನಿಂದ ತುಮಕೂರು ಜಿಲ್ಲೆಯ ಕೊಂಡಜ್ಜಿ, ಹಳ್ಳಿ ಹಿರಿಯೂರು ಗ್ರಾಮಗಳನ್ನು ಪಡೆದು ಅವುಗಳನ್ನು ಶಿವಪರವಾಗಿ ಮಾಡಿ ನಂತರ ಅವುಗಳನ್ನು ಶಿವಯೋಗಿ ಚಿಕ್ಕ ಅಘಮ್ಮದೇವನಿಗೆ ಕೊಡುಗೆಯಾಗಿ ನೀಡಿದನು. ಈ ಊರ ದೇವರ ಪೂಜೆಗೆಂದು ಎರಡು ಭಾಗಗಳನ್ನು ನೀಡಲಾಯಿತು. ಎಲ್ಲಾ ದಾನಿಗಳು ಲಿಂಗಾಯಿತರಾಗಿದ್ದು ಅವರಲ್ಲಿ ಕೆಲವರು ಮಹಿಳೆಯರಾಗಿದ್ದರು.[10] ಸೋಮೇಶ್ವರನು ತನ್ನ ತಾಯಿಯ ಒಳಿತಿಗಾಗಿ ಹಾಗೂ ತಿರುಚಿ ಜಿಲ್ಲೆಯ ಜಂಬುಕೇಶ್ವರಂನ ಪೂಸಳೇಶ್ವರಂ ಉದಿಯೂರ್ ದೇವಸ್ಥಾನದಲ್ಲಿನ ಪೂಜೆಗಾಗಿ ನಾಲ್ಕು ಹಳ್ಳಿಗಳ ತೆರಿಗೆಯನ್ನು ದಾನ ಮಾಡಿದನು.[11] ಸೋಮೇಶ್ವರನ ಆಳ್ವಿಕೆಯಲ್ಲಿ ನಲ್ಲಶೆಟ್ಟಿಯೆಂಬುವನು ಶಿವದೇವಸ್ಥಾನವನ್ನು ಕಟ್ಟಿಸಿ, ಪುನರ್ ಸ್ಥಾಪಿಸಿ ಕಲ್ಯಾಣಿಜಿಯನ ಪಾದಗಳನ್ನು ತೊಳೆದು ದೇವರಿಗಾಗಿ ಭೂದಾನವನ್ನು ಮಾಡಿದನು.[12] ಕ್ರಿ.ಶ. 1243ರಲ್ಲಿ ಕಣ್ಣಾನೂರಿನ ಕೆಲವು ಮಹಾಜನರು ಸ್ವಲ್ಪ ಭೂಮಿಯನ್ನು ಖರೀದಿಸಿ ಹೋಮ ಮಾಡುವ ಸಲುವಾಗಿ ಅಗ್ನಿಷ್ಟಿಗೆಗೆ ಒಂದು ಗರ್ಭಗುಡಿಯನ್ನು ಕಟ್ಟಲು ಅದನ್ನು ದಾನ ಮಾಡಿದರು.[13]

### 6) ವೈಷ್ಣವ ಧರ್ಮ

ಶಿವನ ಆರಾಧನೆಯಂತೆ ವಿಷ್ಣುವಿನ ಆರಾಧನೆಯೂ ವೇದಗಳಷ್ಟೂ ಪುರಾತನವಾದುದು. ವೇದಗಳ ಕಾಲದಿಂದಲೇ ಭಾಗವತ ಪಂಥವು ಭಕ್ತಿಯ ಸಿದ್ಧಾಂತವನ್ನು ಅಭಿವೃದ್ಧಿಪಡಿಸಿತು. ದಕ್ಷಿಣ ಭಾರತದಲ್ಲಿ ಹಾಗೂ ತಮಿಳುನಾಡಿನಲ್ಲಿ ಈ ಧರ್ಮ ಉತ್ತುಂಗಕ್ಕೇರಿತು. ವೀರಸೋಮೇಶ್ವರನು ಶೈವ ಮತಕ್ಕೆ ಹೆಚ್ಚು ಪ್ರಾದಾನ್ಯತೆಯನ್ನು ನೀಡಿದ್ದುದ್ದರಿಂದ ವೈಷ್ಣವ ಮತವನ್ನು ನಿರ್ಲಕ್ಷಿಸಿದುದು ತಿಳಿದು ಬರುತ್ತದೆ. ಕಣ್ಣಾನೂರಿನ ಜಂಬುಕೇಶ್ವರ ದೇವಾಲಯದಲ್ಲಿ ಆತನ ಅಜ್ಜ, ಅಜ್ಜಿ, ತಂದೆ ಮತ್ತು ತಾಯಿಯ ಸ್ಮರಣಾರ್ಥ ಮೂರ್ತಿಗಳನ್ನು ಪ್ರತಿಷ್ಠಾಪಿಸಿದಾಗ ಆ ದ್ವೀಪದಲ್ಲಿ ವೈಷ್ಣವ ದೇವಾಲಯ ಗಳನ್ನು ನಿಷ್ಟುರುಣವಾಗಿ ನಿರ್ಲಕ್ಷಿಸಲಾಯಿತು.[14] ಜಾತವರ್ಮನ್ ಸುಂದರಪಾಂಡ್ಯನೊಬ್ಬ ಮಾತ್ರ ವೈಷ್ಣವ ದೇವಾಲಯಗಳನ್ನು ದುರಸ್ತಿಗೊಳಿಸಿರುವುದು ಕಂಡುಬರುತ್ತದೆ. ಈತನ ಒಂದು ಶಾಸನವು ವೀರಸೋಮೇಶ್ವರನನ್ನು ಕುರಿತು ಈ ಕೆಳಕಂಡಂತೆ ಹೇಳುತ್ತದೆ. ಸೋಮೇಶ್ವರನು "ಕನ್ನಡದ ಚಂದಿರ ಈ ಶ್ರೀರಂಗಂನ ತಾವರೆಕೊಳವನ್ನು ಅಸಹ್ಯ ಸ್ಥಿತಿಗೆ ತಂದಿದ್ದನು"[15] ಈ ಅಂಶವು ಅವನು ವೈಷ್ಣವ ಧರ್ಮದ ಬಗ್ಗೆ ಹೊಂದಿದ್ದ ಉದಾಸೀನತೆಯನ್ನು ಸ್ಪಷ್ಟಪಡಿಸುತ್ತದೆ. ಸೋಮೇಶ್ವರನು ತನ್ನ ಸಾವಿಗೆ

ಸ್ವಲ್ಪ ಮುನ್ನ ಮೂರು ಛತ್ರಿಯನ್ನು ವಿಜಯ ತೀರ್ಥಂಕರ ಬಸದಿಯಲ್ಲಿ ಸ್ಥಾಪಿಸಿದ್ದರಿಂದ ಅದಕ್ಕೆ ಗೌರವವನ್ನು ಅರ್ಪಿಸಲು ತನ್ನ ಪ್ರಜೆಗಳನ್ನು ಕರೆಸಿ ಅನಂತರ ಜೈನ ದೇವರುಗಳಿಗೆ ನಮನವನ್ನು ಸಲ್ಲಿಸಿದುದಾಗಿ ಹೇಳಲಾಗಿದೆ.[16] ಆದರೂ ವೀರಸೋಮೇಶ್ವರನು ಶ್ರೀರಂಗಂ ದೇವಾಲಯಕ್ಕೆ ಅಕ್ಕಿಯ ಕಾಣಿಕೆಯನ್ನು ನೀಡಿರುವುದು ಕಾಣಸಿಗುತ್ತದೆ.[17]

## ಅಗ್ರಹಾರಗಳು

ವಿದ್ಯಾವಂತ ಬ್ರಾಹ್ಮಣರು ತಮ್ಮ ವಸಾಹತುಗಳನ್ನು ನಾಡಿನುದ್ದಕ್ಕೂ ಹರಡುವುದರೊಂದಿಗೆ (ಸ್ಥಾಪಿಸುವುದರೊಂದಿಗೆ) ಶಿಕ್ಷಣಕ್ಕೆ ವ್ಯವಸ್ಥಿತ ಉತ್ತೇಜನವು ದೊರೆಯಿತು. ನಾಡಿನ ಪ್ರತಿ ಮೂಲೆ ಮೂಲೆಯಲ್ಲೂ ಹೆಚ್ಚು ಸಂಖ್ಯೆಯ ಅಗ್ರಹಾರಗಳು ತಲೆ ಎತ್ತಿದವು. ರಾಜ್ಯದ ಹಾಗೂ ಜನರ ಔದಾರ್ಯದ ದಿಸೆಯಿಂದಾಗಿ ಇವುಗಳು ಅಸ್ತಿತ್ವಕ್ಕೆ ಬಂದವು. ಅಗ್ರಹಾರವು ಬ್ರಾಹ್ಮಣರ ವಸತಿ ಯಾಗಿತ್ತು. ಎಲ್ಲ ವರ್ಗದ ದಾನಿಗಳು ನೀಡುತ್ತಿದ್ದ ದಾನದಿಂದ ಇದನ್ನು ನಡೆಸಲಾಗುತ್ತಿತ್ತು. ಇದು ಸಾಮಾನ್ಯವಾಗಿ ಒಂದು ಹಳ್ಳಿಯಾಗಿರುತ್ತಿದ್ದು ನಗರಗಳಿಂದ ಹೊರಭಾಗದಲ್ಲಿರುತ್ತಿತ್ತು. ಸುಂದರ ನಿಸರ್ಗದ ವಾತಾವರಣದ ಮಧ್ಯೆ ಪ್ರತ್ಯೇಕ ಕೇಂದ್ರವಾಗಿರುತ್ತಿತ್ತು. ಇದೊಂದು ವಸತಿ ವಿಶ್ವ ವಿದ್ಯಾಲಯ ಕೇಂದ್ರವಾಗಿದ್ದು ಅಲ್ಲಿನ ವಿದ್ಯಾರ್ಥಿಗಳಿಗೆ ಉಚಿತ ವಸತಿ ಮತ್ತು ಊಟದ ವ್ಯವಸ್ಥೆ ಯನ್ನು ಹಲವಾರು ಸಂದರ್ಭಗಳಲ್ಲಿ ಒದಗಿಸಲಾಗುತ್ತಿತ್ತು.[18] ಬಹುಪಾಲು ಅಗ್ರಹಾರಗಳನ್ನು ರಾಜ ಮನೆತನದವರು ಮಾಡಿದ ದಾನದಿಂದ ಸ್ಥಾಪಿಸಲಾಗುತ್ತಿತ್ತು. ಅವುಗಳ ಉದ್ದೇಶವೇನೆಂದರೆ ಶಿಕಷಣ ಮತ್ತು ಅಭ್ಯಾಸವನ್ನು ಪ್ರೋತ್ಸಾಹಿಸುವುದು ಹಾಗೂ ಕೀರ್ತಿಯನ್ನು ಸಂಪಾದಿಸುವುದಾಗಿತ್ತು. ಆ ಹಳ್ಳಿಯಿಂದ ಬಂದ ಆದಾಯವನ್ನು ಬ್ರಾಹ್ಮಣರಿಗೆ ವೃತ್ತಿಗಳಾಗಿ ಹಂಚಲಾಗುತಿತ್ತು. ಬ್ರಾಹ್ಮಣರಿಗೆ ಅವರ ಜೀವನಕ್ಕೆ ಭರವಸೆ ದೊರೆತ ಫಲವಾಗಿ ಅವರು ತಮ್ಮ ಜೀವನವನ್ನು ಜ್ಞಾನದ ವಿಸ್ತರಣೆ ಗಾಗಿ ಹಾಗೂ ವಿದ್ಯಾಭ್ಯಾಸಕ್ಕಾಗಿ ಮುಡಿಪಾಗಿಟ್ಟಿದ್ದರು. ಬ್ರಾಹ್ಮಣರ ಅಸಾಮಾನ್ಯ ಪಾಂಡಿತ್ಯವು ನಾಡಿನ ಹಲವಾರು ಭಾಗಗಳ ವಿದ್ಯಾರ್ಥಿಗಳನ್ನು ಆಕರ್ಷಿಸಿತು. ಹಲವಾರು ಜಾತಿಗಳ ಹಾಗೂ ಹಲವಾರು ಧರ್ಮಗಳ ಜನರು ಸಮಾಗಮಗೊಂಡಿದ್ದು ಇಲ್ಲೇ. ಆದ್ದರಿಂದ ಅಗ್ರಹಾರಗಳು ಮಧ್ಯಕಾಲೀನ ಭಾರತದ ನಿಜವಾದ ವಿಶ್ವವಿದ್ಯಾನಿಲಯಗಳನ್ನು ಹೊಂದಿದ್ದವು ಎಂದು ಹೇಳಬಹುದು. ಇದೊಂದು ವಿಶ್ವ ಅಧ್ಯಾಯದ ಶಾಲೆ ಅಥವಾ ಕ್ರೀಡಾಂಗಣ.

ಈ ಕಾಲದ ಹಲವಾರು ಶಾಸನಗಳು ವಿಧವಿಧವಾದ ಅಗ್ರಹಾರಗಳ ಸ್ಥಾಪನೆಯ ಬಗ್ಗೆ ಮಾಹಿತಿಯನ್ನು ನೀಡುತ್ತವೆ. ಮೂರು ಶತಮಾನಗಳ ಕಾಲ ವಿದ್ಯಾಭ್ಯಾಸದ ಪ್ರತಿನಿಧಿಯಾಗಿದ್ದ ಹಾಗೂ ಈ ಪ್ರದೇಶದಲ್ಲಿ ಹುಲುಸಾಗಿ ಬೆಳೆದ ಸುಪ್ರಸಿದ್ಧ ಅಗ್ರಹಾರಗಳು ಇಣುಕು ನೋಟವನ್ನು ಈ ಶಾಸನಗಳು ನಮಗೆ ನೀಡುತ್ತವೆ. ಬಹುಶಃ ಸ್ತೋತ್ರಿಯ ಗ್ರಾಮವು ಅಗ್ರಹಾರದ ಇನ್ನೊಂದು ಹೆಸರಾಗಿತ್ತೆಂದು ಕಾಣಿಸುತ್ತದೆ.[19]

ಈ ಅಗ್ರಹಾರಗಳಲ್ಲಿ ಇತರೆ ಧರ್ಮಗಳ ಗುಂಪಿನ ಜನರೂ ಇದ್ದರು. ಆದರೆ ದಾನದತ್ತಿಗಳು ಬ್ರಾಹ್ಮಣರ ಮೇಲ್ವಿಚಾರಣೆಯಲ್ಲಿದ್ದವು. ಇವರದು ಒಂದು ಸಭೆಯಿತ್ತು. ಈ ಸಭೆಯು ಅಗ್ರಹಾರದ ಚಟುವಟಿಕೆಗಳನ್ನು ನೋಡಿಕೊಂಡು ನಿಯಂತ್ರಿಸುತ್ತಿತ್ತು. ಈ ಸಭೆಯ ಸದಸ್ಯರನ್ನು ಮಹಾಜನರು ಎಂದು ಕರೆಯಲಾಗುತ್ತಿತ್ತು. ಈ ಸಭೆಯು ನಾಗರೀಕ ಮತ್ತು ಸೇನೆಯ ಕರ್ತವ್ಯಗಳನ್ನೂ ನಿರ್ವಹಿಸುತ್ತಿತ್ತು.[20] ಈ ಅಗ್ರಹಾರಗಳನ್ನು ಅರಸರು ಹಾಗೂ ಅವರ ಸಾಮಂತರು ಈ ಕಾಲದುದ್ದಕ್ಕೂ ಉಂಬಳಿಯನ್ನು ಕೊಡುವುದರೊಂದಿಗೆ ಸ್ಥಾಪಿಸುತ್ತಾ ಹೋದರು.[21]

ಕ್ರಿ.ಶ. 1252ರಲ್ಲಿ ಹೊಯ್ಸಳರ ರಾಜ ಸೋಮೇಶ್ವರನ ಮಂತ್ರಿ ಹಾಗೂ ದಂಡನಾಯಕನಾದ ಬೊಮ್ಮಣ್ಣನು ರಾಜನಿಂದ ಕೊಂಡಜ್ಜಿ ಮತ್ತು ಹಳ್ಳಿ ಹಿರಿಯೂರು ಗ್ರಾಮಗಳನ್ನು ಸ್ವೀಕರಿಸಿ ಅವುಗಳನ್ನು ಶಿವಪುರ ಅಗ್ರಹಾರವನ್ನಾಗಿ ಮಾಡಿದನು.[22]

ಅಗ್ರಹಾರದ ಬ್ರಾಹ್ಮಣರು ಸಾಮಾನ್ಯವಾಗಿ ವಿದ್ಯಾವಂತ ಪುರುಷರಾಗಿರುತ್ತಿದ್ದರು. ಇವರಲ್ಲಿ ಕೆಲವರ ಸ್ಪಷ್ಟ ಚಿತ್ರಣವನ್ನು ಶಾಸನಗಳು ನಮಗೆ ನೀಡುತ್ತವೆ. ಹಾಗೂ ಬ್ರಾಹ್ಮಣರನ್ನು ಹೊಗಳಿವೆ. ಸುಪ್ರಸಿದ್ಧ ಮತ್ತು ಹುಲುಸಾಗಿ ಬೆಳೆದಿದ್ದ ಅಗ್ರಹಾರಗಳಲ್ಲಿ ಕುಕ್ಕನೂರು ಅಗ್ರಹಾರ ಅಥವಾ ಇತ್ತೀಚಿನ ಕುಕ್ಕೆನೂರು ಒಂದಾಗಿತ್ತು. ಕುಕ್ಕನೂರು 300ರ ಮುಖ್ಯ ಕಛೇರಿಯಾಗಿತ್ತು. ಇದೊಂದು ಪ್ರಸಿದ್ಧ ಅಗ್ರಹಾರವಾಗಿದ್ದು ಇಲ್ಲಿ 1000 ಮಹಾಜನಗಳು ಅದರ ಪ್ರತಿನಿಧಿಗಳಾಗಿದ್ದರು. ಇವರು ವೇದ ಮತ್ತು ಜ್ಞಾನದ ಇತರ ಕ್ಷೇತ್ರಗಳಲ್ಲಿ ಉನ್ನತ ಪಾಂಡಿತ್ಯವನ್ನು ಹೊಂದಿದ್ದರು. ಇವರು ಪವಿತ್ರ ಜ್ಞಾನ, ಸದ್ಗುಣ, ವಿದ್ವತ್ತು, ವಿನಯ ಮತ್ತು ಒಳ್ಳೆಯ ಕಾರ್ಯಗಳಿಂದ ಪುಣ್ಯವನ್ನು ಹೊಂದಿದ್ದ ಶ್ರೇಷ್ಠ ಬ್ರಾಹ್ಮಣರು ಎಂದು ಹೇಳಲಾಗುತ್ತದೆ.

ಅರಸೀಕರೆ ತಾಲ್ಲೋಕು ಜಯಗೊಂಡಪುರ ಎಂದು ಕರೆಯಲ್ಪಡುವ ಬೆಂಡೆಕೆರೆಯು ಹಲವಾರು ಆಳವಾದ ಅಧ್ಯಾಯ ಮಾಡಿದ ಪಂಡಿತರನ್ನು ಹೊಂದಿದ್ದ ಶ್ರೇಷ್ಟ ಅಗ್ರಹಾರವೆಂದು ವಿವರಿಸಲಾಗಿದೆ. ಈ ಊರಿನ ಬ್ರಾಹ್ಮಣರು ವೇದ, ಶಾಸ್ತ್ರ, ಪುರಾಣ, ಸ್ಮೃತಿ, ನಾಟಕ ಮತ್ತು ಕಾವ್ಯ ಗಳಲ್ಲಿ ಪಾರಂಗತರಾಗಿದ್ದರು.[23]

**ಉತ್ಸವಗಳು**: ಹೊಯ್ಸಳರ ಕಾಲದಲ್ಲಿದ್ದ ಅನೇಕ ಉತ್ಸವಗಳನ್ನು ವೀರಸೋಮೇಶ್ವನ ಕಾಲದಲ್ಲೂ ಕಾಣಬಹುದಾಗಿದೆ. ಈ ಉತ್ಸವಗಳೆಂದರೆ ಶ್ರೀ ಪಂಚರಾತ್ರ ಶಾಸ್ತ್ರಮಂತ್ರ ಸಿದ್ಧಾಂತ ಮಾರ್ಗ, ಸಕಲ ಭೋಗ ನಿತ್ಯಾರ್ಚನ, ವಿಗ್ರಹದ ಸ್ನಾನ, ಅಲಂಕಾರಾಸನ, ಯಾತ್ರಾಸನ, ಭೋಜ್ಯಾಸನ, ಶಯನಾಸನ, ಪವಿತ್ರ ಸಂಕೇತಗಳ ಪ್ರದರ್ಶನ, ಚತುಷ್ಯಪಚಾರ, ಪುಷ್ಪಾರ್ಚನ, ನಿತ್ಯಹೋಮ, ನಿತ್ಯೋತ್ಸವ, ಪವಿತ್ರೋತ್ಸವ, ಸ್ವಾರಶಯನೋತ್ಥಾನ, ಜಯಂತ್ರ್ಯೋತ್ಸವ, ದೇವರ ಚಕ್ರೋತ್ಸವ, ರಾಮಕೃಷ್ಣ ಜನ್ಮೋತ್ಸವ, ಕಮಲ ಪುಷ್ಪೋತ್ಸವ, ಡೋಲೋತ್ಸವ, ದೀಪೋತ್ಸವ, ಮಾರ್ಗಶಿರ ಮಾಸೋತ್ಸವ ಪುಷ್ಯಮಾಸೋತ್ಸವ, ಚೈತ್ರ ಮಾಸೋತ್ಸವ, ನವರತ್ನ ಸ್ಥಾಪನ, ನವವಸ್ತ್ರಾಭರಣ, ನರ್ತನ ಪ್ರದರ್ಶನ, ಕೋಶ ಪ್ರವೇಶನ ವಿಷುವಯನ, ಸಂಕ್ರಮಣ ಸ್ನಪನ, ನೀರಜನ ಇತ್ಯಾದಿ.[24] ದೇವರಿಗೆ ಪಂಚಾಮೃತಾಭಿಷೇಕ, ನೈವೇದ್ಯ, ನಂದಾದೀವಿಗೆ ಪುಷ್ಪಗಳಿಂದ ಪ್ರಾರ್ಥನೆ, ಕಾರ್ತಿಕಮಾಸದಲ್ಲಿ ಮತ್ತು ಕೃತ್ತಿಕ ನಕ್ಷತ್ರವೆಂದು ಮಾಡುವ ದೀಪಾರಾಧನೆ, ವಸಂತ ಮಹೋತ್ಸವ, ಪಂಚಪರ್ವ ದೀಪಾವಳಿ, ಶಿವರಾತ್ರಿ, ಯುಗಾದಿ, ಇತರ ಮಹಾತಿಥಿ ನಕ್ಷತ್ರಗಳಿಗೆ ಸಂಬಂಧಿಸಿದ ಹಬ್ಬ ಮತ್ತು ಉಪವಾಸಗಳಂಥ ಇತರ ಉತ್ಸವಗಳೂ ದೇವಾಲಯಗಳಲ್ಲಿ ನಡೆಯುತ್ತಿದ್ದವು.[25] ಜೈನರಲ್ಲಿ ಶ್ರವಣ ಬೆಳಗೊಳ ಮತ್ತು ಕಾರ್ಕಳಗಳಲ್ಲಿ ಗೊಮ್ಮಟಾಭಿಷೇಕವನ್ನು ಹಲವು ವರ್ಷಗಳ ಅಂತರದಲ್ಲಿ ನಡೆಸಲಾಗುತ್ತಿತ್ತು.[26]

ವಿಶೇಷವಾಗಿ ವೀರಸೊಮೇಶ್ವರನ ಕಾಲದಲ್ಲಿ 'ತಿರುನಲ್' ಎಂಬ ಹಬ್ಬವನ್ನು ಆಚರಿಸು ತ್ತಿದ್ದುದು ತಿಳಿದುಬಂದಿದೆ.[27]

## ಟಿಪ್ಪಣಿಗಳು ಮತ್ತು ಉಲ್ಲೇಖಗಳು


1) B.L.Rice: Mysore Vol.1, (London 1897) p.462
2) B.L.Rice: Mysore Vol.1, (London 1897) p.463

3) B.L.Rice: Mysore Vol.1, (London 1897) p.463
4) MAR 1929-p.75
5) Rice, Mysore and Coorg Gazetteer II. P.318
6) Madras Inscriptions, II p.1210
7) E.I. III, P.8
8) E.C.5, AK 108-1255
9) EC 7 – Mandya 121-1235
10) MAR 1907 – P.4 – 1252
11) S.I.E. 1937 – No.122 – 1258
12) EC 11 – HL 121 -1240
13) MAR 1930 – p.227 – No.69 – 1243
14) E.I., III, p.8
15) Ibid, P.14
16) E.C. V, B1, 125
17) S.I.E. 1936 – No.69 – 1232
18) The Kadamba Kula p.287
19) E.C. 3 – NJ-164-1092
20) EC 9-127-132
21) MAR-1337 – Kn 17
22) MAR – 1907 – p.4
23) J.B.B.R.A.S. 15 – p.42 – 1253 A.D
24) EC V, B 13, p.145
25) EC V, C, N. 259, p.234: MAR 1913-14, p.49
26) ECII, SB, 30 and Summary 4
27) EC V, T.N.-54 (1246)

# ಅಧ್ಯಾಯ 8
# ಉಪಸಂಹಾರ

'ವೀರಸೋಮೇಶ್ವರ ಮತ್ತು ಆತನ ಕಾಲ'ಗಳನ್ನು ಕುರಿತು ನಮ್ಮ ಅಧ್ಯಾಯದಿಂದ ಈ ಕೆಳಗಿನ ಪರಿಣಾಮಗಳು ಹೊರಹೊಮ್ಮುತ್ತವೆ. ಮೊದಲನೆಯದಾಗಿ, ಸೋಮೇಶ್ವರನಿಗೆ ತನ್ನ ಪೂರ್ವಜರು ಜಯಿಸಿ ಬಿಟ್ಟುಹೋದ ಪ್ರದೇಶಕ್ಕೆ ಹೆಚ್ಚು ಸೇರ್ಪಡೆ ಮಾಡಲು ಸಾಧ್ಯವಾಗಲಿಲ್ಲವಾದರೂ ಆತ ಹೊಯ್ಸಳ ಸಾಮ್ರಾಜ್ಯವನ್ನು ಸಂರಕ್ಷಿಸುವಲ್ಲಿ ಮತ್ತು ಕ್ರೋಡೀಕರಿಸುವಲ್ಲಿ ನಿಸ್ಸಂದೇಹವಾಗಿ ಸಮರ್ಥನಾದ ಸಾಮ್ರಾಟನಾಗಿದ್ದ ಈತನು ಉತ್ತರಕ್ಕಿಂತ ಹೆಚ್ಚಾಗಿ ದಕ್ಷಿಣ ಭಾರತದ ಕಡೆ ಹೆಚ್ಚು ಪ್ರಭಾವಿಯಾಗಿದ್ದನೆಂದು ತಿಳಿದುಬರುತ್ತದೆ. ದಕ್ಷಿಣದಲ್ಲಿ ಪಾಂಡ್ಯ, ಚೇರ, ಚೋಳ ಹಾಗೂ ಕಾಡವರ ಜೊತೆ ಮೈತ್ರಿಯನ್ನು ಹೊಂದಿದ್ದನ್ನು ಕಾಣಬಹುದಾಗಿದೆ. ಪಾಂಡ್ಯರ ಎರಡನೇ ಸುಂದರವರ್ಮ ಪಾಂಡ್ಯನ್‌ಗೆ ತನ್ನ ಮಗಳಾದ ಪಮ್ಮಿಯಕ್ಕಾರಳನ್ನು ಮದುವೆ ಮಾಡಿಕೊಟ್ಟು ವೈವಾಹಿಕ ಸಂಬಂಧವನ್ನು ಹೊಂದಿದ್ದನ್ನು ಶಾಸನಗಳಿಂದ ತಿಳಿಯಬಹುದಾಗಿದೆ.[1] ಅದೇ ರೀತಿ ಉತ್ತರದಲ್ಲೂ ಸೇವುಣರನ್ನು ತನ್ನ ಹಿಡಿತದಲ್ಲಿಟ್ಟುಕೊಂಡಿದ್ದನು. ತನ್ನ ಸುತ್ತಮುತ್ತಲಿನ ನೆರೆರಾಜ್ಯಗಳ ಮೇಲೆ ತನ್ನದೇ ಆದ ಪ್ರಭಾವವನ್ನು ಹೊಂದಿದ್ದ ಸೋಮೇಶ್ವರನ ಅಂತಿಮ ದಿನಗಳಲ್ಲಿ ಅಂದರೆ ಕ್ರಿ.ಶ. 1254ರಲ್ಲಿ ಒಂದನೇ ಜಾತವರ್ಮನ ಸುಂದರ ಪಾಂಡ್ಯನ ಕೈಲಿ ಸೋಮೇಶ್ವರನು ಸೋಲಬೇಕಾಯಿತು.[2] ಒಬ್ಬ ಉತ್ತಮ ರಾಜನಾಗಿ ಆತ ಅಸೂಯಾಪರವಾದ ನೆರೆಹೊರೆಯ ರಾಜ್ಯ ಮತ್ತು ಸಣ್ಣಪುಟ್ಟ ರಾಜರುಗಳೊಡನೆ ಶಾಂತಿಯುತ ಸಂಬಂಧ ಸ್ಥಾಪಿಸಲು ಪ್ರಯತ್ನಿಸಿದ ಹಾಗೂ ಆಕ್ರಮಣದ ಬೆದರಿಕೆಯುಂಟಾದಾಗ ಹೋರಾಟದ ಮಾರ್ಗಕ್ಕೆ ಇಳಿದಿರುವುದನ್ನು ಕಾಣಬಹುದಾಗಿದೆ.

ಎರಡನೇಯದಾಗಿ, ಒಬ್ಬ ಆಡಳಿತಗಾರನಾಗಿ ಸೋಮೇಶ್ವರ ಗಮನ ಸೆಳೆಯುತ್ತಾನೆ. ಹಿಂದೂ ಸಾಮ್ರಾಜ್ಯದ ಆದರ್ಶಗಳನ್ನು ಆತ ತನ್ನ ದೃಷ್ಟಿಯಲ್ಲಿ ಇರಿಸಿಕೊಂಡಿದ್ದ ಹಾಗೂ ಸಾಮ್ರಾಜ್ಯ ಸ್ಥಾಪನೆಯ ಉದ್ದೇಶವಾದ ಹಿಂದೂಧರ್ಮದ ರಕ್ಷಣೆಗಾಗಿ ಟೊಂಕ ಕಟ್ಟಿನಿಂತ ಸಾಮ್ರಾಟನಾಗಿ ಆತ ಆಡಳಿತದ ಮುಖ್ಯಸ್ಥನಾಗಿದ್ದ. ಆತ ರಾಜಧಾನಿಯಲ್ಲಿ ಕೇಂದ್ರ ಸಚಿವಾಲಯವನ್ನು ಹೊಂದಿದ್ದು ಆತನಿಗೆ ನೆರವು ನೀಡಲು ಮಂತ್ರಿಮಂಡಲವೆಂಬ ಆಪ್ತವಲಯವನ್ನು ಹೊಂದಿದ್ದನು. ಸಾಮ್ರಾಜ್ಯವು ಅನೇಕ ಪ್ರಾಂತ್ಯಗಳಾಗಿ ವಿಭಜಿತವಾಗಿದ್ದು ಪ್ರತಿಯೊಂದು ಪ್ರಾಂತ್ಯವೂ ದಂಡನಾಯಕರುಗಳ ಅಧೀನದಲ್ಲಿತ್ತು. ಆಗಾಗ್ಗೆ ಅರಸನ ಬಂದುಬಳಗದವರು ಪ್ರಾಂತ್ಯಗಳ ರಾಜ್ಯಪಾಲರಾಗಿ ನೇಮಿತರಾಗುತ್ತಿದ್ದು

ದ್ದುಂಟು. ದುರಾಡಳಿತವನ್ನು ತಡೆಯಲು ಅರಸನ ಆಪ್ತ ಸಿಬ್ಬಂದಿಯು ಪ್ರಾಂತ್ಯಗಳಿಗೆ ನಿಯತಕಾಲಿಕವಾಗಿ ಭೇಟಿ ನೀಡುತ್ತಿದ್ದರು. ಹೊಯ್ಸಳ ಕಾಲದಲ್ಲಿ ಸಾಮಾನ್ಯವಾಗಿ ವಿಭಜಿತಗೊಂಡ ಆಡಳಿತದ ಭಾಗಗಳ ಮುಖ್ಯಸ್ಥರ ಸ್ಥಾನಗಳು ಅನುವಂಶಿಕವಾಗಿದ್ದವು. ಅಗ್ರಹಾರ, ಗ್ರಾಮ ಮತ್ತು ಊರುಗಳ ಸ್ಥಳೀಯ ಆಡಳಿತಕ್ಕಾಗಿ ಕ್ರಮವಾಗಿ 'ಮಹಾಜನ' 'ಊರು' ಗ್ರಾಮ ಹಾಗೂ 'ನಾಡು' ಸಭೆಗಳಿದ್ದವು. ಅನೇಕ ಜಾತಿ ಮತ್ತು ವ್ಯಾಪಾರ ಸಂಘಗಳಿದ್ದು ಅವು ವ್ಯಾಪಾರ ಮತ್ತು ವಾಣಿಜ್ಯ ವ್ಯವಹಾರಗಳಿಗೆ ಉತ್ತೇಜನ ನೀಡುತ್ತಿದ್ದವು ಹಾಗೂ ಸಮುದಾಯದ ಕಲ್ಯಾಣವನ್ನು ನೋಡಿಕೊಳ್ಳುತ್ತಿದ್ದವು. ದೇವಾಲಯ ಹಾಗೂ ಮಠಗಳು ಕೂಡ ಆಡಳಿತಾತ್ಮಕ ಸಂಘ ಸಂಸ್ಥೆಗಳಾಗಿದ್ದವು ಹಾಗೂ ವಿದ್ಯೆ ಮತ್ತು ಸಂಸ್ಕೃತಿಯ ಪೀಠಗಳಾಗಿದ್ದವು.[3]

ನ್ಯಾಯಾಂಗದ ಪರಿಪಾಲನೆಯಲ್ಲಿ ರಾಜನಿಗೆ ಪ್ರಮುಖ ಪಾತ್ರವಿದ್ದು ಆತ ಸಾಂಪ್ರದಾಯಿಕ ರೀತಿಯಲ್ಲಿ ಪಂಚಪ್ರಧಾನರ ಸಹಾಯದಿಂದ ವಿವಾದಗಳನ್ನು ಬಗೆಹರಿಸುತ್ತಿದ್ದನು. ಎಲ್ಲಾ ಗಡಿ ವಿವಾದಗಳನ್ನು ರಾಜ ಹಾಗೂ ಆತನ ಮಂತ್ರಿಮಂಡಲ ಬಗೆಹರಿಸುತ್ತಿತ್ತು.

ಸೋಮೇಶ್ವರನ ಕಂದಾಯ ಆಡಳಿತವು ತುಂಬಾ ದಕ್ಷವಾಗಿತ್ತು. ಭೂಕಂದಾಯ ತೆರಿಗೆಯ ಪ್ರಮುಖ ಕಂದಾಯವಾಗಿದ್ದು, ಇದರ ಜೊತೆಗೆ ಇತರೆ ತೆರಿಗೆಗಳು ಇದ್ದು ಅವುಗಳ ಬಗ್ಗೆ ಕೂಲಂಕುಶವಾಗಿ ಕಂದಾಯ ವ್ಯವಸ್ಥೆ ಅಧ್ಯಾಯದಲ್ಲಿ ತಿಳಿಸಲಾಗಿದೆ. ಅಂದಿನ ಕಂದಾಯ ವ್ಯವಸ್ಥೆಯು ಇಂದಿನ ಕಂದಾಯ ಪದ್ಧತಿಗೆ ಬಹಳಷ್ಟು ಸಮನಾಗಿರುವುದನ್ನು ಕಾಣಬಹುದಾಗಿದೆ. ಪ್ರಮುಖ ತೆರಿಗೆಗಳಲ್ಲಿ ಕೆಲವೆಂದರೆ ಆಸ್ತಿ, ವಾಣಿಜ್ಯ, ವೃತ್ತಿ ಮತ್ತು ಉದ್ಯಮ ತೆರಿಗೆಗಳು, ತಲೆ ಗಂದಾಯ, ಮದುವೆತೆರಿಗೆ, ಎತ್ತುಗಳ ಮೇಲಿನ ತೆರಿಗೆ, ಹುಲ್ಲಿನ ತೆರಿಗೆ, ವೈಶ್ಯೆಯರ ಮೇಲೆ ತೆರಿಗೆ, ಹೀಗೆ ಅನೇಕ ರೀತಿಯಾದ ತೆರಿಗೆಗಳು ಇದ್ದು, ಅವುಗಳ ಸಾಮಾನ್ಯ ಜನಕ್ಕೆ ಹೊರೆಯಾಗಿದ್ದರೂ, ಕ್ಷಾಮ ಡಾಮರ ಮತ್ತು ಕಷ್ಟಕಾಲದಲ್ಲಿ ರಾಜನು ಉದಾರವಾಗಿ ತೆರಿಗೆಗಳ ವಿನಾಯಿತಿ ಮತ್ತು ರಿಯಾಯಿತಿಗಳನ್ನು ಮಂಜೂರು ಮಾಡುತ್ತಿದ್ದನು. ಮಗ್ಗದೆರೆ, ಅಳೆಂದರೆ, ಬಲವನ, ಗಾಣದೆರೆ[4], ಒಕ್ಕಲುದೆರೆ ಮುಂತಾದ ತೆರಿಗೆಗಳ ಹೆಸರನ್ನು ಕಾಣಬಹುದಾಗಿದೆ.

ಸೋಮೇಶ್ವರನ ಹಣಕಾಸಿನ ವ್ಯವಸ್ಥೆಯು ದೃಢವಾಗಿತ್ತು. ವಿವಿಧ ನಮೂನೆಯ ಚಿನ್ನದ, ಬೆಳ್ಳಿಯ ಹಾಗೂ ತಾಮ್ರದ ನಾಣ್ಯಗಳು ಚಲಾವಣೆಯಲ್ಲಿದ್ದವು. ವಾಣಿಜ್ಯ ವ್ಯವಹಾರಗಳು ನಗದು

ಪಾವತಿ ಮೂಲಕ ನಡೆಯುತ್ತಿದ್ದಾರೆ. ಅದರ ಜೊತೆಗೆ ವಿನಿಮಯ ವ್ಯವಸ್ಥೆಯೂ ಅಸ್ತಿತ್ವದಲ್ಲಿತ್ತು. ವಿವಿಧ ರಾಜರುಗಳ ಭಾವಚಿತ್ರಗಳು ಹಾಗೂ ಬಿರುದುಗಳನ್ನು ನಾಣ್ಯಗಳ ಮೇಲೆ ಕಾಣಬಹು ದಾಗಿತ್ತು. ಗದ್ಯಾಣ ಅಥವಾ ಪೂಮೇ ಹೆಚ್ಚು ಪ್ರಸಿದ್ಧಿಯನ್ನು ಹೊಂದಿದ್ದ ನಾಣ್ಯವಾಗಿತ್ತು.[5]

ಮೂರನೆಯದಾಗಿ ಸೋಮೇಶ್ವರನ ಕಾಲದ ಸಮಾಜ ಮತ್ತು ಧರ್ಮಗಳು ಮಧ್ಯಕಾಲೀನ ಲಕ್ಷಣಗಳನ್ನು ಹೊಂದಿದ್ದವು. ಸಮಾಜವು ವರ್ಣಾಶ್ರಮ ಧರ್ಮ ಅಥವಾ ಜಾತಿಪದ್ಧತಿಯನ್ನು ಆಧರಿಸಿತ್ತಾದುದರಿಂದ ಸಾಮಾಜಿಕ ಪದ್ಧತಿ ಮತ್ತು ರೀತಿ ನೀತಿಗಳಲ್ಲಿ ಹಾಗೂ ನ್ಯಾಯ ವಿತರಣೆಯಲ್ಲಿ ಅಸಮತೆ ಸ್ಪಷ್ಟವಾಗಿತ್ತು. ಪ್ರತಿ ಜಾತಿಗೂ ಅದರದೇ ಆತ ವೃತ್ತಿ ಇತ್ತು ಮತ್ತು ಕಸುಬು ಹಾಗೂ ವೃತ್ತಿಗಳಿಗೆ ಸಂಬಂಧಿಸಿದಂತೆ ಅದು ಸಂಘ ವ್ಯವಸ್ಥೆಯಡಿ ಬರುತ್ತಿತ್ತು.

ಜಾತಿ ಮತ್ತು ಸಂಪ್ರದಾಯ ಸಂಸ್ಕಾರಗಳಿಗೆ ಸಂಬಂಧಿಸಿದಂತೆ ಧಾರ್ಮಿಕ ಮತ್ತು ಸಾಮಾಜಿಕ ಪದ್ಧತಿಗಳನ್ನು ಕಟ್ಟುನಿಟ್ಟಾಗಿ ಪಾಲಿಸಲಾಗುತ್ತಿತ್ತು. ಹಾಗೂ ಅವುಗಳ ಉಲ್ಲಂಘನೆಯನ್ನು ಉಗ್ರವಾಗಿ ಶಿಕ್ಷಿಸಲಾಗುತ್ತಿತ್ತು. ಸ್ತ್ರೀಯರು ಸ್ವಲ್ಪಮಟ್ಟಿನ ಸ್ವಾತಂತ್ರ್ಯವನ್ನು ಹೊಂದಿದ್ದರು. ಸಂಗೀತ ಮತ್ತು ನಾಟ್ಯಗಳಲ್ಲಿ ಅವರು ನಿಪುಣರಾಗಿದ್ದರು.

ಸೋಮೇಶ್ವರನ ಕಾಲದ ಸಾಮಾಜಿಕ ವ್ಯವಸ್ಥೆಯಲ್ಲಿ 'ಗರುಡರ ಮತ್ತು ಲೆಂಕರ' ಪಾತ್ರ ಪ್ರಧಾನವಾದುದ್ದಾಗಿದೆ. ಕೆಲವು ಆದರ್ಶಗಳನ್ನು ಉಳಿಸುವುದಕ್ಕಾಗಿ ಜನರು ತಮ್ಮ ಜೀವನವನ್ನು ಉದಾರವಾಗಿ ತ್ಯಾಗ ಮಾಡುತ್ತಿದ್ದರು. ಮೋಕ್ಷವನ್ನು ಹೊಂದುವ ಆಸೆಯಿಂದ ರಾಜನಿಗೆ ಶೌರ್ಯ, ರಾಷ್ಟ್ರಪ್ರೇಮ, ಸ್ವಾಮಿನಿಷ್ಠೆಯನ್ನು ತೋರಿಸುವ ದೃಷ್ಟಿಯಿಂದ ಗಂಡನಿಗೆ ನಿಷ್ಠೆಯಾಗಿರುವ ಉದ್ದೇಶ ದಿಂದ ಜನಗಳು ಜೀವಿಸಲು ಬಹಳ ಆಸೆ ಇದ್ದರೂ ಸಂತೋಷದಿಂದ ತಮ್ಮ ಪ್ರಾಣವನ್ನು ತ್ಯಜಿಸುತ್ತಿದ್ದರು.[6] ಆತ್ಮಾರ್ಪಣೆ ಮಾಡಿಕೊಳ್ಳುತ್ತಿದ್ದ ಹೊಯ್ಸಳ ಸದಸ್ಯರ ತಂಡವನ್ನು 'ಗರುಡರು' ಎಂದು ಕರೆಯಲಾಗುತ್ತಿತ್ತು. ಹೊಯ್ಸಳ ಕಾಲದಲ್ಲಿ ಈ ಪದ್ಧತಿ ಅಸ್ತಿತ್ವದಲ್ಲಿತ್ತೆಂಬುದಕ್ಕೆ ಹೊಯ್ಸಳರ ಶಾಸನಗಳು ನಮಗೆ ಸ್ಪಷ್ಟಪುರಾವೆಯನ್ನು ಒದಗಿಸಿವೆ. ಸಂಕ್ಷಿಪ್ತವಾಗಿ ಹೇಳುವುದಾದರೆ ಈ ಗರುಡ ಪಂಥವು ಸಾಮಂತಯೋಧ, ರಾಜ್ಯ ವ್ಯವಸ್ಥೆಯ ನೈಸರ್ಗಿಕ ಬೆಳವಣಿಗೆಯ ಸಿದ್ಧಾಂತ ವನ್ನು ವಿವರಿಸುತ್ತದೆ. ಈ ಸಾಮಂತರ ಧರ್ಮನೀತಿ ತತ್ವಗಳಿಂದ ನಿಸ್ಸಂದೇಹ ನಿಷ್ಠೆ. ಅಂತಸ್ತು ಮತ್ತು ಗೌರವದ ಬಲವಾದ ರಕ್ಷಣೆ ಎಲ್ಲ ಕರ್ತವ್ಯಗಳ ಸಮರ್ಪಕವಾಗಿ ಪೂರ್ಣಗೊಳಿಸು ವಿಕೆ

ಇವುಗಳೂ ಈ ಪಂಥದ ಅವಿಭಾಜ್ಯ ಅಂಗವಾಗಿದ್ದವು.₇ ಈ ಗರುಡಪಂಥವು 13ನೇ ಶತಮಾನದಲ್ಲಿ ಅದರ ಪರಾಕಾಷ್ಟತೆಯ ಮಟ್ಟವನ್ನು ತಲುಪಿತು. ಗರುಡರು ನಿಸ್ಸಂದೇಹವಾಗಿ ಹೊಯ್ಸಳ ರಾಜ ವ್ಯವಸ್ಥೆಯ ಆಧಾರಸ್ಥಂಭವಾಗಿದ್ದರು.

ಧರ್ಮವು ಸಾಮಾಜಿಕ ಜೀವನದ ಪ್ರಧಾನ ಲಕ್ಷಣವಾಗಿತ್ತು ಮತ್ತು ಜನರು ಶ್ರದ್ಧೆಭಕ್ತಿಗಳಿಂದ ಜೀವನ ಸಾಗಿಸುತ್ತಾ ದಾನಧರ್ಮಗಳನ್ನು ಮಾಡುತ್ತಿದ್ದರು. ವೇಶ್ಯಾಪದ್ದತಿಯು ಆಚರಣೆಯಲ್ಲಿತ್ತು. ಜನರು ಭಕ್ತಿಭಾವಗಳಿಂದ ಅನೇಕ ಹಬ್ಬ ಹರಿದಿನಗಳನ್ನು ಆಚರಿಸುತ್ತಿದ್ದರು.

ನಾಲ್ಕನೆಯದಾಗಿ ವೀರಸೋಮೇಶ್ವರನು ಸಾಹಿತ್ಯ ಮತ್ತು ಕಲೆಗಳ ಪೋಷಕನಾಗಿದ್ದನೆಂಬುದು ನಮಗೆ ಕಂಡುಬರುತ್ತದೆ. 'ಸೂಕ್ತಿ ಸುದಾರ್ಣ'ವನ್ನು ಬರೆದ ಕವಿ ಮಲ್ಲಿಕಾರ್ಜುನ ಈತನ ಮಗನಾದ ಕೇಶಿರಾಜನು ಬರೆದ ಕನ್ನಡ ಮೊದಲ ವ್ಯಾಕರಣ ಗ್ರಂಥ 'ಶಬ್ಧಮಣಿದರ್ಪಣ'ಗಳು ಈತನ ಸಾಹಿತ್ಯ ಸೇವೆಗೆ ಸಾಕ್ಷಿಯಾಗಿವೆ.₈ ಕಲಾಭಿಮಾನಿಯಾದ ಸೋಮೇಶ್ವರನ ಹಲವಾರು ದೇವಾಲಯಗಳ ನಿರ್ಮಾಣಕ್ಕೆ ಕಾರಣನಾಗಿದ್ದಾನೆ. ನುಗ್ಗೇಹಳ್ಳಿಯ ಲಕ್ಷ್ಮಿನರಸಿಂಹ, ಜಾವಗಲ್ಲಿನ ಲಕ್ಷ್ಮಿನರಸಿಂಹ, ಗೋವಿಂದಹಳ್ಳಿಯ ಪಂಚಲಿಂಗೇಶ್ವರ ಹೇಗೆ ಇವೇ ಮೊದಲಾದ ದೇವಾಲಯಗಳು ಈತನು ಕಲೆಗೆ ನೀಡಿದ ಪ್ರೋತ್ಸಾಹಕ್ಕೆ ಸಾಕ್ಷಿಯಾಗಿವೆ.₉

ಐದನೆಯದಾಗಿ ವೀರ ಸೋಮೇಶ್ವರನ ಗುಣಶೀಲಗಳು ನಮ್ಮ ಗಮನವನ್ನು ಸೆಳೆಯುತ್ತವೆ. ಈತನ ಅಂತಃಪುರವು ಅನೇಕ ಸ್ತ್ರೀಯರನ್ನು ಒಳಗೊಂಡಿತ್ತಾದರೂ ಆತನ ಪ್ರಧಾನ ಪತ್ನಿಯರು ಮೂವರು ಮಾತ್ರ. ಬಿಜ್ಜಳಮಾಚದೇವಿ, ದೇವಲ ಹಾಗೂ ಸೋಮಲಾ.₁₀ ಸೋಮೇಶ್ವರನು ತನ್ನ ಬಂಧು ಬಳಗದವರನ್ನು ಉದಾರಭಾವದಿಂದ ನೋಡಿಕೊಂಡನು. ಆತ ಸಾಕಷ್ಟು ಸಮಾನವಾಗಿ ನ್ಯಾಯತೀರ್ಮಾನ ಮಾಡುತ್ತಿದ್ದ ಹಾಗೂ ಯಾವುದೇ ಶಾಂತಿಭಂಗವನ್ನು ಸಹಿಸುತ್ತಿರಲಿಲ್ಲ.

ಹೊಯ್ಸಳ ರಾಜರುಗಳ ಆಳ್ವಿಕೆಯಲ್ಲಿ ಸೋಮೇಶ್ವರನ ಆಳ್ವಿಕೆಯು ಅತ್ಯಂತ ದುರಂತಮಯವಾದದ್ದು ಎಂಬ ಡೆರೆಟ್‌ನ ಅಭಿಪ್ರಾಯವನ್ನು ಒಪ್ಪಿಕೊಳ್ಳುವುದು ಕಷ್ಟದ ಮಾತಾಗಿದೆ. ಅವನು ಒಂದನೇ ಜಾತಿವರ್ಮನ್ ಸುಂದರಪಾಂಡ್ಯನ ಕೈನಲ್ಲಿ ಅನುಭವಿಸಿದ ಅಂತಿಮಸೋಲು ಅವನ ಆಳ್ವಿಕೆಯನ್ನು ದುರಂತಮಯವನ್ನಾಗಿಸದು. ತಮಿಳು ದೇಶದ ಕಠಿಣ ಪರಿಸ್ಥಿತಿಗಳ ವಿರುದ್ಧ

ಅಮೋಘವಾಗಿ ಹೋರಾಡಿದನು ಹಾಗೂ ಅಂತಿಮವಾಗಿ ಅಲ್ಲಿನ ಹೊಸ ಮತ್ತು ಹೆಚ್ಚು ಶಕ್ತಿಯುತ ವಾದ ಸೇನೆಗಳಿಂದ ಮುಳುಗಿಹೋದನು. ಅವನ ಆಳ್ವಿಕೆಯು ದುರಂತದ ಒಂದು ಅಂಶವನ್ನು ಹೊಂದಿದೆ. ಆದರೆ ಅದು, ಶೌರತ್ವದ ದುರಂತ ಒಂದು ಕಾಲ್ಪನಿಕ ದುರಂತ. ಸೋಮೇಶ್ವರನ ಆಳ್ವಿಕೆಯು ನಿಜವಾಗಿಯೂ ಸ್ವಲ್ಪವೇ ಇದ್ದ ಸಂಪತ್ತನ್ನು ಪಡೆಯಲು ತಮ್ಮ ಖಡ್ಗಗಳನ್ನು ಜಳಪಿಸುತ್ತಲೇ ಕಾಲ ಕಳೆದ ಒಂದನೇ ನರಸಿಂಹ ಅಥವಾ ಮೂರನೇ ನರಸಿಂಹ ಮತ್ತು ರಾಮನಾಥನ ಆಳ್ವಿಕೆಗಿಂತ ಹೆಚ್ಚು ದುರಂತಮಯವಾಗಿರಲಿಲ್ಲ. ಆದರೆ ಕೆ.ಆರ್.ವೆಂಕಟರಾಮನ್‌ರವರು ಸೋಮೇಶ್ವರನ "ರಾಜತಾಂತ್ರಿಕತೆಯ ಶ್ರೇಷ್ಟ ವ್ಯವಸ್ಥೆ ಮತ್ತು ಮೀರಿಸಲಾಗದ ರಾಜನಿಪುಣತೆ"ಯನ್ನು ಪ್ರಶಂಸಿಸುವುದನ್ನು ಒಪ್ಪಿಕೊಳ್ಳುವುದು ಕಷ್ಟವಾಗುತ್ತದೆ. ತಮಿಳು ದೇಶದ ರಾಜಕೀಯ ಚದುರಂಗ ದಾಟವು ಹೊಯ್ಸಳರ ಸಹಭಾಗತ್ವವನ್ನು ಹೊಂದಿದ್ದರೂ ಯಾವಾಗಲೂ ಹೊಯ್ಸಳರ ಆಸೆ ಯಂತಿರಲಿಲ್ಲ. ತಮಿಳು ರಾಜರ ಆಸೆಬುರುಕ ರಾಜಕೀಯ ಯೋಜನೆಗಳು ಮತ್ತು ಅವರ ಸ್ವಾತಂತ್ರ ಪ್ರೇಮ ರಾಜಕೀಯ ಮೈತ್ರಿಗಳಲ್ಲಿ ಆಗಾಗಿ ಬದಲಾವಣೆಯನ್ನುಂಟು ಮಾಡಿತು. ಸೋಮೇಶ್ವರನು ತಮಿಳು ರಾಜಕೀಯದಲ್ಲಾಗುತ್ತಿದ್ದ ದೋಷಯುಕ್ತವಾದ ಬದಲಾವಣೆಗಳಿಗೆ ಹೊಂದಿಕೊಳ್ಳ ಬೇಕಾಗಿತ್ತು. ಅವನ ಉತ್ಕೃಷ್ಟ ರಾಜತಾಂತ್ರಿಕತೆ ಮತ್ತು ಅಸಾಮಾನ್ಯ ರಾಜನೀತಿಯು ಎಲ್ಲೂ ಕಾಣಿಸಿಕೊಂಡಿಲ್ಲ.

ಈ ರೀತಿಯಾಗಿ ಸೋಮೇಶ್ವರನು ಡೆರೆಟ್‌ರ ಅಸಹಾನುಭೂತೀ ವಿಮರ್ಶೆಯನ್ನಾಗಲೀ ಅಥವಾ ಕೆ.ಆರ್.ವೆಂಕಟರಾಮನ್‌ರವರ ಅಪಾರ ಹೊಗಳಿಕೆಯನ್ನಾಗಲೀ ಪಡೆಯಲು ಅರ್ಹನಲ್ಲ. ಅವನ ಆಳ್ವಿಕೆಯು ಸಾಮ್ರಾಜ್ಯದ ಅಭಿವೃದ್ಧಿಯ ಹಂತದಲ್ಲಿ ನಿರೀಕ್ಷೆಯಂತೆ ಎಲ್ಲಾ ರೀತಿಯ ವೈಭವ ಮತ್ತು ವಿಫಲತೆಯನ್ನು ಹೊಂದಿತ್ತು. ಸಾಧ್ಯವಾದಾಗ ವೈಭವವನ್ನು ಗಳಿಸಿದ ಹೋರಾಡುವ ಸಮಯದಲ್ಲಿ ಹಲವಾರು ಎಡರುತೊಡರುಗಳ ವಿರುದ್ಧ ಹೋರಾಡಿದ ಅಸಾಮಾನ್ಯ ಪ್ರತಿಭೆ ಮತ್ತು ಅಸಾಮಾನ್ಯ ಸಾಮರ್ಥ್ಯವನ್ನು ಹೊಂದಿದ್ದ ಅಸಾಮಾನ್ಯ ಅರಸನಾಗಿ ಶತ್ರುಗಳು ತುಳಿದಾಗ ಅವರಿಗೆ ತಲೆಬಾಗಿದ. ಈ ಅವಧಿಯಲ್ಲಿ ಹೊಯ್ಸಳರು ಎದುರಿಸಬೇಕಾಗಿದ್ದ ತೊಡಕುಗಳಿಗೆ ಎರಡನೇ ವೀರಬಲ್ಲಾಳನಂತಹ ಸಮರ್ಥ ಆಡಳಿತಗಾರನ ನೆರವು ಬೇಕಿತ್ತು. ಆದರೆ ಸೋಮೇಶ್ವರನು ವೀರ ಬಲ್ಲಾಳನಾಗಿರಲಿಲ್ಲ. ಆ ಹಂತಕ್ಕೇರಲು ವೀರಾಗ್ರಣಿಯಾಗಿ ಹೋರಾಡಿದ ಇದಕ್ಕೆ ನಮ್ಮ ಪ್ರಶಂಸೆ ಯನ್ನು ನೀಡಬೇಕು. ಆದರೆ ವಿಫಲನಾದ. ಆದರೂ ಅವನ ಸೋಲು ಒಬ್ಬ ವೀರನ ಸೋಲೇ, ಇದರಲ್ಲಿ ವೀರಸೋಮೇಶ್ವನ ಶ್ರೇಷ್ಟತೆಯು ಅಡಗಿದೆ.॥

# ಗ್ರಂಥಸೂಚಿ
## ಮೂಲ ಆಧಾರಗಳು

**Epigraphy**

- Annual Reports of the Archaeological Survey of India 1887 onwards
- Annual Reports of the Archaeological Department 1906 onwards
- Annual Reports of Indian Epigraphy 1964 onwards
- Annual Reports of South Indian Epigraphy 1887 onwards
- Annual Reports of Epigraphy Madras
- Andhra Pradesh Government Archaeological Series Hyderabad Select Stone Inscriptions
- Corpus Inscriptions Indiacarum Vol. IV (Ed) by Mirashi V.V.Ootacamund 1955
- Desai P.B. (Ed) A Corpus of Inscriptions in the Kannada Districts of Hyderabad State, Hyderabad 1958. Desai P.B. (Ed) Sasana Parichaya.
- Descriptive list of Kannada Stone Inscriptions Examined by Research Institute (Ed) by Annigeri A.M. and Joshi B.R. Dharwar 1961.
- Desai P.B. Jainism in South India and some Jaina Epigraphy – Sholapur, 1957.
- Epigraphia Carnatica Vols 1 to 16 Bangalore 1980 onwards.
- Epigraphica Carnatica (Revised Edition) volumes 1 to 9 Kannada Adhyana University of Mysore 1892 onwards.

**Epigraphia India**

- Elliot Sir. Walter Collection of South Indian Inscriptions Vol. 11 Kannada and Other Dynastics.
- Fleet John Faithfull. Pali Sanskrit and Old Canarese Inscriptions from the Bombay Presidency, etc. London 1878.
- Hyderabad Archaeologial Reports Indian Antiquary Bombay 1872-1923.
- Karnataka Inscriptions Vol. 1 to 3 (Ed) R.S. Panchamukhi Vol. 4, (Ed) A.M. Annigeri Vol.5, (Ed) P.B. Desai Vol.6 (Ed) Gopal, Dharwar, 1941, 1961.
- Kundangar K.G. (Ed) Inscriptions in Northern Karnataka and Kolhapur State, Kolhapur 1939.
- Rangacharya V.A. Topographical List of the Inscription of Southern India Vols. 1 to 3. Madras, 1919.
- South Indian Inscriptions Archaeological Survey of India Vols. III, VII, VIII, IX, XV, XX, 1890 onwards.
- Srikanta Sastry S. Sources of Karnataka History Vol.1 Mysore, 1946.

## ಇಂಗ್ಲಿಷ್ ಪುಸ್ತಕಗಳು

- Appadoraj A. – Economic Conditions in Southern India, Madras, 1936.
- Basavaraja K.R. – History and Culture of Karnataka Dharwar, 1984.
- Bhandarkar R.G. – Early History of the Deccan 3rd Edition, Calcutta, 1928.
- Bulher G. – Indian Palaeography Calcutta, 1959.
- Chidananda Murthy M. – Kannada Sasanagala Samskritika Adhyayana (A.d. 450-1150), Mysore 1966

- Chandrasekhara Sastri – Economic Conditions under the Hoysalas, Half Yearly Journal of the Mysore University Vol. 11, No.2, Mysore, 1928.
- Coelho, William-Hoysalavamsa Bombay, 1950.
- Karmarkar A.P. – Administrative Machinery in Medieval Karnataka QJMS XXX VIII PP. 435-52, Bangalore 1941.
- Krishna Rao M.V. – The Gangas of Talkad, Madras 1936.
- Krishna Rao M.V. and Keshava Bhat M. – Karnataka Itihasa Darshana, Bangalore, 1970.
- Krishna Sastri H. – The Hoysalas in and beyond Mysore. QJMS Vol. II, Madras, 1911.
- Krishna Swamy Aiyangar S. Rajendra – Hindu State in Southern India CH XVIII or Vol. III of the Cambridge History of India Cambridge, 1928.
- Kuppaswamy G.R. – Economic Conditions in Karnataka, Dharwar, 1975.
- Kuppuswamy Aiyangar, G.R. – Kalachuryas of Kalyani and their Times Unpublished Thesis, Mysore University, 1955.
- Leela Shantakumari S. – History of the Agraharas of Karnataka, Madras.
- Mahalingam T.V. – South Indian Polity Madras, 1955.
- Mahalingam T.V. – The Banas in South Indian History JIH for 1951 Trivandrum 1951.
- Mastivenkatesha Aiyangar – Popular Culture in Karnataka, 1937.
- Mugali R.S. – The Heritage of Karnataka, Bangalore, 1946.
- Nanjundayya H.V. and Anantha Krishna Iyet, - The Mysore Tribes and Castes Vol. II, 1928.
- Narasimhamurthy A.V. – The Coins of Karnataka, Mysore 1975.
- Nagaraja Rao C.K. – Pattamahadevi Shanthale, Bangalore.

- Nagaraja Rao C.K. – Veera Ganga Vishnuvardhana, Bangalore, 1992.
- Nilakanta Sastri K.A. – A History of South India Madras, 1955, (Revised Edn), 1965.
- Nilakanta Sastri K.A. – The Cholas (2nd Edn) Madras, 1955.
- Panchamukhi Vidyartna R.S. and Lakshminarayana Rao N – Dynastics of Karnataka Dharwar, 1946.
- Panchmuki, R.S. – Archaeology of Karnataka, Dharawar, 1953.
- Panukkar K.M. – Essential Features of Indian Culture, Bombay, 1964.
- Ramesh K.V. – History of South Kanara, Dharwar, 1970.
- Rice B. Lewis – Mysore and Coorg. Gazetter, Bangalore 1876-78.
- Rice – Mysore Gazateer. West Minister, 1897.
- Seletore B.A. – Ancient Karnataka Vol. I History of Tuluva, Poona, 1963.
- Saletore B.A. – Ancient Indian Political Thought and Institutions, Bombay, 1963.
- Settar S. – The Hoysala Temples, Dharwar, 1992.
- Setter S. – Inviting Death, Dharwar, 1986.
- Sircar D.C. – Studies in the Geography of Ancient and Medieval India, New Delhi.
- Srikantaiya S. – The Hoysala Empire QJMS Vol. VII PP. 292-310 and Vol VIII PP. 61-76, Bangalore 1917.
- Srikantasastry S. – Sources of Karnataka, History Vol. I Mysore, 1940.
- Shivanna K.S. – A Critique of Hoysal Polity, Mysore 1988.
- Sheik Ali B (Ed) – The Hoysala Dynasty, Mysore, 1972.
- Venkataraman, K.R. – The Hoysalas in the Tamil Country.
- Yazdani G. (Ed) – The Early History of Deccan Voes, 1-2, Bombay, 1960.

# ಕನ್ನಡ ಆಧಾರ ಗ್ರಂಥಗಳು


- ಅಣ್ಣಿಗೇರಿ ಎಂ.ಎಂ. ಮತ್ತು ಮೇವುಂಡಿ ಮಲ್ಲಾರಿ - ಶಾಸನ ಸಾಹಿತ್ಯ ಸಂಚಯ, ಧಾರವಾಡ -1956.
- ಅಣ್ಣಿಗೇರಿ ಎಂ.ಎಂ. ಮತ್ತು ಆರ್. ಶೇಷಶಾಸ್ತ್ರಿ- ಕನ್ನಡ ಶಾಸನ ಸಂಗ್ರಹ, ಬೆಂಗಳೂರು-1975.
- ಕರ್ನಾಟಕ ಪರಂಪರೆ - ಸಂ-1 ದಿವಾಕರ್.ಆರ್.ಆರ್. ಮೈಸೂರು ರಾಜ್ಯ ಸರ್ಕಾರ-1970.
- ಕರ್ನಾಟಕ ವಿಷಯ ವಿಶ್ವಕೋಶ – ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ-1977.
- ಡಾ॥ ಕೃಷ್ಣ ಎಂ.ಎಚ್. – ಕನ್ನಡ ನಾಡಿನ ಚರಿತ್ರೆ – 1977 (ಸಂ-3) ಬೆಂಗಳೂರು.
- ಕೃಷ್ಣರಾವ್ ಎಂ.ವಿ. ಮತ್ತು ಕೇಶವ ಭಟ್ಟ – ಕರ್ನಾಟಕ ಇತಿಹಾಸ ದರ್ಶನ – ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ, ಬೆಂಗಳುರು-1970.
- ಚಿದಾನಂದ ಮೂರ್ತಿ ಎಂ. – ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ.
- ಜಯಪ್ಪಗೌಡ ಡಿ.ಎಸ್. – ಕರ್ನಾಟಕದ ಕಡಲಾಚೆಯ ಸಂಪರ್ಕಗಳು ಶುಭೋಧಯ ಪ್ರಕಾಶನ, ಮೈಸೂರು-1983.
- ಜೋಶಿ ಎಸ್.ಬಿ. – ಕನ್ನಡ ನೆಲೆ, ಧಾರವಾಡ-1952.
- ತಿಪ್ಪೇರುದ್ರಸ್ವಾಮಿ ಎಚ್ – ಕರ್ನಾಟಕದ ಸಂಸ್ಕೃತಿ ಸಮೀಕ್ಷೆ, ಮೈಸೂರು -1961.
- ಡಾ.ದೇಸಾಯಿ ಪಾಂಡುರಂಗರಾಯರು - ಶಾಸನ ಪರಿಚಯ, ಧಾರವಾಡ-1956.
- ನರಸಿಂಹಚಾರ್.ಆರ್ - ಶಾಸನ ಪದ್ಯಮಂಜರಿ (ಕ್ರಿ.ಶ. 700-1465) ಬೆಂಗಳೂರು-1923.
- ನೇಮಿಚಂದ್ರ - ಲೀಲಾವತಿ ಪ್ರಬಂಧಮಂ - ಶಾರದಾ ಮಂದಿರ, ಮೈಸೂರು-1966.
- ಪಂಚಮುಖಿ ಆರ್.ಎಸ್. - ಕರ್ನಾಟಕದ ಶಿಲಾ ಶಾಸನಗಳು, ಧಾರವಾಡ-1953.
- ಪಂಚಮುಖಿ ಆರ್.ಎಸ್. – ಕರ್ನಾಟಕ ಹರಿದಾಸ ಸಾಹಿತ್ಯ, ಬೆಂಗಳೂರು- 1952.

- ಪಂಚಮುಖಿ. ಆರ್.ಎಸ್. ಮತ್ತು ಲಕ್ಷ್ಮಿ ನಾರಾಯಣರಾವ್ – ಕರ್ನಾಟಕದ ಅರಸು ಮನೆತನಗಳು ಸಂ–1, ಧಾರವಾಡ – 1946.
- ಮೇವಾಡಿ ಮಲ್ಲಾರಿ – ಕನ್ನಡ ಶಾಸನ ಸಂಗ್ರಹ, ಬೆಂಗಳೂರು – 1975.
- ಮುಗುಳಿ ಆರ್.ಎಸ್ – ಕನ್ನಡ ಸಾಹಿತ್ಯ ಚರಿತ್ರೆ, ಮೈಸೂರು – 1960.
- ರಮೇಶ್ ಕೆ.ವಿ. – ತುಳುನಾಡಿನ ಶಾಸನಗಳೂ – 1978.
- ರಮೇಶ್ ಕೆ.ವಿ. – ಕರ್ನಾಟಕ ಶಾಸನ ಸಂಹಿತೆ, ಬೆಂಗಳೂರು– 1971.
- ರಘುನಾಥ ಭಟ್ಟ ಎಚ್.ಆರ್. (ಸಂ) – ಕರ್ನಾಟಕದ ಶಾಸನಕಲೆ – ಭಾರತೀ ಪ್ರಕಾಶನ, ಮೈಸೂರು–1977.
- ಶಾಮಶಾಸ್ತ್ರಿ ಆರ್. – ಕರ್ನಾಟಕದ ವೀರಗಲ್ಲುಗಳು, ಬೆಂಗಳೂರು–1982.
- ಶ್ರೀಕಂಠಶಾಸ್ತ್ರಿ.ಎಸ್–ಹೊಯ್ಸಳ ವಾಸ್ತುಶಿಲ್ಪ ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ–1965.
- ಶ್ರೀಕಂಠಶಾಸ್ತ್ರಿ ಎಸ್ – ಭಾರತೀಯ ಸಂಸ್ಕೃತಿ, ಮೈಸೂರು 1975.
- ಶ್ರೀನಿವಾಸ ಮೂರ್ತಿ ಎಂ.ಆರ್. – ಭಕ್ತಿ ಭಂಡಾರಿ ಬಸವಣ್ಣನವರು, ಬೆಂಗಳೂರು–1936.
- ಹಿರೇಮಠ ಬಿ.ಆರ್. ಶಾಸನಗಳಲ್ಲಿ ಕರ್ನಾಟಕದ ವರ್ತಕರು ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ–1936.
- ಡಾ. ಹಿರೇಮಠ ಆರ್.ಸಿ. ಮತ್ತು ಪ್ರೊ.ಎಂ.ಎಂ.ಕಲಬುರ್ಗಿ – ಕನ್ನಡ ಶಾಸನ ಸಂಪದ, ಧಾರವಾಡ–1968.

